

# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್. ಪದವಿಯ ನಿಬಂಧ

**ನಿಬಂಧದ ವಿಷಯ**

"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನನೆಲೆಗಳು"

(ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್, ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ- ಈ ಕೃತಿಗಳನ್ನು ಅನುಲಕ್ಷಿಸಿ)


**ಮಾರ್ಗದರ್ಶಕರು**

ಡಾ. ಎಸ್. ಶಾಂಭವಿ.

**ಸಂಶೋಧನಾ ವಿದ್ಯಾರ್ಥಿ**

ಸತೀಶ್. ಎ. ಪಿ.



**ವರ್ಷ**

೨೦೧೧ - ೨೦೧೨





ಎಂ. ವಿ. ಸೀ ಸ್ನಾತಕೋತ್ತರ ಅಧ್ಯಯನ ಕೇಂದ್ರ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಎನ್. ಆರ್. ಕಾಲೋನಿ,

ಬೆಂಗಳೂರು - ೫೬೦ ೦೧೯



# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್. ಪದವಿಯ ನಿಬಂಧ

**ನಿಬಂಧದ ವಿಷಯ**

"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನನೆಲೆಗಳು"

(ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್, ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ- ಈ ಕೃತಿಗಳನ್ನು ಅನುಲಕ್ಷಿಸಿ)

**ಮಾರ್ಗದರ್ಶಕರು**

**ಡಾ. ಎಸ್. ಶಾಂಭವಿ.**

**ಸಂಶೋಧನಾ ವಿದ್ಯಾರ್ಥಿ**

**ಸತೀಶ್. ಎ. ಪಿ.**

**ವರ್ಷ**

**೨೦೧೧ - ೨೦೧೨**

**ಎಂ. ವಿ. ಸೀ ಸ್ನಾತಕೋತ್ತರ ಅಧ್ಯಯನ ಕೇಂದ್ರ**

**ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ**

**ಎನ್. ಆರ್. ಕಾಲೋನಿ,**

**ಬೆಂಗಳೂರು - ೫೬೦ ೦೧೯**



# ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
# ಎಂ. ಫಿಲ್ ಪದವಿಯ ನಿಬಂಧ

## ನಿಬಂಧದ ವಿಷಯ

"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನ ನೆಲೆಗಳು"

**(ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್, ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ ಈ ಕೃತಿಗಳನ್ನು ಅನುಲಕ್ಷಿಸಿ)**

ನೋಂದಣಿ ಸಂಖ್ಯೆ

**BMSBKS – 00515**

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ. ವಿ. ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧ – ೨೦೧೨ ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನ ನೆಲೆಗಳು (ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್, ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ ಈ ಕೃತಿಗಳನ್ನು ಅನುಲಕ್ಷಿಸಿ)"** ಎಂಬ ಶೀರ್ಷಿಕೆಯ ಈ ನಿಬಂಧವನ್ನು **ಡಾ॥ ಎಸ್. ಶಾಂಭವಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

**ಸಂಶೋಧನಾ ವಿದ್ಯಾರ್ಥಿ**

**ಸತೀಶ್. ಎ.ಪಿ.**

Satish AP

ದಿನಾಂಕ : 04/07/12

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಎಂ. ವಿ. ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರ, ಬೆಂಗಳೂರು ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧ - ೨೦೧೨ ನೇ ಸಾಲಿನ ಎಂ. ಫಿಲ್ ಪದವಿಗಾಗಿ **"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನ ನೆಲೆಗಳು (ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್, ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ ಈ ಕೃತಿಗಳನ್ನು ಅನುಲಕ್ಷಿಸಿ)"** ಎಂಬ ಶೀರ್ಷಿಕೆಯ ಈ ನಿಬಂಧವನ್ನು **ಸತೀಶ್. ಎ.ಪಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧವು ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು, ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 04/07/12

ಮಾರ್ಗದರ್ಶಕರು

ಡಾ|| ಎಸ್. ಶಾಂಭವಿ

ಡಾ|| ಎಸ್. ಶಾಂಭವಿ
ಕನ್ನಡ ಉಪನ್ಯಾಸಕಿ
ಶ್ರೀಮತಿ ವಿ.ಹೆಚ್.ಡಿ.ಕೇಂದ್ರಿಯ ಗೃಹ ವಿಜ್ಞಾನ ಕಾಲೇಜು,
ಶೇಷಾದ್ರಿ ರಸ್ತೆ, ಬೆಂಗಳೂರು-01

"ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಅಂಡಮಾನ್: ಅನಾವರಣಗೊಂಡ ಭಿನ್ನ ನೆಲೆಗಳು"

(ಅಲೆಮಾರಿಯ ಅಂಡಮಾನ್, ಅಂಡಮಾನ್ ಕನಸು, ನಿಸರ್ಗ ಕನ್ಯೆ ಅಂಡಮಾನ್,

ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ ಈ ಕೃತಿಗಳನ್ನು ಅನುಲಕ್ಷಿಸಿ)"



## ವಿಷಯಾನುಕ್ರಮಣಿಕೆ

# ಅಧ್ಯಾಯ - ೦೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ:

ಕನ್ನಡ ಸಾಹಿತ್ಯದ ಮಟ್ಟಿಗೆ ಗದ್ಯ ಸಾಹಿತ್ಯದ ಸ್ಥಾನ ವಿಶಿಷ್ಟವಾದುದ್ದು. ಕನ್ನಡ ಸಾಹಿತ್ಯದ ಪ್ರಾರಂಭದ ಕಾಲಘಟ್ಟಗಳನ್ನು ಕೂಲಂಕಶವಾಗಿ ಅವಲೋಕಿಸಿದರೆ ಗದ್ಯ ಸಾಹಿತ್ಯವು ತನ್ನ ಅಭಿವ್ಯಕ್ತಿ ಸಾಮರ್ಥ್ಯವನ್ನು ಪ್ರಕರ್ಷದ ಸ್ಥಿತಿಯಲ್ಲಿ ಹೊರಗೆಡವಿದ್ದ ಕಾಲವದು. ಪದ್ಯವು ನವಿರಾದ ಭಾವನೆಗಳ ಅಭಿವ್ಯಕ್ತಿಗೆ ಮಾಧ್ಯಮವಾದರೆ ಗದ್ಯವು ವಾಸ್ತವವಾಗಿ ಅನುಭವ ಕೇಂದ್ರಿತ ಕಥನ. ಲೇಖಕನ ಪ್ರಜ್ಞೆಯೊಳಗೆ ಅಡಗಿರುವ ಅನುಭವಗಳನ್ನು ಅಭಿವ್ಯಕ್ತಗೊಳಿಸುವ ಪ್ರಧಾನ ವಾಹಕವಾಗಿ ಗದ್ಯಸಾಹಿತ್ಯ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ. ಕನ್ನಡ ಸಾಹಿತ್ಯದ ಉತ್ಕರ್ಷದ ಕಾಲವಾದ ಹತ್ತನೇ ಶತಮಾನದ ಗದ್ಯ ಕೃತಿಯಾದ 'ವಡ್ಡಾರಾಧನೆ' ಕೃತಿಯು ಕನ್ನಡ ಗದ್ಯ ಸಾಹಿತ್ಯದ ಒಳಹೊರಗುಗಳು, ಭಿನ್ನ ಆಯಾಮಗಳನ್ನು ವ್ಯಕ್ತಪಡಿಸಿದೆ. ಇಲ್ಲಿನ ಗದ್ಯಸಾಹಿತ್ಯದ ಕಥನಕ್ರಮವು ಹೆಚ್ಚು ಆಪ್ತತೆಯನ್ನು ಓದುಗರಿಗೆ ತಂದು ಕೊಡುತ್ತದೆ. ಇಲ್ಲಿ ಕಥನ ಕ್ರಮವು ಸಂವೇದನಾ ದೃಷ್ಟಿಯಿಂದ ಕಥನ ಸಾಹಿತ್ಯಕ್ಕೆ ಅತ್ಯಮೂಲ್ಯ ಕೊಡುಗೆಯಾಗಿದೆ

ಅನಂತರದ ಕಾಲಘಟ್ಟವು ಕಾವ್ಯಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟು ಚಂಪೂ ಸಾಹಿತ್ಯ, ರಗಳೆ, ಷಟ್ಪದಿ, ಸಾಂಗತ್ಯ ಹೀಗೆ ನಾನಾ ರೀತಿಯ ಸಾಹಿತ್ಯ ಪ್ರಕಾರಗಳಲ್ಲಿ ಗುರುತಿಸಬಹುದು. ಆ ನಂತರದಲ್ಲಿ "ಹಾಡುಗಬ್ಬ"ಕ್ಕೆ ಹೆಚ್ಚಿನ ಒತ್ತುಕೊಟ್ಟು ಕಾವ್ಯ ಪ್ರಕಾರದಲ್ಲೇ ಹೆಚ್ಚು ಹೆಚ್ಚು ಕೃತಿಗಳು ರಚನೆಯಾದವು. ಮುದ್ದಣನ ಗದ್ಯ ಸಾಹಿತ್ಯ ಹಾಗೂ ಕೆಂಪು ನಾರಾಯಣನ ಮುದ್ರಾಮಂಜೂಷವೂ ಕೂಡ ಗದ್ಯಸಾಹಿತ್ಯದಲ್ಲಿ ತನ್ನ ವಿಶಿಷ್ಟ ಛಾಪನ್ನು ಹೊತ್ತಿವೆ ಎಂದು ಹೇಳಬಹುದು.

ಗದ್ಯಸಾಹಿತ್ಯದ ವಿಶಿಷ್ಟತೆಯನ್ನು ಗುರುತಿಸುತ್ತಾ ನವೋದಯ ಕಾಲಘಟ್ಟಕ್ಕೆ ಮುಂದಡಿಯಿಟ್ಟರೆ ಕಾದಂಬರಿಯ ಪ್ರಕಾರ ಹೆಚ್ಚು ವ್ಯಾಪ್ತಿಯನ್ನು, ಹೆಚ್ಚು ವಿಶಾಲತೆಯನ್ನು ಪಡೆದುಕೊಂಡಿದೆ. ಇಂತಹ ಸಾಹಿತ್ಯದಲ್ಲಿ ಮತ್ತೊಂದು ಹೆಸರಿಸ ಬಹುದಾದ ಸಾಹಿತ್ಯ ಪ್ರಕಾರ "ಪ್ರವಾಸ ಸಾಹಿತ್ಯ."

ಪ್ರವಾಸ ಸಾಹಿತ್ಯವೂ ಕೂಡ ಇತ್ತೀಚೆಗೆ ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತಿರುವ ಸಾಹಿತ್ಯ ಪ್ರಕಾರ. ಮುಂಚಿನ ದಿನಗಳಲ್ಲಿ ಪ್ರವಾಸ ಎನ್ನುವ ಸ್ವ-ಅನುಭವವಾಗಿ ಮಾತ್ರ ಉಳಿದಿತ್ತು. ನಂತರದ ದಿನಮಾನಗಳಲ್ಲಿ ಪ್ರವಾಸ ಸಾಹಿತ್ಯದ ಅನುಭವಗಳು ಸಾಹಿತ್ಯದ ಪರಿಧಿಯೊಳಗೆ ಪ್ರವೇಶ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ನೆಲೆನಿಂತಿತು.

ಮೊದಲಿಗೆ ಪ್ರವಾಸ ಎನ್ನುವುದನ್ನು ನಿರ್ವಚಿಸುವುದಾದರೆ: ಪ್ರವಾಸವೆಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಯಾಂತ್ರೀಕೃತವಾಗಿ ಸ್ಥಾನಾಂತರ ಹೊಂದುವುದಲ್ಲ. ಅದೊಂದು ಭಾವನಾತ್ಮಕ ಪ್ರಕ್ರಿಯೆ. ವ್ಯಕ್ತಿಯ ಪ್ರಜ್ಞಾವಲಯದ ಮೇಲೆ ಪ್ರವಾಸವು ಬೀರುವ ಪ್ರಭಾವ ಹೆಚ್ಚು ಪರಿಣಾಮಕಾರಿಯಾದುದ್ದು. ಪ್ರವಾಸ ಕೈಗೊಳ್ಳುವ ವ್ಯಕ್ತಿಗೆ ಕುತೂಹಲದ ಜೊತೆಗೆ ಸೂಕ್ಷ್ಮ ದೃಷ್ಟಿಕೋನವೂ ಇದ್ದಾಗ ವ್ಯಕ್ತಿಯು ಪ್ರಪಂಚದ ಸ್ಥಳಗಳಲ್ಲಿನ ಅತ್ಯಮೂಲ್ಯ ಘಟನೆಗನ್ನು ತನ್ನ ಮನೋಭೂಮಿಕೆಯಲ್ಲಿ ಸ್ಥಾಪಿಸಿಕೊಳ್ಳಲು ಅನುಕೂಲವಾಗುತ್ತದೆ. ಆದ್ದರಿಂದ ಪ್ರವಾಸಿಯ ಮನೋಸಿದ್ಧತೆಯೂ ಕೂಡ ಇಲ್ಲಿ ಗಮನೀಯ.

ಪ್ರವಾಸ ಎನ್ನುವುದು ಮೂಲತಃ ಒಂದು ಪ್ರಕ್ರಿಯೆ. ಭಾರತೀಯ ಮನಸ್ಸುಗಳು ಪ್ರವಾಸವನ್ನು ಕಲ್ಪಿಸಿಕೊಂಡಿರುವ ಬಗೆಗೂ ಪಾಶ್ಚಾತ್ಯ ಮನಸ್ಸುಗಳು ಈ ಪ್ರವಾಸವನ್ನು ಕಂಡಿರುವ ದೃಷ್ಟಿಕೋನಕ್ಕೂ ವ್ಯತ್ಯಾಸಗಳಿವೆ. ಭಾರತೀಯ ಮನಸ್ಸುಗಳು ಹೆಚ್ಚು ಆಧ್ಯಾತ್ಮಿಕವಾಗಿ ರೂಪುಗೊಂಡಿದ್ದರಿಂದ ಪ್ರವಾಸವನ್ನು ಅವರ ಮನೋಭೂಮಿಕೆಗಳು ಗಮನಿಸಿರುವ ಬಗೆ ಬೇರೆ ರೀತಿಯದ್ದು. ಪ್ರವಾಸ ಮಾಡುವುದು, ಹೊರ ದೇಶಕ್ಕೆ ಹೋಗುವುದು ಒಂದು ಮಹಾಪರಾಧ. ಶಾಸ್ತ್ರಗಳ ಪ್ರಕಾರ ಯಾರಾದರೂ ಪರದೇಶಕ್ಕೆ ಹೋದರೆ ಅಥವಾ ಸಮುದ್ರ ದಾಟಿದರೆ ಅಕ್ಷಮ್ಯ ಅಪರಾಧ ಎನ್ನುವ ಮನೋಭಾವವುಳ್ಳ ಭಾರತೀಯ ಸಂದರ್ಭದಲ್ಲಿ ಪ್ರವಾಸ ಸಾಹಿತ್ಯ ತಾಳಬೇಕಾದ ನಿಲುವು ಯಾವುದು? ಎಂಬುದು ಬಹುಮುಖ್ಯವಾದ ಪ್ರಶ್ನೆ.

'ದೇಶ ನೋಡು' ಅನ್ನುವ ಗಾದೆ ಮಾತು ಸುಮಾರು ೧೮,೧೯, ೨೦ನೆಯ ಶತಮಾನದ ಪ್ರವಾಸಿಗರಿಗೆ ಸರಿಹೊಂದುತ್ತದೆ. ಆಗಲೇ ದೇಶದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಲು ಅಷ್ಟೇ ಅಲ್ಲದೆ ದೇಶ ವಿದೇಶಗಳಿಗೆ ಹೋಗಿ ಬರುವ ಅನುಕೂಲತೆಗಳು ಹೆಚ್ಚಾಗತೊಡಗಿದ್ದವು. ತಾವು ಕಂಡದ್ದನ್ನು ತಮನಗಿಸಿದಂತೆ ದಾಖಲಿಸುವ ಪ್ರವೃತ್ತಿಯೂ ಬೆಳೆಯತೊಡಗಿದ್ದವು. ಪ್ರವಾಸ ಸಾಹಿತ್ಯ ರಚಿಸುವ ಪ್ರೇರಣೆ ಪಾಶ್ವಾತ್ಯರಿಂದ ಬಂದುದು. ಪಾಶ್ಚಾತ್ಯ ಸಾಹಿತ್ಯದಲ್ಲಿರುವಷ್ಟು ಪ್ರವಾಸ ಸಾಹಿತ್ಯ ನಮ್ಮ ಕನ್ನಡದಲ್ಲಿ ಇಲ್ಲ ಎನ್ನುವ ಮಾತು ಹತ್ತು ಹದಿನೈದು ವರ್ಷಗಳ ಹಿಂದಷ್ಟೇ ಇತ್ತು. ಆದರೆ ಇಂದು ಅದೆಷ್ಟು ಹುಲುಸಾಗಿ ಬೆಳೆದಿದೆ ಎಂದರೆ ನಂಬಲಸಾಧ್ಯವಾಗಿದೆ. ಕನ್ನಡ ಪ್ರವಾಸ ಸಾಹಿತ್ಯವನ್ನ ಅಧ್ಯಯನದ ಉದ್ದೇಶದಿಂದ ಪರಿಚಯ ಮಾಡಿಕೊಳ್ಳುವಾಗ ನಮಗೆ ಮೊದಲು ಸಿಗುವುದು ೧೮೯೦ರಲ್ಲಿ ಕರ್ಕಿ ವೆಂಕಟರಮಣ ಶಾಸ್ತ್ರಿಯವರು ರಚಿಸಿದ **"ದಕ್ಷಿಣ ಭಾರತ ಯಾತ್ರೆ"** ಎಂದ ಪ್ರವಾಸ ಪುಸ್ತಕ * ಇದನ್ನು ನಾವು ಗಮನದಲ್ಲಿಟ್ಟುಕೊಂಡು ನೋಡಿದರೆ ಪ್ರವಾಸ ಸಾಹಿತ್ಯಕ್ಕೆ ಈಗ ನೂರಇಪ್ಪತ್ತು ವರ್ಷಗಳಾಯಿತೆಂದು ಸಂತೋಷ ಸಂಭ್ರಮಪಡುವಂತಾಗುತ್ತದೆ.

ಅಂದಿನಿಂದ ಇಲ್ಲಿಯವರೆಗೆ ಪ್ರವಾಸ ಸಾಹಿತ್ಯದ ಪ್ರಯಾಣದಲ್ಲಿ ಕನ್ನಡದ ನಮ್ಮೆಲ್ಲ ಪ್ರವಾಸ ಸಾಹಿತಿಗಳು ನಮ್ಮ ದೇಶದ ಒಳನೋಟಗಳಿಂದ ಹಿಡಿದು ವಿಶ್ವದ ವೈವಿಧ್ಯತೆಗಳನ್ನೆಲ್ಲಾ ಕೃತಿಗಳಲ್ಲಿ ಸೆರೆ ಹಿಡಿದಿದ್ದಾರೆ. ಈ ವರೆಗೆ ಭಾರತ ದೇಶ ಮತ್ತು ವಿದೇಶಗಳನ್ನೊಳಗೊಂಡಂತೆ ೪೦೦ಕ್ಕೂ ಹೆಚ್ಚು ಪ್ರವಾಸ ಕೃತಿಗಳೂ ಬಂದಿವೆ.

ಮೊದ ಮೊದಲು ಪ್ರವಾಸ ಎನ್ನುವುದು ನಮ್ಮಲ್ಲಿ 'ಯಾತ್ರೆ' ಎನ್ನುವ ಅರ್ಥಕ್ಕೆ ಮಾತ್ರ ಸೀಮಿತವಾಗಿತ್ತು. ಅದೂ ತೀರ್ಥಯಾತ್ರೆಯೆಂದು ಪುಣ್ಯಕ್ಷೇತ್ರಗಳಿಗೆ ಹೋಗಿ ದೇವರ ದರ್ಶನ ಮಾಡಿಕೊಂಡು ಬಂದು ಬಿಟ್ಟರೆ ಪುಣ್ಯ ಬರುತ್ತದೆ ಎಂಬ ನಂಬಿಕೆಗೆ ಮಹತ್ವ ಕೊಡುತ್ತ ಅಷ್ಟಕ್ಕೆ ಧನ್ಯತಾ ಭಾವನೆಯನ್ನು ಪಟ್ಟುಕೊಳ್ಳುತ್ತಿದ್ದರು. ಇದನ್ನು ಮೀರಿ ಆನಂದ, ಸುಖ, ಸಂತೋಷ ಪಡಲೆಂದು ಬೇರೆಡೆಗೆ ಹೋಗಬೇಕೆನ್ನುವ ಮನೋಭಾವನೆಯೇ ಇರಲಿಲ್ಲ. ಇನ್ನು ಭಾರತ ದೇಶದಾಚೆಗೆ ಹೋಗಬೇಕೆನ್ನುವ ಕಲ್ಪನೆಯಂತೂ ದೂರವೇ ಉಳಿಯಿತು. ಆದರೂ ಇಂತಹ ಕೆಲವು ಸಂದರ್ಭಗಳಲ್ಲಿ ಸ್ವಲ್ಪ ಜ್ಞಾನ ಇದ್ದವರು ಸಮುದ್ರ ದಾಟಿ ಬೇರೆ ನೆಲೆಗೆ ಹೋಗಿ ಅಲ್ಲಿಯವರೊಂದಿಗೆ ಬೆರೆತುಕೊಂಡಿದ್ದಾರೆಂದರೆ ಅಥವಾ ಅಲ್ಲಿಯ ಭಾಷೆ, ಊಟ ತಿಂಡಿ ತಿನಿಸು, ಬಟ್ಟೆ ಬರೆ ಮುಂತಾದ ಸಂಸ್ಕೃತಿಗಳೊಂದಿಗೆ ಸಂಪರ್ಕಿಸಿದ್ದೇ ಆದರೆ ಅವರು ಅಪವಿತ್ರರಾಗಿ ಬಿಡುತ್ತಾರೆ ಎನ್ನುವ ಕಲ್ಪನೆಯೂ ಇತ್ತು. ಹೀಗಾಗಿ ವಿದೇಶಕ್ಕೆ ಹೋಗುವುದೇ ಅಪರಾಧವೆಂದಾಗುತ್ತಿತ್ತು. ಇಷ್ಟೆಲ್ಲ ಗೊತ್ತಿದ್ದೂ ವಿದೇಶಕ್ಕೆ ಹೋಗಿ ಬಂದಿದ್ದಾರೆ ಎಂದಾದರೆ ಇಲ್ಲಿ ಅವರನ್ನು ಮನೆ ಒಳಗಡೆ ಸೇರಿಸುತ್ತಿರಲಿಲ್ಲ. ಆತ ಸಮುದ್ರ ದಾಟಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತಿತ್ತು. ಅವನನ್ನು ಮತ್ತೆ ಶುದ್ಧೀಕರಿಸಲು ಪೂಜೆ ಪುನಸ್ಕಾರ ಮಂತ್ರ ತಂತ್ರಗಳಿಗೆಲ್ಲ ಒಡ್ಡುತ್ತಿದ್ದರು.

ಸುಮಾರು ೬೦-೭೦ರ ದಶಕದ ನಂತರ ಎಲ್ಲ ಜನಸಾಮಾನ್ಯರ ಚಟುವಟಿಕೆಗಳಲ್ಲಿ ಒಂದಲ್ಲ ಒಂದು ರೀತಿಯಿಂದ ಸಾಕಷ್ಟು ಪರಿವರ್ತನೆಗಳಾಗ ತೊಡಗಿದವೆಂದೇ ಹೇಳಬಹುದು. ಬೌದ್ಧಿಕ ವಿಕಾಸವೇ ಅವರವರ ಪ್ರಶ್ನೆ ಉತ್ತರಗಳ ಹುಡುಕಾಟದ ಸ್ವರೂಪದಲ್ಲಿ ತೊಡಗಿಕೊಂಡಿತು. ಇಂತಹ ಅನೇಕ ಸಂದರ್ಭದಲ್ಲಿ ಕೆಲವು ಜನರಾದರೂ ಪ್ರವಾಸ ಮಾಡಬೇಕೆನ್ನುವ, ಅದರಿಂದ ಸಿಗುವ ಆನಂದ ಅನುಭವಗಳನ್ನು ಪಡೆಯಬೇಕೆನ್ನುವ ವಿಶಾಲ ಮನೋಧರ್ಮವನ್ನು ಬೆಳೆಸಿಕೊಂಡರು. ೯೦ರ ದಶಕದಲ್ಲಿಯಂತೂ ವಿದೇಶಗಳಿಗೆ ಪ್ರವಾಸಾರ್ಥಿಗಳಾಗಿ ಹೋಗಲು ಸಾವಿರಾರು ರೂಪಾಯಿಗಳು ಖರ್ಚು ಮಾಡಿ ಅನುಮತಿ ಪತ್ರಕ್ಕಾಗಿ(ವೀಸಾ) ಆಯಾ ದೇಶಗಳ ರಾಯಭಾರಿ ಕಚೇರಿಗಳ ಮುಂದೆ ಉದ್ದನೆಯ ಸಾಲಿನಲ್ಲಿ ನಿಂತವರನ್ನು ಕಾಣಬಹುದು. ಇದರಿಂದ ವಿದೇಶಗಳಿಗೆ ಹೋಗುವ ಕಲ್ಪನೆ ಪರಿವರ್ತನೆಯಾಗುತ್ತಿದೆ ಎಂದು ಸ್ಪಷ್ಟವಾಗಿ ಕಂಡು ಬರುತ್ತದೆ. ಅಂದಿನ ಸಂಪ್ರದಾಯಗಳನ್ನು ದಾಟಿ ಈಗ ವಿದೇಶಗಳಲ್ಲಿ ಅಧ್ಯಯನಕ್ಕೆಂದೋ, ಪ್ರವಾಸಕ್ಕೆಂದೋ

ಸುತ್ತಾಡತೊಡಗಿದ್ದಾರೆ. ಕೆಲವೇ ಕೆಲವರು, ಸಾಹಿತ್ಯ ಪ್ರಿಯರು ಲೇಖಕರು ತಮಗಾದ ಅನೇಕ ಅನುಭವಗಳನ್ನು ಪ್ರಯೋಜನೆಗಳನ್ನು ಕೃತಿಗಳಲ್ಲಿ ದಾಖಲಿಸತೊಡಗಿದರು. ಸುತ್ತ ಮುತ್ತಲಿನ ಜಗತ್ತನ್ನು ಪರಿಚಯಿಸಿಕೊಡುತ್ತ ನಮ್ಮನ್ನು ಬೆರಗಾಗಿಸಿದ್ದಾರೆ.

ಪ್ರವಾಸ ಎಂದರೇನು? ಎಂಬುದರ ಸರಳವಾದ ಪ್ರಶ್ನೆಯಾದರು ಈ ಬಗ್ಗೆ ಹೆಚ್ಚಿಗೆ ಚಿಂತನೆ ನಡೆದಿಲ್ಲ. ಸ್ಥೂಲವಾಗಿ ಎನ್.ಎಸ್. ತಾರಾನಾಥರ ಮಾತಿನಲ್ಲಿ ಹೇಳುವುದಾದರೆ “ಒಬ್ಬ ವ್ಯಕ್ತಿ ತನ್ನದಾದಂತಹ ಇನ್ನೊಂದು ಊರು ಅಥವಾ ಜಾಗವನ್ನು ಬಿಟ್ಟು ತನ್ನದಲ್ಲಂತಹ ಇನ್ನೊಂದು ಜಾಗಕ್ಕೆ ಹೋಗಿ ಆ ಪ್ರದೇಶವನ್ನು ಸುತ್ತಿ ಬಂದು, ಆ ಹೊಸ ಜಾಗದಲ್ಲಿ ಆದಂತಹ ಅನುಭವಗಳನ್ನು ಬಣ್ಣಿಸಿದ, ಅಲ್ಲಿ ನೋಡಿದಂತಹ ಪ್ರೇಕ್ಷಣೀಯ ಸ್ಥಳಗಳನ್ನು ವರ್ಣಿಸಿದ, ಅಲ್ಲಿನ ಜನರ ರೀತಿ–ನೀತಿ ಜೀವನ ವಿಧಾನಗಳನ್ನು ವಿವರಿಸಿದ ಸಾಹಿತ್ಯವನ್ನು ಸ್ಥೂಲವಾಗಿ ಪ್ರವಾಸ ಸಾಹಿತ್ಯವೆಂದು ಕರೆಯಬಹುದು”.

ತಾವು ಕಂಡದ್ದನ್ನೂ, ಕೇಳಿದ್ದನ್ನೂ, ತಿಳಿದದ್ದನ್ನೂ, ವಿಫುಲವಾಗಿ ಟಿಪ್ಪಣಿ ಮಾಡಿಕೊಂಡು ಬಂದರು. ಚಿತ್ರ, ನಾಣ್ಯ ಇತ್ಯಾದಿ ಎಲ್ಲವನ್ನೂ ಹೊತ್ತು ತಂದರು. ಆ ಟಿಪ್ಪಣಿ ಎಲ್ಲವೂ ಶರ್ಮಾಜೀ ಅವರ ಹಸ್ತಸ್ಪರ್ಶದಿಂದಾಗಿ. ಎದ್ದು ಕಾಣುವ ಅಂಶ ಅವರ ಸರಳತೆ, ವಿಷಯ ತಿಳಿಯುವ ಕುತೂಹಲ; ತಿಳಿದುದನ್ನು ನಮಗೆ ಹೇಳುವ ಹಂಬಲ. ಸಾಹಿತ್ಯ ವಿದ್ವಾಂಸರು ತಂತ್ರದೃಷ್ಟಿಯಿಂದ ಅಲ್ಲಿ ಇಲ್ಲಿ ಓರೆಕೋರೆಗಳನ್ನು ಗುರುತಿಸಬಹುದು–ನ್ಯಾಯವೇ. ಆದರೆ ಈ ಕೃತಿಗಳ ಹಿಂದೆ ಕೆಲಸ ಮಾಡುತ್ತಿರುವ ಪ್ರಾಮಾಣಿಕ ಮನಸ್ಸನ್ನು ಅಲ್ಲಗಳೆಯುವಂತಿಲ್ಲ. ಕನ್ನಡದಲ್ಲಿ ಪ್ರವಾಸ ಸಾಹಿತ್ಯವನ್ನು ಗುಣವರ್ಗದ ಅನುಸಾರ ಮೂರು ರೀತಿ ವರ್ಗೀಕರಣ ಮಾಡಿಕೊಂಡಿದ್ದೇನೆ. ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಮೌಲ್ಯಗಳಿಂದ ಕೂಡಿದ ಪ್ರವಾಸ ಕಥನಗಳು; ಸಾಮಾಜಿಕ ವಿವರಗಳಿಂದ ಕೂಡಿದ ಪ್ರವಾಸ ಕಥನಗಳು; ಸಾಮಾನ್ಯ ಪ್ರವಾಸ ಕಥನಗಳು. ಇವುಗಳನ್ನು ನಾನು ಇಡಿಯಾಗಿ ಪ್ರವಾಸ ಸಾಹಿತ್ಯವನ್ನು ಕುರಿತಾದ ಚರ್ಚೆಗೆ ಮೂಲಭೂತವಾಗಿ ಈ ಮೂರು ಅಂಶಗಳನ್ನು ಕೇಂದ್ರವಾಗಿ ಇಟ್ಟುಕೊಂಡಿದ್ದೇನೆ.

ಪ್ರವಾಸ ಕಥನಗಳು ಸಾಮಾನ್ಯವಾಗಿ ಗದ್ಯರೂಪದಲ್ಲಿ, ನಿರೂಪಣ ಶೈಲಿಯಲ್ಲಿ ಇರುತ್ತವೆ ಎಂದು ಈ ಹಿಂದೆ ಹೇಳಿದೆ. ಆತ್ಮವೃತ್ತಾಂತ ‘ನಾನು’ ಎಂಬ ಗದ್ಯ ನಿರೂಪಣ ಶೈಲಿಯನ್ನು ತೊರೆದು ಬೇರೆ ರೂಪಗಳಲ್ಲಿ ಕೂಡ ಪ್ರವಾಸ ಕಥನಗಳನ್ನು ಪ್ರಕಟಿಸಿರುವುದುಂಟು. ಅಂಥವುಗಳಲ್ಲಿ ದಿನಚರಿ ರೂಪದ್ದು ವಿಶಿಷ್ಟವಾಗಿದೆ. ಈ ದಿಸೆಯಲ್ಲಿ ಗೋಕಾಕರು ಮೊದಲಿಗರು ಎನ್ನಬಹುದು. ೧೯೩೭ರಲ್ಲಿ ಪ್ರಕಟವಾದ ಅವರ ‘ಸಮುದ್ರಾಚೆಯಿಂದ’ ದಿನಚರಿ ಹಾಗೂ ಪತ್ರರೂಪದ ಪ್ರವಾಸ ಸಾಹಿತ್ಯ ನೆಲಸಿದ ಜಾಗದಲ್ಲಿ ಅನುಭವಗಳನ್ನು ಕರಗಲು ಎಡೆಗೊಡದೆ ಅಂದಂದೇ ಬರೆದಿರುವ ಕ್ರಮವಿದ್ದು. ಇದು “ಸ್ಥಿರ ಮುಹೂರ್ತದಲ್ಲಿ ರಚಿತವಾದ ಕೃತಿ”

ದಿನಚರಿರೂಪದ ಪ್ರವಾಸ ಕಥನದ ಒಂದು ವೈಶಿಷ್ಟ್ಯವೆಂದರೆ ಅದರಲ್ಲಿ ಸೂಕ್ಷ್ಮವಾದ ವಿವರಗಳಿರುತ್ತವೆ. ಜೊತೆಗೆ ಅನವಶ್ಯಕವಾದವೂ ಇರುತ್ತವೆ. ಗೋಕಾಕರ ಕೃತಿಯಲ್ಲಿ ಮಿಸೆಸ್ ಸಿಂಪ್ಸನ್‌ಗಾಗಿ ರಾಜ್ಯತ್ಯಾಗ ಮಾಡಿದ ವಿವರ ಅನವಶ್ಯಕವಾಗಿ ವಿಸ್ತಾರತೆ ಪಡೆದುಕೊಂಡಿದೆ. ಕ್ಷೇತ್ರಸಾಹಿತ್ಯಕ್ಕೂ , ಕ್ಷೇತ್ರ ಸಾಹಿತ್ಯದಲ್ಲಿ ನಿರ್ದಿಷ್ಟ ಕ್ಷೇತ್ರದ ಸಕಲ ವಿವರಗಳನ್ನು ತುಂಬುವ ಪ್ರಯತ್ನವಿರುತ್ತದೆ; ಆ ಕ್ಷೇತ್ರದ ಐತಿಹಾಸಿಕ ಸಾಂಸ್ಕೃತಿಕ ಹಿನ್ನೆಲೆ, ಪ್ರಾಮುಖ್ಯಗಳನ್ನು ವಿವರಿಸಿರುತ್ತದೆ. ಪ್ರವಾಸ ಸಾಹಿತ್ಯದಲ್ಲಿ ಕಂಡುಬರುವ ಲೇಖಕನ ಅನುಭವಗಳು ಇಲ್ಲಿ ಮರೆಯಾಗಿರುತ್ತವೆ. ಕ್ಷೇತ್ರಸಾಹಿತ್ಯ ಹಲವು ಸಂದರ್ಭಗಳಲ್ಲಿ ಪ್ರವಾಸಿಯ ಮಾರ್ಗದರ್ಶಿಯಾಗಿರುತ್ತವೆ. ಜೊತೆಗೆ ಪ್ರವಾಸ ಸಾಹಿತ್ಯದಲ್ಲಿ ನಿರೀಕ್ಷಿಸುವು ಮಟ್ಟಿಗಿನ ಸಾಹಿತ್ಯಿಕ ಸೊಗಡನ್ನು ಕ್ಷೇತ್ರ ಸಾಹಿತ್ಯದಲ್ಲಿ ಓದುಗ ನಿರೀಕ್ಷಿಸುವುದಿಲ್ಲ.

ಪ್ರವಾಸಿಗನಿಗೆ ಎದುರಾಗುವ ವ್ಯಕ್ತಿಗಳು. ಆತನ ಕಣ್ಮುಂದೆ ಸುಳಿಯುವ ದೃಶ್ಯಗಳು-ಋತು ಪರಿವರ್ತನೆ ಆತನ ಭಾಷಾ ಸೌಕರ್ಯ ಮತ್ತು ತಂಗುವ ಅವಧಿಗಳನ್ನು ಪ್ರವಾಸದ ಯಶಸ್ಸು ಅವಲಂಬಿಸಿರುತ್ತದೆ. ಪ್ರವಾಸಿಗನಿಗೆ ಪ್ರವಾಸದ ಯಶಸ್ಸು ದೊರೆಯಲು ತಾಳ್ಮೆ ಮತ್ತು ಕಷ್ಟ ಸಹಿಷ್ಣುತೆಗಳು ಕೂಡ ಇರಬೇಕು. ಅದರಲ್ಲಿ ಯಶಸ್ಸು ದೊರೆಯುತ್ತದೆ. ಒಂದು ಪ್ರವಾಸಕಥನ ಯಶಸ್ವಿಯಾಗ ಬೇಕಾದರೆ ಅದರಲ್ಲಿ ಅಂಕಿ-ಅಂಶದ ವಿವರಗಳಿಗಿಂತ ಹೃದಯ ತಟ್ಟುವ ಸನ್ನಿವೇಶಗಳು ಚಿಟ್ಟೆ ಕತೆಗಳು (anecdotes)ಇರಬೇಕು.

ಇಂಥ ಚಿಕ್ಕ ಸ್ವರೂಪ ಚಿಕ್ಕ ಸಂದರ್ಭಗಳು ನಿರೂಪಣೆಯನ್ನು ಲವಲವಿಕೆಗೊಳಿಸುತ್ತದೆ. ಪ್ರವಾಸ ಕಥನದುದ್ದಕ್ಕೂ ವಸ್ತು, ವ್ಯಕ್ತಿಗಳು ಹಾಯುತ್ತಾ ಹೋಗುತ್ತಾರೆ. ಪ್ರವಾಸ ಕಥಕನ ತಾನು ಕಂಡ ವಸ್ತು, ಸಂದರ್ಭ, ಸ್ಥಳಗಳನ್ನು ವಸ್ತುನಿಷ್ಠತೆಯಿಂದಲೇ ನಿರೂಪಿಸಬೇಕು; ಆದರೆ ಅವನ್ನು ಕಂಡು ತಾನು 'ವ್ಯಕ್ತಿ; ಯಾಗಿರುವುದರಿಂದ ವ್ಯಕ್ತಿನಿಷ್ಠತೆ ಅದರಲ್ಲಿ ಬೆರೆತುಕೊಳ್ಳುತ್ತದೆ. ಪ್ರವಾಸಕಥಕನಿಗೆ ಸ್ಮೃತಿಶಕ್ತಿ, ನಿರೂಪಣಶಕ್ತಿ ಭಾಷಾ ಶಕ್ತಿ ಪ್ರಾಮಾಣಿತೆಗಳಿದ್ದಲ್ಲಿ ಆತನ ಕೃತಿ ಯಶಸ್ವಿಯಾಗುತ್ತದೆ.

ಪ್ರವಾಸ ಕಥನದಲ್ಲಿ ಒಂದು ನಿರ್ದಿಷ್ಟವಾದ ಪ್ರದೇಶ-ವಸ್ತು, ನಿರ್ದಿಷ್ಟವಾದ ಕಾಲ ಮತ್ತು ನಿರ್ದಿಷ್ಟವಾದ ವಿವರಗಳಿರುತ್ತವೆ. ಅವನ್ನು ಪ್ರವಾಸಕಥಕನೇನೂ ಸೃಷ್ಟಿಸಬೇಕಾಗಿಲ್ಲ. ತಾನು ಕಥನದಲ್ಲಿ ಎಲ್ಲೂ ಲೇಖಕನ ಕಲ್ಪನೆ ಅರಳುವುದಿಲ್ಲ(Blossoming of imaagination); ಆತನ ವರ್ಣನ ಕಲೆ, ನಿರೂಪಣ ವೈಖರಿ (Discriptive) ಮಾತ್ರ ಎದ್ದು ಕಾಣುತ್ತದೆ. ಸೃಜನಶೀಲತೆಗೆ ಕಿಂಚಿತ್ತೂ ಅವಕಾಶವಿಲ್ಲದ ಈ ಪ್ರಕಾರವನ್ನು ಹೇಗೆ ಸೃಜನಶೀಲ ಪ್ರಕಾರವೆಂದು ಕರೆಯುವುದು? 'ಕಾಂಗರೊ', ಮಾರ್ನಿಂಗ್ಸ್ ಇನ್ ಮೆಕ್ಸಿಕೋ',, 'ಅಮೆರಿಕದಲ್ಲಿ ಗೊರೂರು', ಇಂಥ ಕೃತಿಗಳಲ್ಲಿ ನಡೆದುದನ್ನು ಚೆನ್ನಾಗಿ ನಿರೂಪಿಸುವ ಕ್ರಮವನ್ನು ಮಾತ್ರ ಕಾಣುತ್ತೇವೆ. ಪ್ರವಾಸ ಕಥನದಲ್ಲಿ

ಅಪರಿಚಿತ ವ್ಯಕ್ತಿಯ ವೈಶಿಷ್ಟ್ಯವನ್ನೋ, ಕಂಡ ಪ್ರದೇಶವನ್ನೋ ಆಪ್ತವಾಗಿ ವರ್ಣಿಸುವ ಅವಕಾಶವಿರುತ್ತದೆ. ಹೊಸದಾಗಿ ಏನನ್ನಾದರೂ ಸೃಷ್ಟಿಸುವ ಅವಕಾಶವಿರುವುದಿಲ್ಲ.

ಕನ್ನಡದಲ್ಲಿ ಬಂದಿರುವ ಪ್ರವಾಸಕಥನಗಳನ್ನೇ ಗಮನಿಸಿದರೆ ಅದರಲ್ಲಿ ಆದ್ದರಿಂದಲೇ ಒಬ್ಬ ಸಾಹಿತಿ ಬರೆದ ಪ್ರವಾಸ ಕಥನದ ನಿರೂಪಣೆ ಸಾಮಾನ್ಯವಾಗಿ ನಮಗೆ ಆಪ್ತ, ಆಕರ್ಷಣವೆನಿಸುವಂತೆ ಇತರರದು ಎನಿಸುವುದಿಲ್ಲ.

ಪ್ರವಾಸ ಸಾಹಿತ್ಯ ಅನೇಕ ದೃಷ್ಟಿಗಳಿಂದ ಉಪಯುಕ್ತ. ಇದನ್ನೋದುವುದರಿಂದ ನಮ್ಮ ತಿಳುವಳಿಕೆ ಹೆಚ್ಚುತ್ತದೆ; ಮನಸ್ಸು ವಿಶಾಲಗೊಳ್ಳುತ್ತದೆ; ಅನುಭವ ಇಮ್ಮಡಿಸುತ್ತದೆ; ವಿವಿಧ ದೇಶಗಳ, ಜನಾಂಗಗಳ ನೀತಿ ನಡವಳಿಕೆಗಳ ಪರಿಚಯವಾಗುತ್ತದೆ. ನಾವು ಕಲಿತದ್ದೇನು, ಕಲಿಯದಿರುವುದೇನು ಎಂಬುದೂ ಕೆಲವು ಸಂದರ್ಭಗಳಲ್ಲಿ ಸ್ಪಷ್ಟಗೊಳ್ಳಬಹುದು. ಪ್ರವಾಸ ಸಾಹಿತ್ಯದ ಮೂಲಕ ಬೇರೆ ಬೇರೆ ದೇಶ, ಜನಾಂಗಗಳ ಸಮಕಾಲಿನ ಚಿತ್ರ ದೊರೆಯುತ್ತದೆ. ಅಮೆರಿಕ ದೇಶದ ಇಂದಿನ ರೀತಿ-ನೀತಿಗಳನ್ನು, ತಾಂತ್ರಿಕ ವಿದ್ಯೆಯಲ್ಲಿ ಅದು ಪಡೆದಿರುವ ಪರಿಣಿತಿಯನ್ನು ಆ ದೇಶದ ಪ್ರವಾಸ ಕಥನಗಳನ್ನು ಓದುವುದರ ಮೂಲಕ ಅರಿಯಬಹುದು. ಹಾಗೆಯೇ ನಾವು ಹೋಗಬೇಕಾದ ಪ್ರಗತಿಯ ಹಾದಿ ಯಾವುದು, ಸಾಧಿಸಬೇಕಾದದ್ದು ಏನು ಎಂಬುದು ಗೊತ್ತಾಗುತ್ತದೆ. ನಮ್ಮ ವಿಜ್ಞಾನ, ಸಮಾಜ, ಸಂಸ್ಕೃತಿ, ರಾಜಕೀಯ ಸಾಹಿತ್ಯ ಕ್ಷೇತ್ರಗಳಲ್ಲಿರುವ ಅರೆ-ಕೊರೆಗಳ ಚಿತ್ರವೂ ಪ್ರವಾಸ ಸಾಹಿತ್ಯದ ಓದುವಿಕೆಯಿಂದ ಲಭ್ಯವಾಗಬಹುದು. ಇದೆಲ್ಲಕ್ಕಿಂತ ಪ್ರವಾಸ ಸಾಹಿತ್ಯ ನಾಳಿಗೊಂದು ದಾಖಲೆಯಾಗುತ್ತದೆ; ಅದನ್ನು ಓದುವುದರಿಂದ ಜ್ಞಾನವೃದ್ಧಿಯಾಗುತ್ತದೆ ಎಂಬುಂದಂತೂ ದಿಟ. ಈ ರೀತಿ ಹಂಚಿಕೊಳ್ಳೋ ವಿಧಾನದಲ್ಲೇ ಪ್ರವಾಸ ಸಾಹಿತ್ಯ ಹುಟ್ಟಿದೆ. ಇದನ್ನ ಎಷ್ಟು ಸೊಗಸಾಗಿ ನಿರೂಪಿಸುತ್ತಾರೆ. ಲಿಖಿತ ಪ್ರವಾಸ ಸಾಹಿತ್ಯ ಕೃತಿಗಳಿಗಿಂತ ಈ ಅಲಿಖಿತ ಪ್ರವಾಸ ಕಥನ ಹೆಚ್ಚು ಸ್ವಾರಸ್ಯದ್ದಾಗಿರುತ್ತದೆ.

ಒಟ್ಟಾರೆಯಾಗಿ ಪ್ರವಾಸ ಕೃತಿಗಳನ್ನು ಅಧ್ಯಯನ ಮಾಡಿದಾಗ ಅವುಗಳನ್ನು ಸ್ಥೂಲವಾಗಿ ಮೂರು ಗುಂಪು ಮಾಡಬಹುದು. ಮೊದಲನೆಯದು ವಿವರಗಳ ಮಟ್ಟದಲ್ಲಿಯೇ ನಿಲ್ಲುವಂಥವು. ಮೊದಲನೆಯ ರೀತಿಯ ಪ್ರವಾಸ ಕೃತಿ ನಯಾಗರಕ್ಕೆ ಹೋದ ವಿವರ, ಅಲ್ಲಿಯ ಅನುಕೂಲ, ಅನಾನುಕೂಲಗಳು ಇತ್ಯಾದಿ ವಿವರಗಳನ್ನು ಎರಡನೆಯ ಬಗೆಯ ಪ್ರವಾಸ ಕೃತಿ ಈ ವಿವರಗಳ ಜೊತೆಗೆ ಮೂರನೆಯ ರೀತಿಯ ಪ್ರವಾಸ ಸಾಹಿತ್ಯವೆಂದರೆ-ಅನುಭವ ಕಥನ. ಇದು ಕೇವಲ ವಿವರಗಳ ನಿರೂಪಣೆಯಲ್ಲ ಅಥವಾ ಮಾಹಿತಿಗಳ ದಾಖಲೆಯಲ್ಲ. ಒಂದು ವ್ಯಕ್ತಿತ್ವದ ಪರಿಧಿಯೊಳಗೆ ಬಂದ ಅನುಭವಗಳ ಪುನಃ ಸೃಷ್ಟಿ ಇಲ್ಲಿರುತ್ತದೆ. ಪ್ರವಾಸ ಕೃತಿಗಳ ಹಿಂದೆ ಒಂದು ವ್ಯಕ್ತಿತ್ವವಿರುವ ಸಾಧ್ಯತೆ ಕಡಿಮೆ. ಅಲ್ಲಿ ಎಲ್ಲರ ಅನುಭವವೂ ಒಂದೇ ಬಗೆಯದಾಗಿರುತ್ತದೆ. ಈಗಾಗಲೇ ಪ್ರಸಿದ್ಧವಾಗಿದ್ದು, ನಿರೀಕ್ಷೆಯ ಮೂಲಕವೇ ಅನುಭವ ಪಡೆಯುವ ಕ್ರಮವಿರುತ್ತದೆ.

ಕೆಲವು ದಿನಗಳ ಮಟ್ಟಿಗೆ ಹೋಗಿ ಬರುವವರು ಬರೆಯುವ ಪ್ರವಾಸ ಸಾಹಿತ್ಯಕ್ಕೂ, ಒಂದು ದೇಶದಲ್ಲೇ ಹಲವಾರು ತಿಂಗಳುಗಳಿದ್ದು ಬರೆಯುವ ಪ್ರವಾಸ ಕಥನಕ್ಕೂ ಸಾಕಷ್ಟು ವ್ಯತ್ಯಾಸವಿರುತ್ತದೆ. ಎರಡನೆಯ ರೀತಿಯಲ್ಲಿ ಜೀವನ ವಿಧಾನದ ಪರಿಚಯ ಸಾಧ್ಯವಾಗುತ್ತದೆ. ಮೊದಲನೆಯ ಪ್ರಕಾರಕ್ಕೆ ಆಕರ್ಷಕತೆ ಸಹಜವಾದರೆ, ಎರಡನೆಯ ರೀತಿಯಲ್ಲಿ ಬದುಕಿನ ಬೇರೆ ಬೇರೆ ಮಗ್ಗುಲಗಳ ಸಾವಧಾನ ಚಿತ್ರಣವಿರುತ್ತದೆ.

ನಿರ್ವಚನ ಪ್ರವಾಸ ಸಾಹಿತ್ಯ ಹೊಸದೇನೂ ಅಲ್ಲ. ಇದೊಂದು ಪ್ರತ್ಯೇಕವಾದ ಸಾಹಿತ್ಯ ಪ್ರಕಾರ ಪರಿಕಲ್ಪನೆ ಇಲ್ಲದಿದ್ದರೂ ಪ್ರಾಚೀನ ಪ್ರವಾಸ ದಾಖಲೆ ಮೌಲ್ಯ ಉಳ್ಳವು. ಒಂದನೆಯ ಶತಮಾನದ ಪಸಾನಿಯಸರ ಬರೆಹಗಳಲ್ಲಿ ಸ್ಥಳ, ಜನ, ಅವರ ನಡೆನುಡಿಗಳ ಪ್ರವಾಸಿಗಳು ಧಾರ್ಮಿಕ ಉದ್ದೇಶದಿಂದ ಪ್ರವಾಸ ಮಾಡಿದರೂ ಪ್ರವಾಸ ಕಥನ ಲೋಕ ಪ್ರಸಿದ್ಧ ಸಾಹಸಾನುಭವಗಳ ದಾಖಲೆಯಾಗಿದೆ. ಹದಿನೇಳು ಹದಿನೆಂಟರ ಶತಮಾನಗಳಲ್ಲಿ ಪ್ರವಾಸ ಸಾಹಿತ್ಯ ದಾಖಲೆ ಸ್ವರೂಪದಿಂದ ಕಥನ ಸ್ವರೂಪಕ್ಕೆ ತಿರುಗಿದಂತೆ ತೋರುತ್ತದೆ. ರೊಮಾಂಟಿಕ್ ಯುಗದಲ್ಲಿ ಪ್ರವಾಸ ಕಥನವೂ ಜನಪ್ರಿಯವಾಯಿತು. ವಾಸ್ತವ ಪ್ರವಾಸ ಸಾಹಿತ್ಯದಂತೆ ಕಾಲ್ಪನಿಕ ಪ್ರವಾಸ ಕಥನಕ್ಕೂ ಈ ಜನಪ್ರಿಯತೆ ಕಾರಣವಾಯಿತು. ಕಾಳಿದಾಸನ ಮೇಘಸಂದೇಶವನ್ನು ಕಾಲ್ಪನಿಕವಾದರೂ ಪ್ರಾಚೀನ ಪ್ರವಾಸ ಕಥನ ಎನ್ನಬಹುದೇನೊ.

ಲಕ್ಷಣ ಉದ್ದೇಶ ಕನ್ನಡದಲ್ಲಿ ಪ್ರವಾಸ ಕಥನ ಬರೆದಿರುವವರ ಅಭಿಪ್ರಾಯಗಳೂ ಈ ನಿಟ್ಟಿನಲ್ಲಿ ವೈವಿಧ್ಯಪೂರ್ಣವಾಗಿದ್ದು ಬರಹದ ಉದ್ದೇಶ ವಿಧಾನವನ್ನು ಸ್ಪಷ್ಟಪಡಿಸುತ್ತವೆ. ಕನ್ನಡದಲ್ಲಿ ಮೊದಲನೆಯಲ್ಲದಿದ್ದರೂ ಹೆಚ್ಚು ಪ್ರಸಿದ್ಧಿಗೆ ಬಂದ 'ಪಂಪಯಾತ್ರೆ'ಯಲ್ಲಿ ವಿ.ಸೀ. ಅವರು "ವರ್ಣನೆಯೊಂದಿಗೆ ನಮ್ಮ ಭಾವನೆಗಳನ್ನು ಬೆರೆಸಿ, ಮನಸ್ಸನ್ನು ಅದರೊಳಗೆ ಹೊಗಿಸಿ ಸ್ವಚ್ಛಂದವಾಗಿ ಬರೆದಿರುವವರು ಕನ್ನಡದಲ್ಲಿ ಕಮ್ಮಿ..." ಎಂದಿದ್ದಾರೆ. ಯಾವುದೋ ಒಂದು ಬಗೆಯ ಚೆಲುವು ಅಲ್ಲಿ ಕಾಣಸಿಕ್ಕೀತು ಎಂಬ ಆಸೆ ಉಂಟಾಗಿತ್ತು. ಎಂದು 'ಅಪೂರ್ವ ಪಶ್ಚಿಮ'ದಲ್ಲಿ ಡಾ. ಶಿವರಾಮಕಾರಂತರು ಹೇಳಿದ್ದಾರೆ. "ಇದು ದಿನಚರಿಯೂ ಅಲ್ಲ, ಸಾಮಾನ್ಯ ಕಥನವೂ ಅಲ್ಲ; ಅವರೆಡರ ಬೆರಕೆ. ಆ ಬಗೆಯ ತಲೆಚೀಟಿ ಹಚ್ಚದೆ 'ಅನುಭವ ನಿರೂಪಣೆ' ಎಂದು ಕರೆದು ಸುಮ್ಮನಾಗುತ್ತೇನೆ." ಎನ್ನುತ್ತಾರೆ ಪ್ರೊ. ಎ.ಎನ್ ಮೂರ್ತಿರಾಯರು. ಹಲವು ಪ್ರವಾಸ ಕಥನಗಳನ್ನು ನೀಡಲಿರುವ ಇತಾಲಿಯಾ ನಾ ಕಂಡಂತೆ, ರಂಗಾಯನ, ಜಗದಗಲ, ಒಮ್ಮೆ ಡಾ. ಪ್ರಭುಶಂಕರ ಕೃತಿಗೆ ಮುನ್ನುಡಿ ಬರೆಯುತ್ತ ಕುವೆಂಪು ಅವರು "ಕಾದಂಬರಿಯ ಸ್ವಾರಸ್ಯವೂ ಭಾವ ಪ್ರಬಂಧದ ಆತ್ಮೀಯತೆಯೂ ಹೊಸೆದುಕೊಂಡು ಪ್ರವಾಸಕಥನ ಪ್ರವಹಿಸುತ್ತಿತ್ತು." ಎಂದಿದ್ದಾರೆ.

ಪಾಶ್ಚಾತ್ಯರು 'ಟ್ರಾವಲೋಗ್' ಎಂದು ಕರೆಯುವ ಸಾಹಿತ್ಯ ಪ್ರಕಾರಕ್ಕೆ ಪ್ರವಾಸ ಕಥನ ಎನ್ನಬಹುದು. ಇಲ್ಲಿ ಕಥನ ಎಂದರೆ ಕಥೆ ಎಂದು ಅರ್ಥ ಮಾಡ ಬೇಕಿಲ್ಲ, ನಿರೂಪಣೆ ಎಂದು ಸ್ವೀಕರಿಸಬಹುದು. ಪ್ರವಾಸ ಕಥನವನ್ನು ನಾನ್ ಫಿಕ್ಷನಲ್ ಫಾರ್ಮ್ ಎಂದು ವಿವರಿಸಿದ್ದಾರೆ. ಪ್ರವಾಸ ಕಥನದ 'ರೂಪ'ದ ಸೂಚನೆ ಅಲ್ಲಿಗೆ. ಕಾದಂಬರಿ, ಕಥೆ, ನಾಟಕಗಳಂತೆ ಕಥಾವಸ್ತು, ಪಾತ್ರ, ಕ್ರಮಬದ್ಧ ವಿಕಾಸವುಳ್ಳ ಘಟನಾವಳಿಗಳ ಕಲ್ಪನೆಯಲ್ಲಿ, ಕಟ್ಟು ಕಥೆಯಲ್ಲ. ಕಾರಂತರ ಎರಡು ಕೃತಿಗಳನ್ನು ಹೋಲಿಸಿ ನೋಡಬಹುದು. ಅವರ ಆಬೂವಿಂದ ಬರಮಾಕ್ಕೆ ಒಂದು ಪ್ರವಾಸ ಕಥನವಾದರೆ ಅದೇ ಸ್ಥಳಗಳಲ್ಲಿ ಕ್ರಿಯೆ ಸಾಗುವ 'ಆಳ–ನಿರಾಳ' ಎಂದು ಕಾದಂಬರಿಯಾಗಿದೆ. ಅಪರೂಪವಾಗಿ ನಗರ ವರ್ಣನೆ ವಿವರಗಳನ್ನೊಳಗೊಂಡ ಶುದ್ಧ ಫ್ಯಾಂಟಸಿ ರೂಪದ ಪ್ರವಾಸ ಕಥನ ರಚನೆಯಾಗಿರುವುದುಂಟು. ಆಂಡ್ರಿಬೆಲೆಯ 'ಸೇಂಟ್ ಪೀಟರ್ಸ್ ಬರ್ಗ್' ೧೯೧೩ರ ಅಂಥ ಒಂದು ಕೃತಿ. ಒಂದು ನಗರದ ಶದ್ಧ ಫ್ಯಾಂಟಸಿ–ರಮ್ಯ ಕಲ್ಪನೆ–ಯ ಪ್ರವಾಸ ಕಥನ ಅದು. ಜೇಮ್ಸ್ ಜಾಯ್ಸ್‌ನ ಡಬ್ಲಿನ್ ಆಗಲಿ, ಬಾಲ್ಜಾಕನ ಪ್ಯಾರಿಸ್ ಆಗಲಿ ಇಷ್ಟು ಸ್ಪಷ್ಟ ಸ್ಫುಟ ವಿವರಗಳಿಂದ ಪುನರ್‌ಸೃಷ್ಟಿಯಾಗಿಲ್ಲ ಎನ್ನುವಂಥದು. ಆದ್ದರಿಂದ ಪ್ರವಾಸನುಭವಗಳ ಪುನರ್ ಸೃಷ್ಟಿ ಇಲ್ಲಿ ನಿರೂಪಣಾ ವಿಧಾನದಲ್ಲಿರುತ್ತದೆ, ಎನ್ನಬಹದು.

ಎರಡನೆಯದಾಗಿ ಪ್ರವಾಸ ಕಥನಕ್ಕೂ ಐತಿಹಾಸಿಕ, ಭೌಗೋಳಿಕ ದಾಖಲೆಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ದಾಖಲೆ ಸೃಜನಾತ್ಮಕ ಸಾಹಿತ್ಯರೂಪ ಅಲ್ಲ, ಚಿಂತನೆಗಳ ಅಭಿವ್ಯಕ್ತಿಯ ಸೃಜನಕಲೆ. ಅದರ ವಿಷಯ ಪ್ರವಾಸಕ್ಕೇ ಮಿತವಾದುದಲ್ಲ. ಆದರೆ ಪ್ರಬಂಧದ ಆತ್ಮೀಯ ನಿರೂಪಣೆಯ ಗುಣ, ಉತ್ತಮ ಪುರುಷದಲ್ಲಿ ಆತ್ಮೀಯವಾಗಿ ಹೇಳುವ ಧಾಟಿಯಿಂದ ಒದಗುವ ಗುಣ ಪ್ರವಾಸ ಕಥನದಲ್ಲಿ ಉಂಟು. ಆದ್ದರಿಂದ ಅದು ಕೇವಲ ಶುಷ್ಕ ದಾಖಲೆಯಾಗದೆ ತಾನು ಕಂಡುಂಡ ಅನುಭವಗಳನ್ನು ಭಾವ, ಭಾವನೆ, ಅನುಭೂತಿ, ಸಂವೇದನೆ, ಪ್ರತಿಕ್ರಿಯೆಗಳ ಸಮೇತ ಸಂವಹನ ಮಾಡುವುದಾಗಿದೆ. ಈ ಸಂದರ್ಭದಲ್ಲಿಯೇ ಪ್ರವಾಸಕಥನ ಸೃಜನಾತ್ಮಕವೂ ಅಲ್ಲವೊ ಎಂಬ ಪ್ರಶ್ನೆಯೂ ಏಳುತ್ತದೆ.

ಮೂರನೆಯದಾಗಿ ಎಲ್ಲರೂ ಪ್ರವಾಸಿಗರಾಗಬಹುದು. ಕೆಲವರು ಮಾತ್ರ ಪ್ರವಾಸ ಕಥನಕಾರರು ಆಗಲು ಸಾಧ್ಯ. ಹಾಸ್ಯ ಮನೋವೃತ್ತಿ, ಹಾಸ್ಯ ದೃಷ್ಟಿ, ವಕ್ರದೃಷ್ಟಿ ಇರುವವರೆಲ್ಲರೂ ಉತ್ತಮ ಹಾಸ್ಯಗಾರರಾಗಬಹುದು. ಲೇಖಕರಾಗಲು ಸಾಧ್ಯ ಎಂದು ಹೇಳುವಂತೆ ಪ್ರವಾಸ ಅನುಭವ ಎಲ್ಲರೂ ಪಡೆಯಬಹುದು. ಆದರೆ ಉತ್ತಮ ಪ್ರವಾಸ ಸಾಹಿತ್ಯ ರಚನೆಗೆ ಪ್ರವಾಸ ಕಥನಕಾರರಲ್ಲಿ ಸೂಕ್ಷ್ಮ ಸಂವೇದನೆ, ಅಂತರ್‌ದೃಷ್ಟಿ ಅಥವಾ ಅಂತರ್‌ಬೋಧೆಯೂ ಇರಬೇಕಾಗುತ್ತದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಗ್ರಹಿಸಿ ನಿರೂಪಿಸುವಂತೆಯೇ ಒಂದು ಸಮಾಜ,

ಒಂದು ಜನಾಂಗ, ಒಂದು ದೇಶ ಸಹ. ಪ್ರೇಕ್ಷಣೀಯ ಸ್ಥಳಗಳ, ಪ್ರಗತಿ ವೈಭವಗಳ ಹಿಂದಿನ ಬದುಕಿನ ಅಂತರ್ಯವನ್ನು ಈ ಒಳಗಣ್ಣು ಮಾತ್ರ ಗ್ರಹಿಸಬಲ್ಲದು.

ಪ್ರವಾಸ ಕಥನದಲ್ಲಿ ಸ್ವಾರಸ್ಯ, ಆಕರ್ಷಣೆಯನ್ನು ತರಲು ವಾಸ್ತವ ನಿರೂಪಣೆಯ ಜೊತೆಗೆ ರಮ್ಯ ಕಲ್ಪನೆಯೂ ಇರಬೇಕು. ಕಂಡು ಅನುಭವಿಸಿದ್ದನ್ನು ನಿರೂಪಿಸುವುದರಲ್ಲಿಯೇ ಕಲ್ಪನೆ ಕ್ರಿಯಾತ್ಮಕವಾಗುತ್ತದೆ, ಕಲಾತ್ಮಕವಾಗುತ್ತದೆ. ಐದನೆಯ ಲಕ್ಷಣವಾಗಿ ಗುರುತಿಸುವುದಾದರೆ ಪ್ರವಾಸ ಕಥನ ಉತ್ತಮ ಪುರುಷದಲ್ಲಿ, ಗದ್ಯ ನಿರೂಪಣೆಯಲ್ಲಿರುತ್ತದೆ. ವಿ.ಕೃ ಗೋಕಾಕರ 'ಇಂದಿಲ್ಲ ನಾಳೆ' ಕೃತಿ. ಅಮೆರಿಕೆಯ ಪ್ರವಾಸ ಕಥನವಾದರೂ ಅದೊಂದು ಹೊಸ ನಿರೂಪಣೆಯ ನಡುನಡುವೆ ಪುಸ್ತಕದುದ್ದಕ್ಕೂ ಕವನಗಳು ಇವೆ. ಎಲ್ಲ ಭಾವದ ಉತ್ಕಟತೆ, ವಾಸ್ತವ ವಿವರಗಳನ್ನು ಮೀರಿ ನಿಲ್ಲುತ್ತದೋ ಅಲ್ಲಿ ಕವನವಾಗಿ ಹರಳುಗಟ್ಟುತ್ತದೆ. ಅದು ನಿಸರ್ಗ ವರ್ಣನೆಯೇ ಆಗಿರಬೇಕಿಲ್ಲ. ನಗರ ದೃಶ್ಯ, ಕಟ್ಟಡಗಳು, ಸ್ಮಾರಕಗಳು, ಕೊನೆಗೆ ಒಂದು ಚಿಂತನೆಯ ಹೊಳಹೂ ಆಗಿರಬಹುದು ಅಂತಹವನ್ನು ಕವನವಾಗಿ ಬರೆದಿದ್ದಾರೆ.

ಪತ್ರಮಾಲೆಯ ಈ ವಿಧಾನದಿಂದ ಬೇರೊಂದು ಬಗೆಯ ಅನುಕೂಲವಿದೆ. ಒಂದು ವಿಷಯ, ಒಂದು ವಿಚಾರ, ಒಂದು ಘಟನೆಯ ಸುತ್ತ ಚರ್ಚೆ, ಚಿಂತನೆ ಹರಿಯಬಹುದು. ಒಂದು ವಿಷಯಕ್ಕೆ ಸಂಬಂಧಿಸಿದ ಹತ್ತಾರು ಅನುಭವಗಳು ಒಂದು ಕಡೆ ನಿರೂಪಿತವಾಗಲು ಸಾಧ್ಯ. ಉಳಿದಂತೆ ಪ್ರವಾಸ ಸಾಹಿತ್ಯ, ವಿದೇಶಿ ಅನುಭವಗಳ, ತನ್ನ ಸ್ಥಳದಿಂದ ಹೊರಗಿನ ನಾಡಿನ ಅನುಭವಗಳ ಕಥನವಾಗುತ್ತದೆ.

ಇದುವರೆಗೆ ಪ್ರವಾಸ ಕಥನದ ಸ್ವರೂಪದ ಬಗ್ಗೆ ಕೆಲವು ಗುಣಾತ್ಮಕ ಅಂಶಗಳನ್ನು ವಿಚಾರ ಮಾಡಿದೆ. ಇನ್ನು ಮುಂದೆ ಒಂದೆರಡು ನಕರಾತ್ಮಕ ಅಂಶಗಳನ್ನೂ ಹೇಳಬಹುದು. ಪ್ರವಾಸವನ್ನು ಸಂತೋಷದಿಂದ ಸವಿಯಲು, ಹಾಗೆ ಸವಿದದ್ದನ್ನು ತಿಳಿಸಲು ಪ್ರವಾಸಿ ಹಾಗೂ ಪ್ರವಾಸ ಕಥನಕಾರ ಇಬ್ಬರಲ್ಲೂ ಈ ದೌರ್ಬಲ್ಯಗಳು ಇಣುಕಬಾರದು. ಪ್ರವಾಸಿಗೆ ಯಾವುದೇ ಬಗೆಯ ಪೂರ್ವಾಗ್ರಹ ಅಥವಾ ತನ್ನ ಜೀವನ ದೃಷ್ಟಿ, ಜೀವನ ವಿಧಾನದ ಬಗ್ಗೆ ದುರಭಿಮಾನ ಇರಬಾರದು. ಅದು ಪ್ರವಾಸವನ್ನು ಆಹ್ಲಾದಕಾರಿಯಾಗಿಸುವುದರ ಬದಲು ಪ್ರಯಾಸವಾಗಿಬಹುದು. ಅಹಂಕಾರ ಅನುಭವದ ಸ್ವಾರಸ್ಯವನ್ನು ಹಾಳು ಮಾಡುತ್ತದೆ. ನಿರ್ಮಲವಾದ ಹೃದಯ, ಮುಕ್ತ ಮನಸ್ಸು, ಸ್ವಾರಸ್ಯ ಕಾಣುವ ಕಣ್ಣು ಇರಬೇಕು. ಪೂರ್ವಗ್ರಹ, ಇಷ್ಟಾನಿಷ್ಟಗಳು ಎಲ್ಲರಿಗೂ ಇರುತ್ತವೆ. ಆದರೆ ಅದು ಅಬ್ಸೆಷನ್-ಗೀಳಾಗಬಾರದು. ಅದು ಪ್ರವಾಸನುಭವಕ್ಕೆ ಅಡಚಣೆ ಮಾತ್ರವಲ್ಲ ಬರವಣಿಗೆಯ ಸ್ವಾರಸ್ಯವನ್ನು ಹಾಳು ಮಾಡುತ್ತದೆ. ಪ್ರೊ.ದೇ.ಜ.ಗೌ. ಅವರ 'ವಿದೇಶದಲ್ಲಿ ಎರಡು ವಾರ' ಪ್ರವಾಸ ಕಥನದಲ್ಲಿ ಉದ್ದಕ್ಕೂ ವಿದೇಶಿ ಶೌಚದ ಬಗೆಗಿನ ಅಸಹನೆ ಬಗೆ ಬಗೆಯಾಗಿ ನಿರೂಪಿತವಾಗಿದೆ. ಒಮ್ಮೆ ಪ್ರಾರಂಭದಲ್ಲಿ,

ಭಾರತೀಯರಾದ ನಮ್ಮ ಪದ್ಧತಿ, ರೂಢಿಗೆ ಒಗ್ಗದ ಶೌಚಕ್ರಿಯೆ ನಗೆ ತರಬಹುದಾದರೂ ಮತ್ತೆ ಮತ್ತೆ ವರ್ಣಿತವಾದಾಗ ಬೇಸರತರುತ್ತದೆ. ಇಂಥದೇ ಪ್ರಸಂಗವನ್ನು ಬಿ.ಜಿ.ಎಲ್. ಸ್ವಾಮಿಯವರು 'ಅಮೆರಿಕದಲ್ಲಿ ನಾನು' ಕೃತಿಯಲ್ಲಿ ಪ್ರಾರಂಭದಲ್ಲಿ ಹಡಗಿನ ಕಮೋಡ್‌ಗಳ ಕಷ್ಟವನ್ನು ವಿನೋದ ಪ್ರಸಂಗವಾಗಿ ಪರಿವರ್ತಿಸಿ, ತಮ್ಮ ಹಾಸ್ಯ ದೃಷ್ಟಿಯಿಂದ ಸ್ವಾರಸ್ಯಪೂರ್ಣವಾಗಿ ವಿವರಿಸುತ್ತಾರೆ. ಅದಾದ ನಂತರ ಮತ್ತೆ ಆ ಬಗ್ಗೆ ಚಕಾರ ಎತ್ತುವುದಿಲ್ಲ. ಒಮ್ಮೆ ಪರಿಚಯಿಸಿ ಆಯಿತು, ಸಾಕು. ಹಾಗೇ ಕೆಲವರಲ್ಲಿ ಶಾಕಾಹಾರದ ತಳಮಳ. ವಿದೇಶಗಳಲ್ಲಿ ಸಸ್ಯಾಹಾರಿಗಳ ಪಾಡು ಸಹನೆಯ ಪರೀಕ್ಷೆಯಾಗುತ್ತದೆ. ಆದರೆ ಹೆಜ್ಜೆ ಹೆಜ್ಜೆಗೂ ಪುಟಪುಟಕ್ಕೂ ಅದೇ ತುಂಬಿಹೋಗಬಾರದು. ಅಂತೆಯೇ ಅತಿರಂಜಿತ ಮಾಂಸಾಹಾರ ವರ್ಣನೆ. ಸಹಜ ಸ್ವಾಭಾವಿಕ ವರ್ಣನೆ ನಿರೂಪಣೆ ಆಸಕ್ತಿ ಹೆಚ್ಚಿಸಬಲ್ಲುದೇ ಹೊರತು ತಗ್ಗಿಸುವುದಿಲ್ಲ.

ಅಂಕಿ-ಅಂಶ, ದಾಖಲೆ ಬಗ್ಗೆ ಅತಿವ್ಯಾಮೋಹವೂ ಕಥನಕ್ಕೆ ಭಂಗ ತರುತ್ತದೆ. ಈ ವಿವರ ಅಲ್ಪಸ್ವಲ್ಪ ಇದ್ದರೆ ಕುತೂಹಲ ಕೆರಳಿಸುತ್ತದೆ. ಬೆರಗು ಮೂಡಿಸುತ್ತದೆ. ಅತಿ ವಿವರ ದಾಖಲೆಯಾಗಿಬಿಡುತ್ತದೆ. ಎಚ್.ಎಲ್. ನಾಗೇಗೌಡ 'ನಾ ಕಂಡ ಪ್ರಪಂಚ', ಗೊರೂರರ 'ಅಮೆರಿಕದಲ್ಲಿ ಗೊರೂರು' ಕೃತಿಗಳಲ್ಲೂ ಈ ದೋಷ, ದೌರ್ಬಲ್ಯ ಕಾಣಸಿಗುತ್ತದೆ. ಪ್ರೇಕ್ಷಣೀಯ ಸ್ಥಳಗಳು ಅನುಭವಕ್ಕಾಗಿ ದಕ್ಕಬೇಕು. ಚರಿತ್ರೆ ಅಥವಾ ಭೂಗೋಳ ಶಾಸ್ತ್ರವಾಗಿಯಲ್ಲ. ಕೆಲವು ಪ್ರವಾಸ ಕಥನಗಳಲ್ಲಿ ಈ ಬಗೆಯ ವಿವರಗಳೇ ತುಂಬಿರುವುದನ್ನೂ ಕಾಣಬಹುದು. ವೈಭವೀಕರಣ ಹೇಗೆ ದೋಷವಾಗಬಲ್ಲುದೋ ಹಾಗೆಯೇ ಅವ್ಯವಧಾನ, ನಿರ್ಲಕ್ಷ್ಯ, ನಿರಾಸಕ್ತಿಗಳೂ ಪ್ರವಾಸಿಗೂ, ಪ್ರವಾಸ ಕಥನದ ಆಕರ್ಷಣೆಗೂ ಧಕ್ಕೆಯುಂಟುಮಾಡಬಲ್ಲುವು.

ಪ್ರವಾಸಿ ಅಥವಾ ಪ್ರವಾಸ ಕಥನಕಾರನ ಭಿನ್ನ ದೃಷ್ಟಿಕೋನ, ವಿಶಿಷ್ಟ ವ್ಯಕ್ತಿತ್ವದ ಕಾರಣ ದೇಶವನ್ನು ಕುರಿತು ಪ್ರವಾಸ ಸಾಹಿತ್ಯ ಕೃತಿಗಳಲ್ಲೂ ವೈವಿಧ್ಯ ಕಂಡು ಬರುತ್ತದೆ. ಈ ವೈವಿಧ್ಯಕ್ಕೆ ಪ್ರವಾಸ ಹೋಗುವ ಉದ್ದೇಶಗಳೂ ಕಾರಣವಾಗುತ್ತವೆ. ಆ ದೃಷ್ಟಿಯಿಂದ ಸಾಹಿತ್ಯವನ್ನು ವರ್ಗೀಕರಿಸಲು ಪ್ರವಾಸ ಸಾಧ್ಯವಿದೆ.

ಒಂದು, ಪ್ರವಾಸಕ್ಕಾಗಿಯೇ ಪ್ರವಾಸ ಮಾಡುವ, ಬೇರೆ ದೇಶ, ಬೇರೆ ಜನ, ಬೇರೆ ಸಮಾಜ, ಪ್ರೇಕ್ಷಣೀಯ ಸ್ಥಳಗಳನ್ನು ನೋಡ ಹೋಗುವ ಪ್ರವಾಸಿಗಳ ಕಥನ. ಇವುಗಳಲ್ಲೂ ಎರಡು ಬಗೆಯನ್ನು ಕಾಣಬಹುದು. ಅಲ್ಪಾವಧಿಯಲ್ಲಿ 'ಯಾತ್ರಾ ವಿಶೇಷ' ಸೌಲಭ್ಯ ಪಡೆದವರು ಒಂದು ಬಗೆ. ಇದು ಪ್ರೇಕ್ಷಣೀಯ ಸ್ಥಳಗಳಿಗೆ ಆರಿಸಿದ ಸ್ಥಳಗಳಿಗೆ ವ್ಯವಸ್ಥಾಪಕರ ಮಾರ್ಗದರ್ಶನದಲ್ಲಿ ನಡೆವ ಪ್ರವಾಸ. ಕಣ್ಣಿ ಪಟ್ಟಿಯ ಕುದುರೆಯ ನೋಟ. ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡು ಹೋದರೂ ಕಾಲ, ಹಣದ ಒತ್ತಡಗಳಿಂದ, ಅವ್ಯವಧಾನ ಮತ್ತು ನೋಡುದ ದೃಷ್ಟಿಯಲ್ಲಿನ ಕಾರಣ ಇಂಥಲ್ಲಿ ಅನುಭವ ಆಳಕ್ಕೆ ಇಳಿಯುವುದಿಲ್ಲ. ಕೆಲವು

ಪ್ರವಾಸಿಗರ ಮನಸ್ಸಿನ ತುಡಿತ, ಉದ್ದೇಶ, ವ್ಯಕ್ತಿತ್ವದ ದೆಸೆಯಿಂದ ಉತ್ತಮ ಪ್ರವಾಸಾನುಭವ ಸಾಧ್ಯ. ಆ ಪೂರ್ವ ಪಶ್ಚಿಮ, ಅಮೆರಿಕೆಯಲ್ಲಿ ಗೊರೂರು, ಅಮೆರಿಕದಲ್ಲಿ ನಾನು-ಶಾಂತಿ, ನಾ ಕಂಡ ಪ್ರಪಂಚ ಮುಂತಾದವು ಈ ಬಗೆಗೆ ಸೇರುತ್ತವೆ. ಜನ ಜೀವನಕ್ಕೆ ಆಳಕ್ಕೆ ಇಳಿಯಲು, ಸೂಕ್ಷ್ಮವಾಗಿ ಗ್ರಹಿಸಲು, ಕಂಡುದನ್ನು ಮೆಲುಕು ಹಾಕಿ ಅನುಭವಿಸಲು ಈ ಬರಹಗಾರರಿಗೆ ಸಾಧ್ಯ ಎನಿಸುತ್ತದೆ.

ಎರಡು, ಅಧ್ಯಯನ ಪ್ರವಾಸಕ್ಕೆ ಸಂಬಂಧಿಸಿದ್ದು, ಶಿಕ್ಷಣ ನಿಮಿತ್ತವಾಗಿ ಕೆಲವು ತಿಂಗಳು ಅಥವಾ ಒಂದೆರಡು ವರ್ಷ ವಿದೇಶಗಳಲ್ಲಿ ಇರುವ ಅವಕಾಶಗಳು ಬರಬಹುದು. ಮಕ್ಕಳು ಅಥವಾ ನೆಂಟರು ವಿದೇಶಗಳಲ್ಲಿ ನೆಲಸಿದ್ದಾಗ ಕೆಲಕಾಲ ಆರಾಮವಾಗಿ ಪ್ರವಾಸ ಅನುಭವಗಳಿಗಿಂತ ಭಿನ್ನಸ್ವರೂಪದ್ದಾಗಿರುತ್ತದೆ. ಅಧ್ಯಯನ ಪ್ರವಾಸಕ್ಕೆ ಸಂಬಂಧಿಸಿದಂತೆ ಹೊ. ಶ್ರೀನಿವಾಸಯ್ಯನವರು 'ನಾ ಕಂಡ ಜರ್ಮನಿ'ಯಲ್ಲಿ ಹೇಳುವ ಮಾತನ್ನು ಉಲ್ಲೇಖಿಸಬಹುದು: "ಹೋಟೆಲ್ಲುಗಳಲ್ಲಿ ಇದ್ದು ಬಂದರೆ ಜನರ ಜೀವನ ತಿಳಿಯುವುದಿಲ್ಲ." ಜಿ.ಜಿ.ಎಸ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು', ಕೃಷ್ಣಾನಂದ ಕಾಮತ್ ಅವರ 'ನಾನೂ ಅಮೆರಿಕೆಗೆ ಹೋಗಿದ್ದೆ', ಎ.ಎನ್. ಮೂರ್ತಿರಾಯರ 'ಅಪರವಯಸ್ಕನ ಅಮೆರಿಕಾಯಾತ್ರೆ ಮುಂತಾದವು ಈ ವರ್ಗಕ್ಕೆ ಸೇರುತ್ತವೆ.

ಮೂರು, ಧಾರ್ಮಿಕಯಾತ್ರೆಗಳು. ಬಹುಶಃ ಪ್ರವಾಸದ ಮೂಲ ಕಾರಣ, ಮೂಲಸ್ವರೂಪದಲ್ಲಿ ಧಾರ್ಮಿಕ ಯಾತ್ರೆಗಳೇ ಪ್ರಾಚೀನವಾದವು. ಭಾರತೀಯರಿಗೆ ಇದು ಹೊಸತಲ್ಲ. ಪ್ರವಾಸಿಯ ಸ್ವಭಾವ, ಅನುಭವಗಳ ಆಳ ವಿಸ್ತಾರದ ಮೇಲೆ ಧಾರ್ಮಿಕ ಯಾತ್ರೆಯ ಕಥನ ಸ್ವಾರಸ್ಯ ಅವಲಂಬಿಸಿರುತ್ತದೆ. ಇಲ್ಲವೆ, ನಿರೂಪಣೆ ಶುಷ್ಕವಾಗುವ ಸಂಭವ ಹೆಚ್ಚು. ಸ್ವಾಮಿ ಸೋಮನಾಥಾನಂದರ ಸೊಗಸಾದ ಎರಡು ಪ್ರವಾಸ ಕಥನಗಳಿವೆ. ಅಮರನಾಥಯಾತ್ರೆ, ಹೈಮಾಚಲದ ಸಾನಿಧ್ಯದಲ್ಲಿ. ಈ ವರ್ಗಕ್ಕೆ ಸೇರುವ ಇನ್ನೊಂದು ಕೃತಿ ಡಾ॥ ಜಿ.ಎಸ್. ಶಿವರುದ್ರಪ್ಪನವರ 'ಗಂಗೆಯ ಶಿಖರಗಳಲ್ಲಿ' ಇದಕ್ಕೆ ವೈದೃಶ್ಯವಾಗಿ ಅವರದೇ ಇನ್ನೊಂದು ಪ್ರವಸ ಕಥನ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು'. ಒಂದರಲ್ಲಿ ಕವಿಯ ಹೃದಯ ಸ್ಪಂದನ, ವ್ಯಕ್ತಿತ್ವ ಮುದ್ರೆಯಿದ್ದರೆ, ಇನ್ನೊಂದು ಯಾರದೇ ಅನುಭವವಾಗಬಹುದಾದ ರೀತಿಯಲ್ಲಿದೆ.

ನಾಲ್ಕನೆಯ ಬಗೆಯನ್ನು ಇಲ್ಲಿ ಉದ್ದೇಶಪೂರ್ವಕವಾಗಿ ಉಲ್ಲೇಖಿಸುತ್ತಿದ್ದೇನೆ. ಕನ್ನಡದಲ್ಲಿ ಆ ಬಗೆಯ ಕೃತಿ ಬಂದಿಲ್ಲ. ಜಾನ್ ವೈಲ್ಸ್ ಎಂಬಾತನ 'ಡೆಲ್ಲಿ ಈಸ್ ಫಾರ್ ಎವೇ' ಎಂಬ ಕೃತಿ ವಿಚಿತ್ರ ಅನುಭವವನ್ನು ಕೊಡುತ್ತದೆ. ಭಾರತವನ್ನೇ ಕುರಿತ ಪ್ರವಾಸ ಕಥನವಾದರೂ ಆ ವಿದೇಶಿ ಪ್ರವಾಸಿ ಜೇಬಲ್ಲಿ ಹಣ ತಾರದೇ ಬಹುವಾಗಿ ಕಾಲು ನಡಿಗೆಯಿಂದ, ಅತ್ಯಂತ ಕಡಿಮೆ ದರ-ಮಟ್ಟದ ಹೋಟೆಲ್‌ಗಳಲ್ಲಿ ತಂಗಿ, ಹಳ್ಳಿಗಳನ್ನೂ ಹೊಕ್ಕು, ಪ್ರೇಕ್ಷಣೀಯ ಸ್ಥಳಗಳನ್ನು, ಪುರಾತನ

ಸ್ಮಾರಕ, ಐತಿಹಾಸಿಕ ಸ್ಥಳಗಳನ್ನೂ ನೋಡುತ್ತ, ಅಂತೆಯೇ ಭಾರತದ ಬಹುಪಾಲು ಬಡವರ ಸಂಕಷ್ಟ ಬದುಕಿನ ಅನುಭವವನ್ನು ದೇಶವೆಲ್ಲ ಸುತ್ತಿ ಪಡೆಯುತ್ತಾನೆ. ಭಾರತದ ಬೆಳಕಿನಾಚೆಯ ಇನ್ನೊಂದು ಮುಖದ ದರ್ಶನವಾಗುತ್ತದೆ.

ಕೊನೆಯದಾಗಿ, ಪ್ರವಾಸ ಕಥನದ ವೈಶಿಷ್ಟ್ಯಕ್ಕೆ ಸಂಬಂಧಿಸಿದಂತೆ ಇನ್ನೊಂದು ಅಂಶದ ಕಡೆ ನಿಮ್ಮ ಗಮನ ಸೆಳೆಯಬೇಕಿದೆ. ಇದನ್ನು ಮತ್ತೊಂದು ಬಗೆ, ವರ್ಗ ಎಂದು ಭಾವಿಸಬೇಕಿಲ್ಲ. ಪ್ರವಾಸಿಯ ಅಭಿರುಚಿ, ಆಸಕ್ತಿ, ವೃತ್ತಿ, ಪ್ರವೃತ್ತಿಯ ಕಾರಣವಾಗಿ ಆತನ ವ್ಯಕ್ತಿತ್ವದ ಮುದ್ರೆ ಪ್ರವಾಸ ಕಥನದಲ್ಲಿ ಕಾಣಬರುತ್ತದೆ. ಆ ಕಾರಣವೇ ಅಮೆರಿಕೆಯನ್ನು ಕುರಿತು ಸುಮರು ಮೂವತ್ತು ಪುಸ್ತಕಗಳು ಇದ್ದರೂ ಕೆಲವಾದರೂ ತಮ್ಮ ವೈಶಿಷ್ಟ್ಯದಿಂದ ಒಂದೇ ದೇಶದ ಹಲವು ಮುಖಗಳ ಪರಿಚಯ ಮಾಡಿಕೊಡುತ್ತವೆ. ಎಷ್ಟೋ ವೇಳೆ ಇದು ಯಾರ ಪ್ರವಾಸ ಕಥನ ಎಂಬುದರಿಂದಲೇ ಕೃತಿಯ ಒತ್ತು, ವೈಶಿಷ್ಟ್ಯವನ್ನು ಹೇಳಬಹುದು.

'ನಾ ಕಂಡ ಪ್ರಪಂಚ' ಎಚ್.ಎಲ್. ನಾಗೇಗೌಡರ ಪ್ರವಾಸ ಕಥನ. ಅಮೆರಿಕೆಗೆ ಸಂಬಂಧಿಸಿದ ಭಾಗವೇ ಹೆಚ್ಚು. ಪ್ರವಾಸಿ ಕಂಡ ಇಂಡಿಯಾ ಸಂಪುಟಗಳನ್ನಿತ್ತ ಬರೆಹಗಾರರು. 'ಜಾನಪದಲೋಕ'ದ ಯೋಜನೆ ಹಾಕಿರುವವರು. ಸಹಜವಾಗಿ ಅವರ ಒಲವಿನ ಜಾನಪದ ಪ್ರಪಂಚಕ್ಕೆ ಪ್ರವಾಸ ಕಥನದಲ್ಲಿ ಒತ್ತು ಇರುತ್ತದೆ ಎಂಬ ನಿರೀಕ್ಷೆ ಸುಳ್ಳಾಗುತ್ತದೆ. ಪ್ರಿಮಿಟಿವ್ ಆರ್ಟ್. ಫೋಕ್ ಆರ್ಟ್‌ಗಳ ಒಳಸ್ರೋತವನ್ನು ಗುರುತಿಸುವುದಾಗಲಿ ಇಲ್ಲಿಲ್ಲ. ಇತರ ಪ್ರವಾಸಕಥನಗಳಂತೆ ಇವರೂ ಪ್ರವಾಸೀ ಪೋಲ್ಡರುಗಳ ಲಾಭ ಪಡೆದಿದ್ದಾರೆ, ಪೂರ್ಣವಾಗಿ, ಅವುಗಳನ್ನು ಆಧರಿಸಿ ಕೆಲವೆಡೆ ಅದ್ಭುತವಾಗಿ ನಿರೂಪಿಸಬಲ್ಲರು, ಕ್ರೇಜಿಹಾರ್ಸ್‌ಗೆ ಸಂಬಂಧಿಸಿದ ಕಥೆ ಹಾಗೂ ಶಿಲ್ಪದ ವರ್ಣನೆ, ಶಿಲ್ಪಿ ಕೊರಾಜಕನ ಕೆತ್ತನೆಯ ಸಾಹಸದ ವಿವರಗಳನ್ನು ನೀಡುವ ಬಗೆ ಬೆರಗುಗೊಳಿಸುತ್ತದೆ. ನಾಗೇಗೌಡರ ನವುರಾದ ಹಾಸು ನಿರೂಪಣೆಗೆ ಸ್ವಾರಸ್ಯವಿರುತ್ತದೆ.

ಇಂತಹ ಕೆಲವು ಅಪೇಕ್ಷೆಗಳ ಕೊರತೆಯ ನಡುವೆಯೂ ಇಲ್ಲಿನ ಕೃತಿಗಳಲ್ಲಿ ಅಪಾರವಾದ ಅನುಭವ ಸಂಪತ್ತು, ಪ್ರವಾಸದ ಜೊತೆಜೊತೆಯಲ್ಲಿಯೇ ದಾಖಲೆಯಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಕೋಶ ಓದಿ ದೇಶ ನೋಡಬೇಕು: ಹಕ್ಕಿಯಂತೆ ಹಾರಾಡಿ, ಹುಲ್ಲೆಯಂತೆ ನಡೆದಾಡಿ, ಮೀನಿನಂತೆ ತೇಲಾಡಿ ನಾನೇ ನಾನಾಗಿದ್ದುಕೊಂಡು ಹೊರ ಜಗತ್ತನ್ನೆಲ್ಲ ನೋಡಬೇಕು, ತಿಳಿಯಬೇಕು ಎಂಬುದೇ ಆ ಲೌಕಿಕ ಮುಮುಕ್ಷುತ್ವ. ಅದಕ್ಕೂ ಸಂಸ್ಕಾರ ಬೇಕು, ಕಾಣುವ ಒಳನೋಟ ಬೇಕು, ಕಂಡದ್ದನ್ನು ಕೇಳಿದ್ದನ್ನು ಬಿತ್ತರಿಸುವ ಪ್ರತಿಭೆಯೂ ಬೇಕು.

ಮನೆಯಿಂದ ಹೊರಬಿದುದ, ಹೊರ ಜಗತ್ತನ್ನು ತೆರೆದ ಕಣ್ಮನಗಳಿಂದ ನೋಡುತ್ತಾ, ಹಾಗೆ ನೋಡಿದ್ದನ್ನು ನಾನು ಕಂಡೆ, ನಾನು ಉಂಡೆ, ನಾನು ಮುಟ್ಟಿದೆ, ನಾನು ಮೂಸಿದೆ ಎಂಬ ಆತ್ಮ ಪ್ರತ್ಯಯದೊಡಗೂಡಿಸಿ ಸರಸರವಾಗಿ ಬಣ್ಣಿಸುತ್ತ ಹೋದರೆ ಅದು 'ಪ್ರವಾಸ

ಕಥನವೆನಿಸುತ್ತದೆ. ವಿ.ಎಂ. ಇನಾಂದಾರರು 'ಮುಕ್ಕಣ್ಣಯಾತ್ರೆ'ಯ ಮುನ್ನುಡಿಯಲ್ಲಿ "ಪ್ರವಾಸ ನಮ್ಮ ಬದುಕಿನಲ್ಲಿ ಒಂದು ಸಂಯಮಿಸಲಾಗದ ಸೆಳೆತ ಎಂದು ಹೇಳುತ್ತಾ ಮನುಷ್ಯನದು 'ಕತೆಬುರುಕ' ಸ್ವಭಾವ ಎಂಬೊಂದು ವಿಶಿಷ್ಟವಾದ ವಿಶೇಷಣವನ್ನು ಅವರಿಗೆ ಕೊಟ್ಟಿದ್ದಾರೆ. ಅಂಜುಬುರುಕ ಆಸೆಬುರುಕ, ಸುಳ್ಳುಬುರುಕ ಸ್ವಭಾವಗಳಂತೆ ಈ ಕತೆಬುರುಕತನವೂ ಅವನಿಗೆ ಹುಟ್ಟಿನಿಂದಲೇ ಬಂದದ್ದು. ಮನುಷ್ಯರು ತನ್ನ ಬಾಲ್ಯದಲ್ಲಿ ಕಥೆಗಳನ್ನು ಕೇಳಲು ಇಷ್ಟಪಡುತ್ತಾನೆ: ಮುಪ್ಪಿನಲ್ಲಿ ಕಥೆ ಹೇಳಲು ಇಷ್ಟಪಡುತ್ತಾನೆ; ಸತ್ತಮೇಲೆ ತಾನೇ ಕಥೆಯಾಗಿ ಬಿಡುತ್ತಾನೆ ಎಂಬೊಂದು ಮಾತಿದೆ. ಪ್ರವಾಸದಲ್ಲಿ ತಾನು ಕಂಡುಕಂಡ ಸ್ವಾರಸ್ಯಗಳನ್ನು ಲೋಕಕ್ಕೆ ಹೇಳಿದ ಹೊರತು ಅವನಿಗೆ ಸಮಾಧಾನವಿಲ್ಲ.

ಪ್ರವಾಸ ಸಾಹಿತ್ಯವು ಅತ್ಯಂತ ಸಂಕೀರ್ಣವಾದ ಸಾಹಿತ್ಯ ಪ್ರಕಾರ. ಅದರಲ್ಲಿ ಸೇರ್ಪಡೆಯಾಗದ ವಸ್ತುವೇ ಈ ಜಗತ್ತಿನಲ್ಲಿಲ್ಲ; ಅದಕ್ಕೆ ಹೊರತಾದ ವಿಷಯವೇ ಈ ಲೋಕದಲ್ಲಿಲ್ಲ. ಇತಿಹಾಸ, ಭೂಗೋಳ, ಸಮಾಜಶಾಸ್ತ್ರ, ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಐತಿಹ್ಯ, ಪುರಾಣ, ಸಂಸ್ಕೃತಿ, ಶಿಲ್ಪ, ಚಿತ್ರ, ಸಾಹಿತ್ಯ, ಜಾನಪದ ಮುಂತಾದ ನೂರಾರು ವಿವರಗಳು ಅದರಲ್ಲಿ ಕೂಡಿಕೊಳ್ಳುತ್ತವೆ. ಇವೆಲ್ಲಕ್ಕೂ ಕಿರೀಟವಿಟ್ಟಂತೆ ಲೇಖಕನು ಆ ಜಡ ವಿವರಗಳಿಗೆ ಸ್ವಾನುಭವವೆಂಬ ಚೈತನ್ಯವನ್ನು ತುಂಬುತ್ತಾನೆ. ಯಾವುದನ್ನು ಎಷ್ಟು ಹೇಳಬೇಕು ಹೇಗೆ ಹೇಳಬೇಕು, ಎಲ್ಲಿ ಹೇಳಬೇಕು ಎಂಬ ಔಚಿತ್ಯವನ್ನೂ, ಕುಶಲತೆಯನ್ನೂ, ತಂತ್ರಗಾರಿಕೆಯನ್ನೂ ಮೆರೆಯುತ್ತಾನೆ. ಹೀಗಾಗಿ ಅದು ಕ್ಷೇತ್ರಸಾಹಿತ್ಯ, ಲಲಿತ ಪ್ರಬಂಧ, ಜೀವನ ಚರಿತ್ರೆ, ಆತ್ಮಕಥೆ, ಬೇಟೆ ಸಾಹಿತ್ಯ, ವಿಚಾರಸಾಹಿತ್ಯ, ಪತ್ರಸಾಹಿತ್ಯ, ನಾಟಕ, ವಿಮರ್ಶೆ, ಸಣ್ಣಕತೆ, ಸ್ಪರ್ಶವನ್ನು ಪಡೆದುಕೊಳ್ಳುತ್ತದೆ. ರಂಗ ಮೇಲೆ ನಲಿದಾಡುವ ಪಾತ್ರಗಳು ಕಾದಂಬರಿ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳ ಕ್ಷಣಕ್ಷಣಕ್ಕೂ ಹೊಸ ಹೊಸದನ್ನು ತೋರಿಸುವಂತೆ ಪ್ರವಾಸಕಥನಕಾರನೂ ಸಹ ನಿರೂಪಣೆಯುದ್ದಕ್ಕೂ ಹೊಸ ಹೊಸ ಸಂಗತಿಗಳ ರಸದೌತಣವನ್ನು ಮಾಡಿಸುತ್ತಾನೆ.

ಪ್ರಾಚೀನ ಭಾರತದಲ್ಲಿ ಪ್ರವಾಸವೆಂಬುದು ತೀರ್ಥರೂಪದಲ್ಲಿ ಪ್ರಚಲತವಾಗಿತ್ತು. ಪುಣ್ಯಸಂಪಾದನೆಗಾಗಿ, ಸಂಸ್ಕಾರ ಸಂವರ್ಧನೆಗಾಗಿ, ಚಿತ್ತಶುದ್ಧಿಗಾಗಿ ಹಿಂದಿನವರು ವಿಶೇಷ ಸೌಲಭ್ಯಗಳಿಲ್ಲದ ಕಾಲ್ನಡಿಗೆಯಲ್ಲೇ 'ಕಾಲಿಗೆ ಭೂಷಣ ಹರಿಯಾತ್ರೆಯು' ಎಂದು ದೂರದೂರದ ದಿವ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಿದ್ದರು. ಬದುಕಿನ ಮುಸ್ಸಂಜೆಯಲ್ಲಿ ಅವರು ಅಂತಹ ಯಾತ್ರೆ ಕೈಗೊಳ್ಳುತ್ತಿದ್ದುದರಿಂದ 'ಮತ್ತೆ ಊರಿಗೆ ಮರಳಿದರೆ ಮರಳಿಯೇವು, ಇಲ್ಲದಿದ್ದರೆ ಇಲ್ಲ' ಎಂಬ ವೈರಾಗ್ಯದಲ್ಲಿಯೇ ಮನೆಯಿಂದ ಹೊರಬೀಳುತ್ತಿದ್ದರು. ಕಾಶಿಯಂತಹ ಪವಿತ್ರ ತೀರ್ಥದಲ್ಲಿ ದೇಹತ್ಯಾಗ ಮಾಡಿದರೆ ಮೋಕ್ಷಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯೂ ಅಂತಹ ಯಾತ್ರೆಗಳಿಗೆ ಬೆಂಬಲವಾಗಿತ್ತು. ಸಮಸ್ತ ಭರತಖಂಡವೂ ನಮ್ಮದು ಎಂಬ ವಿಶಾಲವಾದ ದೇಶಪ್ರೇಮವಿದ್ದ

ಅವರು ಕಾಶಿಯಲ್ಲಿ ತುಂಬಿ ತಂದ ಪವಿತ್ರ ಗಂಗಾಜಲವನ್ನು ದಕ್ಷಿಣ ತುದಿಯ ರಾಮೇಶ್ವರಲಿಂಗಕ್ಕೆ ಅಭಿಷೇಕ ಮಾಡಿಸಿದಾಗಲೇ ತಮಗೆ ತೀರ್ಥ ಯಾತ್ರೆಯ ಪೂರ್ಣಫಲ ಲಭಿಸುವುದು ಎಂದು ಹೇಳುತ್ತಿದ್ದರು. ತೀರ್ಥಯಾತ್ರೆಯೇ ಅಂದಿನ ಭಾರತೀಯರನ್ನು ಸ್ನೇಹಸೂತ್ರವೊಂದರಲ್ಲಿ ಬಂಧಿಸಿತ್ತು. ಸನ್ಯಾಸಿಗಳು, ಭಾಗವತರಂತೂ ತೀರ್ಥಯಾತ್ರೆಯನ್ನು ತಮ್ಮ ಅಧ್ಯಾತ್ಮ ಸಾಧನೆಯ ಒಂದಂಗವಾಗಿ ಮಾಡಿಕೊಂಡಿದ್ದರು. ಶಂಕರಾಚಾರ್ಯ, ರಾಮಾನುಚಾರ್ಯ, ಮಧ್ವಾಚಾರ್ಯ ಮೊದಲಾದ ಯತಿಶ್ರೇಷ್ಠರು ಭರತಭೂಮಿಯನ್ನೆಲ್ಲ ಕಾಲ್ನಡಿಗೆಯಲ್ಲಿಯೇ ಸುತ್ತಾಡಿ, ಧರ್ಮಪ್ರಸಾರ ಮಾಡಿದ ಸಂಗತಿ ಪ್ರಸಿದ್ಧವಾಗಿದೆ. ಮಧ್ವಾಚಾರ್ಯರ ಪರಂಪರೆಗೆ ಸೇರಿದ ವಾದಿರಾಜ ಸ್ವಾಮಿಗಳು ತಾವು ಕೈಗೊಂಡ ತೀರ್ಥಯಾತ್ರೆಯ ಕೆಲವು ವಿವರಗಳನ್ನು ಕ್ಷೇತ್ರದೇವತೆಗಳ ಸ್ತುತಿರೂಪದಲ್ಲಿ ಬರೆದಿಟ್ಟಿರುವುದು ಉಲ್ಲೇಖನೀಯವಾದ ಸಂಗತಿ.

ಕ್ಷೇತ್ರ ಸಾಹಿತ್ಯವನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕು. ಯಾವುದಾದರೊಂದು ಕ್ಷೇತ್ರದ ಪ್ರೇಕ್ಷಣಿಯ ಸ್ಥಳಗಳ ಹಾಗೂ ಭೌಗೋಳಿಕ, ಐತಿಹಾಸಿಕ, ಸಾಮಾಜಿಕ ಸಂಗತಿಗಳ ವಿವರಗಳನ್ನು ಒಳಗೊಂಡ ಗ್ರಂಥಕ್ಕೆ 'ಕ್ಷೇತ್ರ ಸಾಹಿತ್ಯ' ಎಂದು ಹೆಸರು. ಅದು ಪ್ರವಾಸ ಕಥನದ ಪಕ್ಕದಲ್ಲಿಯೇ ನಿಲ್ಲುವ ಸಾಹಿತ್ಯ ಪ್ರಕಾರವಾದರೂ ಅದರಲ್ಲಿ ಲೇಖಕನು ತಾನು ಆ ಕ್ಷೇತ್ರವನ್ನು ನೋಡಿದ್ದು ಹೇಗೆ? ಅದರ ವಿವರಗಳನ್ನು ತಿಳಿದಿದ್ದು ಹೇಗೆ, ತನಗೆ ಆದ ಅನುಭವಗಳು ಎಂಥವು, ತಾನು ಕಂಡ ಜನರು ಎಂಥವರು, ತನ್ನ ನೋಟದ ಸಿಹಿಕಹಿಗಳೇನು ಎಂಬ ಸಂಗತಿಗಳನ್ನೇನೂ ನಿರೂಪಿಸುವುದಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಆತ್ಮಾನುಭೂತಿಯ ಲೇಪ ಅದಕ್ಕಿರುವುದಿಲ್ಲ. ತಾನು ಓದಿ ತಿಳಿದ ಕೇಳಿ ತಿಳಿದ ಮಾಹಿತಿಗಳ ಬಲದಿಂದಲೇ ಒಬ್ಬ ಲೇಖಕನು ಕ್ಷೇತ್ರ ಸಾಹಿತ್ಯವನ್ನು ನಿರ್ಮಿಸಿಬಿಡಬಹುದು. ಆದರೆ ಪ್ರವಾಸ ಸಾಹಿತ್ಯ ಹಾಗಲ್ಲ.

ಡಾ. ಜಿ.ಎಸ್. ಶಿವರುದ್ರಪ್ಪ ಅವರು ಭಾರತೀಯ ಮನೋಧರ್ಮ ಎಂಥದೆಂದು ಬಹಳ ಚೆನ್ನಾಗಿ ಹೇಳಿದರು. ನಮ್ಮ ಹಿಂದಿನವರದು ತೀರ್ಥಯಾತ್ರೆಯ ಒಂದು ಮನೋಧರ್ಮ, ಎಂದರು–ಈಗ 'ತೀರ್ಥಯಾತ್ರೆ' ಎಂಬುದಕ್ಕೂ ಬೇರೆ ಅರ್ಥ ಬಂದು ಬಿಟ್ಟಿದೆ! ಈ ಅರ್ಥವನ್ನು ಬಿಟ್ಟು ನೋಡಿದರೆ ನಮ್ಮ ಹಿಂದಿನವರದು ತೀರ್ಥಯಾತ್ರೆಯ ಮನೋಧರ್ಮ, ಪ್ರವಾಸದ ಮನೋಧರ್ಮ ಅಲ್ಲ. ಅವರಿಗೆ ಪ್ರವಾಸದ ಪ್ರವೃತ್ತಿಯೇ ಇರಲೇ ಇಲ್ಲ ಎಂದು ಹೇಳುವ ಹಾಗಿಲ್ಲ. ಅದು ಆನುಷಂಗಿಕವಾಗಿತ್ತು; ಗೌಣವಾಗಿತ್ತು ಅಷ್ಟೆ. ಅವರ ಪಾಲಿಗೆ ಅದೊಂದು ಧಾರ್ಮಿಕ ಕರ್ತವ್ಯವಾಗಿತ್ತು. ಜೊತೆಗೆ ಅವರ ಸೌಂದರ್ಯ ಪ್ರಜ್ಞೆಯೂ ಅವರಿಗರಿವಿಲ್ಲದೆ ಕೆಲಸ ಮಾಡುತ್ತಿತ್ತು. ನಮ್ಮ ತೀರ್ಥಕ್ಷೇತ್ರಗಳೆಲ್ಲ ಇರುವುದು ಪ್ರಕೃತಿ ಸೌಂದರ್ಯದ ಮಡಿಲಲ್ಲಿ. ರಮಣೀಯವಾದ ಪರಿಸರದಲ್ಲ ಎಂಬುದನ್ನು ನಾವು ಮರೆಯಬಾರದು. ಸೌಂದರ್ಯಸ್ವಾದನೆಗೆಂದೇ ಅವರು

ಪ್ರವಾಸ ಮಾಡದಿದ್ದರೂ ಪ್ರಕೃತಿ ಸೌಂದರ್ಯವನ್ನು ನೋಡಿ ಅವರು ಸಂತೋಷಪಡುತ್ತಿದ್ದರು. ಯಾತ್ರೆಯ ಆನಂದ ಪಡೆಯುತ್ತಿದ್ದರು. ಜೊತೆಗೆ ತೀರ್ಥ ಯಾತ್ರೆಯಿಂದ ಪುಣ್ಯ ಸಿಗುತ್ತದೆ, ಮೋಕ್ಷ ಸಿಗುತ್ತದೆ ಎಂಬ ನಂಬಿಕೆಯೂ ಇತ್ತು.

ಕನ್ನಡದ ಆದಿಕವಿ ಪಂಪನನ್ನು ಗಮನಿಸಿ. ಅವನು ರಾಜಾಸ್ಥಾನದಲ್ಲಿದ್ದ, ಅರಿಕೇಸರಿಯ ಜೊತೆ ಅನೇಕ ಕಡೆ ಪ್ರವಾಸ ಕೈಗೊಂಡಿದ್ದ. ಅದು ಯುದ್ಧಯಾತ್ರೆ ಇರಬಹುದು, ತೀರ್ಥಯಾತ್ರೆ ಇರಬಹುದು, ಪ್ರವಾಸವೇ ಆಗಿರಬಹುದು. ಹೀಗೆಲ್ಲ ಸುತ್ತಾಡಿದ ಅವನು ತನ್ನ ಕೆಲವು ಅನುಭವಗಳನ್ನು ಕಾವ್ಯಗಳಲ್ಲಿ ತಕ್ಕಮಟ್ಟಿಗೆ ಕೊಟ್ಟಿದ್ದಾನೆ. ಈ ದೃಷ್ಟಿಯಲ್ಲಿ ವಿವೇಚಿಸುವಾಗ, ಪಂಪಭಾರತದಲ್ಲಿ ಬಂದಿರುವ ಬನವಾಸಿಯ ವರ್ಣನೆಯಯೇ ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಮೊತ್ತಮೊದಲ ದಾಖಲೆ ಎನಿಸುತ್ತದೆ. ಪಂಪ ಬನವಾಸಿಯವನಲ್ಲ. ಅವನು ಉತ್ತರ ಕರ್ನಾಟಕದಲ್ಲಿ ಹುಟ್ಟಿದವನು, ಆಂಧ್ರಪ್ರದೇಶದಲ್ಲಿ ಇದ್ದವನು. ಆದರೆ ಅವನು ಯಾವಾಗಲೋ ಒಮ್ಮೆ ಬನವಾಸಿ ಪ್ರಾಂತ್ಯಕ್ಕೆ ಹೋಗಿ, ಅದರ ಸೌಂದರ್ಯಕ್ಕೆ ಮನಸೋತು ಪದ್ಯಗಳನ್ನು ಬರೆದಿದ್ದಾನೆ. ಆಗ ವ್ಯಕ್ತಿ ನಿಷ್ಠವಾದಂಥ ಭಾವಗೀತ ಪ್ರಕಾರ ಇರಲಿಲ್ಲ. ತನ್ನ ಅನುಭವಗಳೇನಿದ್ದರೂ ಅವನ್ನು ವಸ್ತುನಿಷ್ಠವಾದ ಮಹಾಕಾವ್ಯದಲ್ಲಿ ಮಾತ್ರ ಪ್ರಕಟಮಾಡುವುದು ಅವನಿಗೆ ಸಾಧ್ಯವಾಗಿತ್ತು. ಆದ್ದರಿಂದ ಪಂಪ ಆ ಪದ್ಯಗಳನ್ನು ತನ್ನ ಭಾರತದಲ್ಲಿ ಸೇರಿಸಿದ್ದಾನೆ. ಆದರೂ ಈಗ ನಾವು ಪ್ರವಾಸ ಸಾಹಿತ್ಯ ಎಂದು ಕರೆಯುತ್ತಿರುವಂಥ ಸಾಹಿತ್ಯ ಪ್ರಕಾರ ಇತ್ತೀಚಿನದು ಎಂದು ಒಪ್ಪಿಕೊಳ್ಳಬೇಕು.

ಪ್ರವಾಸ ಸಾಹಿತ್ಯದ ಪ್ರಯೋಜನವೇನು? ಎಂದರೆ ಇದು ನಮಗೆ ಹೊಸ ಹೊಸ ಪ್ರಪಂಚಗಳ ಪರಿಚಯ ಮಾಡಿಕೊಡುತ್ತದೆ. ಪ್ರವಾಸ ಸಾಹಿತ್ಯದಿಂದ ಹೊಸ ಹೊಸ ಪ್ರಪಂಚಗಳ ಸಾಕ್ಷಾತ್ಕಾರವಾಗಬೇಕಿದ್ದರೆ, ಪ್ರವಾಸದ ಚಿತ್ರಣ ಸಮರ್ಥವಾಗಿರಬೇಕು, ಪರಿಣಾಮಕಾರಿ ಯಾಗಿರಬೇಕು ಮತ್ತು ಜೀವಂತವೂ ಆಗಿರಬೇಕು. ಪ್ರವಾಸ ಸಾಹಿತ್ಯದ ಓದುಗನೂ ಕಲ್ಪನಾಶಕ್ತಿಯುಳ್ಳವನಾಗಿರಬೇಕು. ಪ್ರವಾಸ ಕಥನ ಎಷ್ಟೇ ಚೆನ್ನಾಗಿರಲಿ, ಕಲ್ಪನಾ ದರಿದ್ರನಾದ ಓದುಗ ಅದನ್ನು ಸಂಪೂರ್ಣವಾಗಿ ಆಸ್ವಾದಿಸಲಾರ, ಅದರ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲಾರ, ಓದುಗನಲ್ಲಿ ಸ್ವಲ್ಪ ಕಲ್ಪನಾಶಕ್ತಿಯಿದ್ದಲ್ಲಿ, ಮೂಲಲೇಖಕನಿಗಿಂತಲೂ ಚೆನ್ನಾಗಿಯೇ ಅವನು ಪ್ರವಾಸಾನುಭವಗಳನ್ನು ತನ್ನದನ್ನಾಗಿ ಮಾಡಿಕೊಳ್ಳಲು ಸಾಧ್ಯ.

ಪ್ರವಾಸ ಸಾಹಿತ್ಯದಲ್ಲಿ ಎರಡು ಬಗೆ: ಒಂದು ಪ್ರೇರಕ. ಎಂದರೆ, ಮೂಲ ವಸ್ತುವನ್ನು ನಾವೇ ಸ್ವತಃ ನೋಡಬೇಕು ಎನ್ನುವ ಕುತೂಹಲವನ್ನು ಉಂಟುಮಾಡುವಂಥ ಸಾಹಿತ್ಯ. ಈ ಬಗೆಯ ಸಾಹಿತ್ಯ ಸ್ವಲ್ಪ ಕೆಳಮಟ್ಟದಲ್ಲಿ ನಿಲ್ಲುತ್ತದೆ ಎಂದು ಹೇಳಬಹುದು. ಇದು ಸುಮ್ಮನೆ ಓದುಗರನ್ನು ಪ್ರಚೋದಿಸುತ್ತದೆ, ಅಷ್ಟೇ! ಎರಡನೆಯ ಬಗೆಯೇ ಪೂರಕ ಸಾಹಿತ್ಯ. ಪೂರಕ ಎಂದರೆ ನಮ್ಮ

ಕುತೂಹಲವನ್ನು ಪೂರೈಸತಕ್ಕದ್ದು: ನೋಡಬೇಕಾಗಿಯೇ ಇಲ್ಲ, ಅಷ್ಟು ಚೆನ್ನಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಸಾಕ್ಷಾತ್ಕರಿಸುವಂತೆ ಮಾಡಿದ್ದಾನೆ ಎಂದು ಅನಿಸುವಂಥ ಸಾಹಿತ್ಯ ಇದೇ ನಿಜವಾಗಿ ಉತ್ತಮ ಮಟ್ಟದ ಪ್ರವಾಸ ಸಾಹಿತ್ಯ.

ಪ್ರವಾಸಕಥನಕ್ಕೊಂದು ಸ್ಥೂಲವಾದ ಸ್ವರೂಪವಿದೆಯೆಂಬುದನ್ನು ಈವರೆಗೆ ಮನದಟ್ಟು ಮಾಡಿಕೊಟ್ಟಿದೆ. ಹೀಗೆಯೇ ಪ್ರವಾಸ ಸಾಹಿತ್ಯದಲ್ಲಿ ಬಗೆಗಳೇನಾದರೂ ಇವೆಯೇ ಎಂಬುದು ಕುತೂಹಲದ ಅಂಶ.

೧) ತೀರ್ಥಯಾತ್ರಾ ಪ್ರವಾಸ ಸಾಹಿತ್ಯ

೨) ಸಾಂಸ್ಕೃತಿಕ ಪ್ರವಾಸ ಸಾಹಿತ್ಯ

೩) ಶೈಕ್ಷಣಿಕ ಪ್ರವಾಸ ಸಾಹಿತ್ಯ

೪) ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ.

೧) ಪತ್ರರೂಪ ಪ್ರವಾಸ ಸಾಹಿತ್ಯ ೨) ದಿನಚರಿ ಪ್ರವಾಸ ಸಾಹಿತ್ಯ ೩) ಕಥಾರೂಪ ಪ್ರವಾಸ (ಸಾ.ಶಿ. ಮರುಳಯ್ಯ, 'ಪ್ರವಾಸ ಸಾಹಿತ್ಯ', ಕನ್ನಡ ನುಡಿ, ೧೯೬೩) ವ್ಯಾಪಕವಾದದ್ದು, ಖಚಿತವಾದದ್ದು ಎನ್ನಲಾಗದು. ಇದಕ್ಕಿಂತ ಹೆಚ್ಚಾಗಿ ಪ್ರವಾಸ ಸಾಹಿತ್ಯವೇ ಒಂದು ಸಾಹಿತ್ಯ ಪ್ರಕಾರ; ಅದನ್ನ ಪತ್ರ (Epistle) ಮತ್ತು ದಿನಚರಿ (Dairy)ಗಳೆಂಬ ಇನ್ನೆರಡು ಪ್ರಕಾರಗಳೊಂದಿಗೆ ಬೆರೆಸಿ ಮಾಡುವ ವಿಭಾಗ ಸೂಕ್ತವೆನಿಸುವುದಿಲ್ಲ. ಅಲ್ಲದೆ ವರ್ಗೀಕಣದಲ್ಲಿ ಮೊದಲೆರಡು ಗುಂಪಿಗೆ ಸಂಬಂಧಿಸಿದಂತೆ ಬಂದಿರುವ ಪುಸ್ತಕಗಳ ಸಂಖ್ಯೆ ಕಡಿಮೆಯೇ. ಮೂರನೆಯ ಗುಂಪಿನದೇ ಸಿಂಹಪಾಲು. ಜೊತೆಗೆ ಪುಸ್ತಕದ ವಸ್ತು, ಲೇಖನ ದೃಷ್ಟಿಧೋರಣೆ ಹಾಗೂ ಈ ಬಗೆಯ ಸಾಹಿತ್ಯದ ವ್ಯಾಪಕತೆಯನ್ನು ಇದು ಸಮಗ್ರವಾಗಿ ಒಳಗೊಳ್ಳುವುದಿಲ್ಲ.

ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ಕೂಡ ಬಂದಿರುವ ಪ್ರವಾಸ ಕಥನಗಳನ್ನು ಗಮನಿಸಿ (೧) ಮಾಹಿತಿ ಕಥನ ಪ್ರವಾಸ ಸಾಹಿತ್ಯ (Factual account travelogues) : ಇತ್ಸಿಂಗ್, ಅಬ್ದುಲ್ ರಜಾಕ್, ಡೊಮಿಂಗ್ ಪಾಯೆಸ್ ಈ ಮುಂತಾದ ವಿದೇಶೀ ಯಾತ್ರಿಕರು ಭಾರತವೇ ಮುಂತಾದ ದೇಶಗಳನ್ನ ನೋಡಿ ಅಲ್ಲಿ ತಾವು ಕಂಡುದನ್ನು ಉಂಡುದನ್ನು ಬಣ್ಣಿಸಿದ್ದಾರೆ. ವಿಜಯನಗರದ, ಆ ಕಾಲದ ವಿವರಗಳನ್ನು ತಮ್ಮ ಬರೆಹಗಳಲ್ಲಿ ಕೊಡುತ್ತಾರೆ. ಇವೂ ಪ್ರವಾಸ ಸಾಹಿತ್ಯದ ವಿವರಗಳೇ. ಪ್ರವಾಸ ಸಾಹಿತ್ಯವನ್ನೂ ವಿಶಾಲವಾದ ಅರ್ಥದಲ್ಲಿ ಗ್ರಹಿಸಿದಾಗ ಇವು ಪ್ರವಾಸ ಸಾಹಿತ್ಯದಲ್ಲಿ ಸೇರ್ಪಡೆಯಾಗುತ್ತವೆ. ತಾವು ಕಂಡ ಪ್ರದೇಶದ ಬಗೆಗಿನ ಮಾಹಿತಿಗೆ ಪ್ರಾಮುಖ್ಯ ಹೆಚ್ಚು.

ಇಲ್ಲಿ ಲೇಖಕ ಸಾಹಿತಿಯಾಗುವುದಕ್ಕಿಂತ ಚರಿತ್ರಕಾರನಾಗುತ್ತಾನೆ. ಭಾಷಿಕ ನೆಲೆ ನೀಡುವ ವಿವರಗಳು ಪ್ರಾಮಾಣಿಕ ವರದಿಗಳಾದ್ದರಿಂದಲೇ (Truthful account ) ಅವನ್ನು ಇತಿಹಾಸದ ಪುನಾರಚನೆಯ ಒಂದು ಆಧಾರವಾಗಿ ಚರಿತ್ರಕಾರರು ಬಳಸಿಕೊಳ್ಳುತ್ತಾರೆ. ಸಾಹಿತ್ಯದ ಸೊಗಸಿನ ಸ್ಪರ್ಶ ಪಡೆದಿರುವುದಿಲ್ಲ. ತಮ್ಮ ದೇಶದವರಿಗೆ ಕುತೂಹಲಕರವಾದ ಅಗತ್ಯವಾದ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ವಿಚಾರಗಳನ್ನು ಮಾತ್ರ ಅವರು ಪ್ರಸ್ತಾಪಿಸುತ್ತಾರೆ. ಪ್ರೇಕ್ಷಣೀಯ ಸ್ಥಳಗಳ ವರ್ಣನೆಯಾಗಲಿ, ಬೆಟ್ಟ ಪರ್ವತ ಕಾಡು ದೇವಸ್ಥಾನಗಳ ವಿವರಗಳನ್ನಾಗಲಿ ಅವರು ಸಾಹಿತ್ಯ ಪರಿಭಾಷೆಯಲ್ಲಿ ನಿರೂಪಿಸುವುದಿಲ್ಲ.

(೨) ತೋರು ವಾಸ್ತವತೆಯ ಭ್ರಾಮಕ ಪ್ರವಾಸ ಸಾಹಿತ್ಯ (Fantasy purporting to be fact travelogues): ಈ ಬಗೆಯ ಪ್ರವಾಸ ಸಾಹಿತ್ಯ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಲಿತವಾಗಿದೆ. ಹೆರಡೋಟಸ್ ಮುಂತಾದ ಕೆಲವು ವ್ಯಕ್ತಿಗಳು ಭೂಮಿ ಗುಂಡಗಿದೆ, ಭೂಮಂಡಲದ ಬೇರೆ ಬೇರೆ ಪ್ರದೇಶಗಳಲ್ಲಿ ಜನ ಹೀಗಿದ್ದಾರೆ, ಈ ರೀತಿ ಬದುಕುತ್ತಿದ್ದಾರೆ ಇತ್ಯಾದಿ ಸಂಗತಿಗಳನ್ನು ಹೇಳಿದ್ದಾರೆ. ಈ ಸೂಚನೆಗಳನ್ನವಲಂಬಿಸಿ ಭಾರತ, ಆಸ್ಟ್ರೇಲಿಯಾ ಮುಂತಾದ ಬೇರೆ ಬೇರೆ ದೇಶಗಳನ್ನು ಕೆಲವರು ಪ್ರವಾಸ ಸಾಹಿತ್ಯವಾಗಿ ವರ್ಣಿಸಿದ್ದಾರೆ. ನಿದರ್ಶನಕ್ಕೆ ಇಂಗ್ಲೀಷಿನಲ್ಲಿ "ಟ್ರಾವೆಲ್ಸ್ ಆಫ್ ಸರ್ ಜಾನ್ ಮ್ಯಾಂಡ್‌ವಿಲ್" ಎಂಬೊಂದು ಪುಸ್ತಕವಿದೆ. ಅಲ್ಲಿ ಬರುವ ವಿವರಗಳು ಯಥಾವತ್ತಾದ ಚಿತ್ರಗಳಂತೆ ಕಾಣುತ್ತವೆ. ನಾನು ಇಂತಹ ಹಡಗಿನಲ್ಲಿ ಹೋದೆ, ಇಷ್ಟು ಹೊತ್ತಿಗೆ ತಲುಪಿದೆ. ಹೀಗೆ ಬಂದೆ, ಇಂಥ ಜನರನ್ನು ಭೇಟಿಮಾಡಿದೆ–ಎಂದೆಲ್ಲ ಲೇಖಕ ನಿರೂಪಿಸಿದ್ದಾನೆ. ಆದರೆ ಆ ವಿವರಗಳು ಶುದ್ಧವಾಗಿ ಕಾಲ್ಪನಿಕ. ಸರ್‌ಜಾನ್ ಮ್ಯಾಂಡ್‌ವಿಲ್ ಎಂಬಾತನೇ ಕಾಲ್ಪನಿಕ ವ್ಯಕ್ತಿ. ಇನ್ನು ಆತನ ಅನುಭವಗಳೆಂದರೆ ಅವು ಹೇಗಿರಬೇಕು? ಇದನ್ನು ನೈಜವಾದ ಪ್ರವಾಸಕಥನ ಎಂದು ಭಾವಿಸಿ ಅನೇಕ ವಿಮರ್ಶಕರು ವಿಶ್ಲೇಷಿಸಿದ್ದರು. ಆದರೆ ಇನ್ನೊಂದು ಕಾಲ್ಪನಿಕ ಪ್ರವಾಸ ಕಥನವೆನ್ನುವುದು ಬಹಳ ಕಾಲವಾದ ಮೇಲೆ ತಿಳಿಯಿತಂತೆ! ಕನ್ನಡದಲ್ಲಿ ಇಂಥ ಕೃತಿಗಳು ಹೆಚ್ಚಾಗಿಲ್ಲ. ಆದರೆ ಇದಕ್ಕೆ ಸಮೀಪವಾದ ವಿ.ಎಂ. ಇನಾಂದಾರರ ಮಂಗಲ್ಯಾಂಡಿನಲ್ಲಿ ಮೂರುವಾರ ಎಂಬುದನ್ನೂ, ಕರ್ಪೂರ ಅವರ 'ಕರ್ನಾಟಕಕ್ಕೆ ದೇವತೆಗಳ ಆಗಮನ' ಎಂಬುದನ್ನೂ ಉಲ್ಲೇಖಿಸಬಹುದು ಇದೊಂದು ವಿಲಕ್ಷಣವಾದ ಅಪೂರ್ವ ಪ್ರವಾಸ ಕಥನ.)

(೩) ನಿರ್ದಿಷ್ಟವಾದ ಉದ್ದೇಶವನ್ನು ಇಟ್ಟುಕೊಂಡು ಪ್ರವಾಸ ಮಾಡಿ. ಉದ್ದೇಶ ಸ್ವರೂಪ ವರದಿಯಾಗಿಸದೆ ಸಾಹಿತ್ಯವಾಗಿಸುವ ಪ್ರವಾಸ ಸಾಹಿತ್ಯ (Travell Literature with a difinite purpose) ಈ ಬಗೆಯ ಕೃತಿಗಳೇ ಎಲ್ಲ ಭಾಷೆಗಳಲ್ಲೂ ಹೆಚ್ಚು. ಇಂಥ ಪ್ರವಾಸಗಳಲ್ಲಿ ಮುಖ್ಯವಾದ ಸಂಗತಿಗಳು ಎರಡು: (i) ಅವಧಿ (ii) ಉದ್ದೇಶ. ಪ್ರವಾಸಿ ವಿದೇಶದಲ್ಲಿ ತಂಗುವ

ತಾಣ ತೀರ ಕಡಿಮೆಯದಾಗಿದ್ದರೆ ಆತನ ನಿರೂಪಣೆ ಮತ್ತು ವ್ಯಾಪ್ತಿಗಳಿಗೆ ಸಹಜವಾಗಿಯೇ ಸೀಮಿತಗಳಿರುತ್ತವೆ. ಉದ್ದೇಶ ಬದಲಾದಂತೆಲ್ಲ ಪ್ರವಾಸ ಕಥನಗಳ ದನಿ ಮತ್ತು ದೃಷ್ಟಿ ಧೋರಣೆಗಳೂ ಬದಲಾಗಬಹುದು. ಕೆಲವರು ಶೈಕ್ಷಣಿಕ ತರಬೇತಿಗೆಂದೋ ಹೆಚ್ಚಿನ ಅಧ್ಯಯನಕ್ಕೆಂದೋ ಸಭೆ-ಸಮ್ಮೇಳನಗಳಲ್ಲಿ ಭಾಗವಹಿಸಲೆಂದೋ, ಕ್ರೀಡಾ ಕೂಟಗಳಲ್ಲಿ ಪಾಲ್ಗೊಳ್ಳಲೆಂದೋ ಹೋಗಬಹುದು. ಈ ನಿರ್ದಿಷ್ಟವಾದ ಉದ್ದೇಶಗಳು ನಿರ್ದಿಷ್ಟ ವ್ಯಕ್ತಿಯ ಮನಸ್ಸು, ಕೆಲಸಗಳನ್ನು ನಿಯಂತ್ರಿಸುತ್ತವೆ. ಈ ನಿಯಂತ್ರಣಗಳ ಹಿನ್ನೆಲೆಯಲ್ಲಿ ಪ್ರವಾಸ ಕಥನಗಳು ರೂಪುಗೊಳ್ಳಬೇಕಾಗಿ ಬರುತ್ತವೆ.)

ನಿರ್ದಿಷ್ಟೋದ್ದೇಶ ಪ್ರವಾಸ ಕಥನಗಳಲ್ಲಿ ಪ್ರವಾಸಿ ಇತಿಹಾಸಕಾರನೇ, ಸಮಾಜಶಾಸ್ತ್ರಜ್ಞನೇ, ಸಾಹಿತಿಯೇ, ವಿಜ್ಞಾನಿಯೇ? ಲಲಿತಕಲಾಕಾರನೇ ಎಂಬುದನ್ನವಲಂಬಿಸಿ ಕೃತಿಯ ದನಿ, ಮುಖ್ಯ ಪ್ರವಾಹಗಳು ರೂಪುಗೊಳ್ಳುತ್ತವೆ. ಒಟ್ಟಿನಲ್ಲಿ ಪ್ರವಾಸ ಕಥನದಲ್ಲಿ ಇತಿಹಾಸ, ಭೂಗೋಳ, ಸಮಾಜ, ಸಂಸ್ಕೃತಿ, ರಾಜಕೀಯ, ಸಾಹಿತ್ಯ, ಲಲಿತಕಲೆ, ವಿಜ್ಞಾನಿಗಳೆಲ್ಲ ಬೆರೆತು ಬರಲು ಸಾಕಷ್ಟು ಅವಕಾಶಗಳಿವೆ. ಪ್ರವಾಸಿಯ ಹಿನ್ನೆಲೆ, ಅರ್ಹತೆಗಳಿಗನುಗುಣವಾಗಿ ಈ ವಿವರಗಳು ಆತನ ಕೃತಿಯಲ್ಲಿ ಬಿಚ್ಚಿಕೊಳ್ಳುತ್ತ ಹೋಗುತ್ತವೆ.

- ಪ್ರವಾಸದಿಂದ ಮೋಕ್ಷ ಪಡೆಯುವ ಪರಿಕಲ್ಪನೆಯೂ ಕೂಡ ಪ್ರಾರಂಭದಲ್ಲಿ ಚಾಲ್ತಿಯಲ್ಲಿತ್ತು. ಆದರೆ ಅಂತಹ ಕಟ್ಟುಪಾಡುಗಳನ್ನು ಮುರಿದು ತನ್ನ ಸ್ವರೂಪವನ್ನ ಬದಲಾಯಿಸಿ ಕೊಂಡಿರುವ ಪ್ರಸ್ತುತ ಸಂದರ್ಭದಲ್ಲಿ ಪ್ರವಾಸಿ ಸಾಹಿತ್ಯ ಸಾಗಬೇಕಾದ ಹಾದಿ ಯಾವುದು ಎಂಬುದೂ ಕೂಡ ಒಂದು ಸಮಸ್ಯೆಯಾಗಬಹುದು.

- ಪ್ರವಾಸಿ ಸಾಹಿತ್ಯ ಅನುಭವ ಕಥನಗಳಾಗಿ ಉಳಿಯುವ ಸಾಧ್ಯತೆಗಳೇ ಹೆಚ್ಚು. ಅಂತಹ ಸಂದರ್ಭದಲ್ಲಿ 'ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರವಾಸ ಸಾಹಿತ್ಯದ ಕೃತಿಗಳು ಕಟ್ಟಿಕೊಡುವ ಸ್ಮೃತಿ' ಎಂಥಹುದು ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸುವ ಅವಶ್ಯಕತೆ ಇರದೇ ಇರದು.

- ಅನುಭವ, ವರ್ಣನೆಯನ್ನು ಮೀರಿದ ವಿಶ್ಲೇಷಣಾ ಕ್ರಮ ಮತ್ತು ಅಂತರ್ ಶಿಸ್ತೀಯ ಅಧ್ಯಯನ ಕ್ರಮಗಳು ಪ್ರವಾಸ ಸಾಹಿತ್ಯಕ್ಕೆ ಅನ್ವಯವಾಗಬೇಕಾದ ತುರ್ತು ಇಂದು ಎದುರಾಗಿದೆ ಎಂದು ಹೇಳ ಬಹುದು. ಐತಿಹಾಸಿಕವಾಗಿಯೂ ಕೂಡ ಪ್ರವಾಸ ಎನ್ನುವುದು ಬಹಳ ಮಹತ್ವದ ಪ್ರಕ್ರಿಯೆಯಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಕಂಡುಬರುತ್ತಿದ್ದ ಪ್ರವಾಸಗಳೆಲ್ಲವೂ ಕೂಡ ವ್ಯಾಪಾರದ ಮತ್ತು ಲಾಭದ ದೃಷ್ಟಿಕೋನವನ್ನು ಒಳಗೊಂಡಿರುತ್ತಿತ್ತು. ಅಂಥಹ ಪ್ರವಾಸಿಗಳು ಯಾವುದೇ ಸ್ಥಳವನ್ನು ಸಂದರ್ಶನ ಮಾಡಿದರೂ ಕೂಡ 'ಲಾಭದ ಕಣ್ಣು'ಗಳಿಂದಲೇ ನೋಡುತ್ತಿದ್ದರು ಎಂಬುದು ಗಮನಾರ್ಹ.

ಜೊತೆಗೆ ಈ ವ್ಯಾಪಾರಿ ಮನೋಧರ್ಮವು ಅಂದಿನ ರಾಜಕಾರಣವನ್ನು ಸೂಚಿಸುತ್ತದೆ. ಅಂತಹ ಪ್ರವಾಸಿಗರ ಅಧ್ಯಯನವೂ ಕೂಡ ಏಕಮುಖಿ ದೃಷ್ಟಿಕೋನವಲ್ಲದೇ ಬೇರೇನನ್ನೂ ಕಟ್ಟಿಕೊಡಲು ಸಾಧ್ಯವಿಲ್ಲ.

- ಪ್ರವಾಸ ಕಥನಗಳು ವರದಿಗಳಾಗುವ ಅಪಾಯವನ್ನು ಮೀರಿ ಬೆಳೆದಾಗ ಇಂತಹ ಪ್ರವಾಸ ಕಥನಗಳು "ಆತ್ಮಕೇಂದ್ರಿತ"ವಾದಾಗ ಮತ್ತು ಸ್ವಯಂ ಪ್ರತಿಷ್ಠೆಯನ್ನು ಮಂಡಿಸುವ ಸಾಧನಗಳಾಗಿ ಬಳಕೆಯಾದಾಗ ಹೆಚ್ಚಿನದೇನನ್ನೂ ಕೊಡಲು ಸಾಧ್ಯವಾಗಲಾರದು. ಈ ಮೂಲಾಂಶಗನ್ನು ಮೀರುವ ತುರ್ತು ಇಂದಿನ ಪ್ರವಾಸಿ ಸಾಹಿತ್ಯಕ್ಕೆ ಇದೆ. ನಾನು ಆಯ್ಕೆ ಮಾಡಿಕೊಂಡಿರುವ ಪ್ರವಾಸಿ ಕಥನಗಳು ಮೇಲಿನ ಅಂಶಗಳನ್ನು ಎಷ್ಟರ ಮಟ್ಟಿಗೆ ಮೀರುತ್ತವೆ ಎಂಬುದು ಈ ಅಧ್ಯಯನದಲ್ಲಿ ಬಹು ಮುಖ್ಯ ಪ್ರಶ್ನೆಯಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಪ್ರವಾಸ ಸಾಹಿತ್ಯಗಳ ಸ್ಥಾನ– ಧೋರಣೆ ಎಂತಹದೂ ಎಂಬುದು ಬಹುಮುಖ್ಯ.

ಕೆ.ಪಿ ಪೂರ್ಣಚಂದ್ರ ತೇಜಸ್ವಿಯವರು ಪ್ರವಾಸವನ್ನು ಕುರಿತಂತೆ "ಯಾರಿಗೆ ತಾವಿರುವಲ್ಲೇ ಸಂತೋಷ, ಉತ್ಸಾಹ, ಕುತೂಹಲಗಳಿರುವುದಿಲ್ಲವೋ ಅವರು ಅದನ್ನು ಹುಡುಕಿಕೊಂಡು ಎಲ್ಲಿಗೇ ಪ್ರವಾಸ ಹೋದರೂ ಅದು ವ್ಯರ್ಥ. ಆದ್ದರಿಂದ ನಾನು ಅಂಡಮಾನಿಗೆ ಹೋದುದ್ದಕ್ಕೂ, ಹೋಗದಿದ್ದದಕ್ಕೂ ಹೆಚ್ಚಿನ ವ್ಯತ್ಯಾಸವನ್ನೇನು ಕಾಣಲಿಲ್ಲ." ಎಂದು ಪ್ರವಾಸದ ಬಗ್ಗೆ ತಮ್ಮದೇ ಆದ ನಿರ್ವಚನೆಯನ್ನು ನೀಡಿದ್ದಾರೆ. ಪ್ರವಾಸ ಎನ್ನುವುದು ವ್ಯಕ್ತಿಯೊಬ್ಬ ಸಂತೋಷ, ಉತ್ಸಾಹ, ಇವುಗಳನ್ನು ವ್ಯಕ್ತಿಯೊಬ್ಬ ಅರಸುತ್ತಾ ಹೊರಡುವುದು ಎಂಬುದು ಮೇಲ್ನೋಟಕ್ಕೆ ವೇಧ್ಯವಾಗುವ ಸಂಗತಿ. ಹಾಗಾಗಿ ಇದು ಪ್ರವಾಸದ ಮೇಲ್ಲಕ್ಷ್ಮಿಯ ಪ್ರಶ್ನೆ ಮತ್ತು ವ್ಯಾಖ್ಯಾನವೆಂದು ಹೇಳಬಹುದು. ಆದರೆ ತೇಜಸ್ವಿಯಂಥವರು ಅಂಡಮಾನ್ ಕುರಿತಂತೆ **"ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್"** ಎಂಬಂಥಹ ಪ್ರವಾಸ ಕಥನವನ್ನು ರಚಿಸಿದ್ದಾರೆ. ಸದಾ ಕಾಲ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಒತ್ತಡಗಳನ್ನು ಮೀರಿ ಬದುಕುವ ತೇಜಸ್ವಿಯಂಥವರು ಈ ಪ್ರವಾಸ ಕೃತಿಯಲ್ಲಿಯೂ ಕೂಡ ಹೊಸ ಹೊಸ ನೋಟಗಳನ್ನು ನೀಡಲೆತ್ನಿಸಿದ್ದಾರೆ. ತೇಜಸ್ವಿಯವರು ತಮ್ಮ ಅಲೆಮಾರಿಯ ಅಂಡಮಾನ್.... ಪ್ರವಾಸಿ ಕಥನದಲ್ಲಿ ಪ್ರವಾಸದ ಕುರಿತಾಗಿ ಶೀರ್ಷಿಕೆಯ ಅನುಸಾರವಾಗಿಯೇ ಅಂಡಮಾನ್‌ನನ್ನು ನೋಡಲೆತ್ನಿಸಿದ್ದಾರೆ. ಈ ಮುಖಾಂತರವಾಗಿಯೂ ಕೂಡ ನಾವು ಈ ಪ್ರವಾಸ ಕಥನಗಳನ್ನು ಪ್ರವೇಶಿಸ ಬಹುದಾಗಿದೆ.

ಕನ್ನಡದಲ್ಲಿ ಬಂದಿರುವ ಎಲ್ಲ ಪ್ರವಾಸ ಕೃತಿಗಳೂ ಕೂಡ, ಗದ್ಯ ರೂಪದಲ್ಲೆ ಇವೆ. ಅವು ಕೇವಲ ಒಣಗದ್ಯವಾಗದೆ; ಕಥನಾತ್ಮಕ ನೆಲೆಯನ್ನು ಪಡೆದಿವೆ. ವಿ.ಸೀ. ಅವರ 'ಪಂಪಯಾತ್ರೆ'ಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ತನಗಾದ ಅನುಭವವನ್ನು ಆತ್ಮಕಥನದ

ನೆಲೆಯಲ್ಲಿ ನಿವೇದಿಸಿಕೊಳ್ಳುವುದು ಮೂರನೆಯ ಹೆಜ್ಜೆಯಾದರೆ ತಾನು ಹೋಗಿ ಬಂದ ಜಾಗದಲ್ಲಿ ಆದ ಪರಸ್ಥಳಾನುಭವಿಗಳು ಬರವಣಿಗೆಗೆ ಕೂತಾಗ ವಸ್ತುದ್ರವ್ಯವು ಪ್ರವಾಸ ಕಥನದ ಹಿನ್ನೆಲೆಯಲ್ಲಿ ನಮ್ಮ ಮನಸ್ಸನ್ನು ತುಂಬುತ್ತದೆ. ಇದು ನಾಲ್ಕನೆಯ ಹೆಜ್ಜೆ ಆಗುತ್ತದೆ.

೧. ಪತ್ರರೂಪದ ಪ್ರವಾಸ ಸಾಹಿತ್ಯ

೨. ದಿನಚರಿ ಪ್ರವಾಸ ಸಾಹಿತ್ಯ

೩. ಕಥಾರೂಪ ಪ್ರವಾಸ ಸಾಹಿತ್ಯ

೪. ವ್ಯಾವಹಾರಿಕ ಪ್ರವಾಸ ಸಾಹಿತ್ಯ

೫. ಪ್ರವಾಸ ಪ್ರೇಮಿ ಪ್ರವಾಸ ಸಾಹಿತ್ಯ

ಇನ್ನು ಎನ್.ಎಸ್. ತಾರಾನಾಥರು ಇಂಗ್ಲಿಷ್ ಪ್ರವಾಸ ಕೃತಿಗಳ ಬಗೆಗೆ ನಡೆದಿರುವ ಚರ್ಚೆಯ ಹಿನ್ನೆಲೆ ಹಾಗೂ ಕನ್ನಡದಲ್ಲಿ ಪ್ರಕಟವಾಗಿರುವ ಕೃತಿಗಳನ್ನು ಅನುಲಕ್ಷಿಸಿ ಮೂರು ಬಗೆಯಾಗಿ ವಿಂಗಡಿಸುತ್ತಾರೆ.

೧. ಮಾಹಿತಿ ಕಥನ ಪ್ರವಾಸ ಸಾಹಿತ್ಯ (Factual account travelogues)

೨. ತೋರು ವಾಸ್ತವತೆಯ ಭ್ರಾಮಕ ಪ್ರವಾಸ ಸಾಹಿತ್ಯ (Fantasy purporting be fact travelogues)

೩. ಅನುಭವಗಳನ್ನು ವರದಿಯಾಗಿಸದೆ ಸಾಹಿತ್ಯವಾಗಿಸುವ ಪ್ರವಾಸ ಸಾಹಿತ್ಯ (travel Litrature with a definite purpose)

ಇವುಗಳಲ್ಲಿ ಅಧ್ಯಯನದ ದೃಷ್ಟಿಯಿಂದ ಎಸ್. ವಿದ್ಯಾಶಂಕರ ಅವರು ಪ್ರವಾಸ ಸಾಹಿತ್ಯವನ್ನು ವಿಂಗಡಿಸುವ ಬಗೆಯನ್ನು ಸದ್ಯಕ್ಕೆ ಒಪ್ಪಬಹುದೆಂದು ತೋರುತ್ತದೆ. ಪ್ರವಾಸ ಸಾಹಿತ್ಯದ ಲಕ್ಷಣವನ್ನು ಬೆರಳು ತೋರಿಸಿ ಹೇಳುವುದಕ್ಕಾಗದಿದ್ದರೂ ವಿದ್ಯಾಶಂಕತ ಅವರು ಹೇಳುವ ಮಾತನ್ನು ಒಪ್ಪಬಹುದು. ಪ್ರವಾಸ ಕಥನವೆನ್ನುವುದು ವ್ಯಕ್ತಿನಿಷ್ಠ ಸಾಹಿತ್ಯ. ಅದು ಭಾವಗೀತೆಯಂತೆ ಲಲಿತ ಪ್ರಬಂಧದಂತೆ ವೈಯಕ್ತಿಕ. ಎಲ್ಲ ಸಾಹಿತ್ಯ ಪ್ರಕಾರಗಳ ಮೂಲ ಸರಕು ಅನುಭವವಾಗಿರುವಂತೆ ಪ್ರವಾಸಕ್ಕೂ ಅದೇ ಆಗಿದೆ. ಪ್ರವಾಸಿಯ ಗ್ರಾಹ್ಯಶಕ್ತಿಯನ್ನವಲಂಬಿಸಿ ಅವನ ಅನುಭವ ಗಟ್ಟಿ ಇಲ್ಲವೆ ಟೊಳ್ಳಾಗಿರುತ್ತದೆ. ಧಾರ್ಮಿಕವಾಗಿರಬಹುದು, ಲೌಕಿಕವಾಗಿರಬಹುದು.

ಗೋಕಾಕರು ಈ ಬಗ್ಗೆ ಹೇಳುವ ಮಾತುಗಳು ಹೀಗಿವೆ: "ಪ್ರವಾಸ ಸಾಹಿತಿಯು ತಾನು ಕಂಡ ಜಗತ್ತನ್ನೆಲ್ಲ ಸ್ಪಷ್ಟವಾಗುವಂತೆ ತನ್ನ ಶಬ್ದ ಚಿತ್ರಗಳಲ್ಲಿ ಮೂಡಿಸಬೇಕು. ಸ್ವಂತದ ದೃಷ್ಟಿಯನ್ನು ಆ ನವೀನ ದೃಷ್ಟಿಯ ಮೇಲೆ ಆರೋಪಿಸಿದ ರೀತಿಯು ಎಲ್ಲೆಡೆಗೆ ಸ್ಫುರವಾಗಿರಬೇಕು. ಇದು ಸಾಧಿಸಿದಲ್ಲಿ ರಸಾನುಭವ, ಮನೋರಂಜನೆ ಉಪಯುಕ್ತತೆ, ಮೊದಲಾದ ಗುರಿಗಳೆಲ್ಲ ಸಫಲವಾಗುವವು.

**ಆಕರ:** ಕನ್ನಡದಲ್ಲಿ ಪ್ರವಾಸ ಸಾಹಿತ್ಯ: ಎನ್.ಎಸ್. ತಾರಾನಾಥ್.
ಕನ್ನಡದಲ್ಲಿ ಪ್ರವಾಸ ಸಾಹಿತ್ಯ: ಮಲ್ಲೇಪುರಂ.ಜಿ. ವೆಂಕಟೇಶ್.

# ಅಧ್ಯಾಯ - ೦೨

## ಪ್ರವಾಸ ಕಥನ: ಒಂದು ನಿರ್ವಚನ

ಒಬ್ಬ ವ್ಯಕ್ತಿ ತನ್ನ ಊರು ಬಿಟ್ಟು ಬೇರೆ ಊರಿಗೆ ಹೋಗಿ ಒಂದಷ್ಟು ದಿನಗಳು ಆ ಪ್ರದೇಶದಲ್ಲಿ ಇದ್ದು ಸುತ್ತಾಡಿಕೊಂಡು ಬರುವುದೇ ಪ್ರವಾಸ ಎನಿಸಿಕೊಳ್ಳುತ್ತದೆ. ಹಾಗಾದರೆ ಈ 'ಪ್ರವಾಸ' ಎನ್ನುವ ಶಬ್ದ ಹುಟ್ಟಿಕೊಂಡಿದ್ದೆಲ್ಲಿ ಎಂಬ ಪ್ರಶ್ನೆ ನಮಗೆ ಮೊದಲು ಎದುರಾಗುತ್ತದೆ.

೧೯ನೆಯ ಶತಮಾನದ ಮೊದಲಿಗೆ ಇಂಗ್ಲೀಷ್ 'Tourist' ಪದವು ಪ್ರವಾಸ ಅಥವಾ ಪ್ರವಾಸ ಮಾಡುವವನು, ಮೇಲಾಗಿ ಇದನ್ನು ಮನರಂಜನೆಗಾಗಿ ಸಂಚರಿಸುವವನು ಎಂಬ ಅರ್ಥದಲ್ಲಿ ಬಳಕೆಗೊಂಡಿತು. ಆದರೆ ಈ 'Tourist' ಎಂಬ ಮೂಲಪದ ಕ್ರಿ.ಶ. ೧೨೯೨ರಷ್ಟು ಹಳೆಯದು. ಅದು ಎಂಬ ಪದದಿಂದ ಬಂದಿದೆ. 'Tour' ಪದವು ಲ್ಯಾಟಿನ್‌ನ 'Tornus' ಎಂಬುದರಿಂದ ಬಂದಿದೆ. ಇದರ ಅರ್ಥ ವೃತ್ತವೊಂದನ್ನು ವಿವರಿಸುವ ಸಾಮಗ್ರಿ ಅಥವಾ ಸುತ್ತುವವನ ಚಕ್ರ ಎಂದು. ೧೭ನೆಯ ಶತಮಾನದ ಪೂರ್ವಾರ್ಧದಲ್ಲಿ ಈ ಪದವು ಮೊದಲಿಗೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸುವುದು, ಒಂದು ಸಂಚಾರ, ಒಂದು ವಿಹಾರಯಾತ್ರೆ, ಒಂದು ದೇಶದ ಅಥವಾ ಪ್ರಾಂತ್ಯದ ಪ್ರಮುಖ ಭಾಗಗಳನ್ನು ಮುಟ್ಟುವ ಒಂದು ಬಳಸಾದ ಪ್ರಯಾಣ ಎಂದು ಬಳಸಲ್ಪಟ್ಟಿತು. '19th Century Dictionary'ಯು Tourist ಪದಕ್ಕೆ "ಕುತೂಹಲದಿಂದ ಪ್ರೇರಿತನಾದ ವ್ಯಕ್ತಿಯೋರ್ವನು ತನಗೆ ಮಾಡಲು ಬೇರೆ ಯಾವುದೂ ಕೆಲಸವಿಲ್ಲದ್ದರಿಂದ ಸುತ್ತಾಟದಿಂದ ಖುಷಿ ಹೊಂದಲು ಪ್ರವಾಸ ಕೈಗೊಂಡವನು' ಎಂಬ ಅರ್ಥ ಮಾಡಿದೆ. ಒಟ್ಟಾರೆ ಶತಶತಮಾನಗಳ ಹಿಂದಿನಿಂದಲೂ ಮಾನವ ಜನಾಂಗ ಅಲೆಮಾರಿಗಳಾಗಿ ಸಂಚರಿಸುತ್ತಿದ್ದ ಸಂದರ್ಭದಲ್ಲಿಯೇ ಈ ಪದ ಹುಟ್ಟಿಕೊಂಡಿದೆಯೆಂದಾಯಿತು. ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ಹೊಟ್ಟೆಪಾಡಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸಿದ್ದು ಅನೇಕ ಮೂಲಗಳಿಂದ ತಿಳಿದು ಬರುತ್ತದೆ. ಅದೆಲ್ಲ ಪಯಣವೇ ಹೊರತು ಪ್ರವಾಸವಲ್ಲ. ಹಾಗೆಯೇ ಮುಂದುವರೆದಂತೆ ನಾಗರಿಕತೆ ಬೆಳೆದಂತೆ ಬುದ್ಧಿ ಬೆಳೆಯತೊಡಗಿದಂತೆ ಧಾರ್ಮಿಕದಲ್ಲಿ ನಂಬಿಕೆ ಇಟ್ಟವರು ತೀರ್ಥಯಾತ್ರಾರ್ಥಿಳಾಗತೊಡಗಿದರು. ಆರ್ಥಿಕದಲ್ಲಿ ನಂಬಿಕೆ ಇಟ್ಟವರು ಉದ್ಯಮಿಗಳಾಗತೊಡಗಿದರು. ಬುದ್ಧಿ ಜೀವಿಗಳು ಜ್ಞಾನಾರ್ಜನೆಗಾಗಿ ಸಂಚರಿಸತೊಡಗಿದೆ ಉತ್ಸಾಹಿ ಯುವಕರು ಹೊಸ ಹೊಸ ಸ್ಥಳಗಳ ಅನ್ವೇಷಣಾರ್ಥಿಗಳಾಗಿ ದೇಶವಿದೇಶಗಳ ತುಂಬೆಲ್ಲ ಸಂಚರಿಸತೊಡಗಿದರು.

ಸುಮಾರು ಆರು ಸಾವಿರ ವರ್ಷಗಳಷ್ಟು ಹಿಂದೆಯೇ ಸುಮೇರಿಯನ್ನರು ಬೆಬಿಲೋಯಿಯನ್ನರು ವಾಣಿಜ್ಯ ವ್ಯವಹಾರದ ಮಹತ್ವವನ್ನು ಕಂಡುಕೊಂಡಿದ್ದರು. ಅಂದು

ಆರಂಭವಾದ ವಾಣಿಜ್ಯ ಪ್ರವಾಸ ಮುಂದುವರೆದಂತೆ ಗುಂಪು ಗುಂಪುಗಳಾಗಿ ಗಡಿಗಳನ್ನು ದಾಟುತ್ತ ಸುತ್ತಾಡತೊಡಗಿದರು. ಸಮುದ್ರದ ಏರುಬ್ಬರಗಳಿಗೂ ಹೆದರದೆ ತೆಪ್ಪಗಳ ಮುಖಾಂತರ ಸಾಹಸಮಾಡುತ್ತ ದೂರದೂರಕ್ಕೆ ಹೋಗುತ್ತ ಅಲ್ಲಲ್ಲಿಯ ದಂಡೆಗಳನ್ನು ತಲುಪುತ್ತಿದ್ದರು.

ಡಾ॥ ಎಚ್.ಎಲ್. ನಾಗೇಗೌಡರ **'ಪ್ರವಾಸಿ ಕಂಡ ಇಂಡಿಯಾ'** ಸಂಪುಟಗಳಲ್ಲಿ, ೧೧, ೧೨ನೆಯ ಶತಮಾನದವರೆಗೆ ಭಾರತಕ್ಕೆ ಬಂದ ಪ್ರಾಸಿಗಳ ಸಾಂಸ್ಕೃತಿಕ ಕಥನ ಮಾಲೆಯಲ್ಲಿ ಗ್ರೀಕ್ ಮತ್ತು ಚೀನಾ ದೇಶದ ಯಾತ್ರಿಕರಿಂದ ಕಥನ ಆರಂಭವಾಗುತ್ತದೆ. ಮೊದಲಿಗೆ ಹಿರೊಡೊಟಸ್ ಬರುತ್ತಾನೆ. ೧೩ನೆಯ ಶತಮಾನದ ಕೊನೆಯ ದಶಕದಲ್ಲಿ ಚೈನಾಕ್ಕೆ ಹೋಗಿ ಹಿಂದಿರುಗುವ ಮಾರ್ಗದಲ್ಲಿ ಭಾರತಕ್ಕೆ ಭೇಟಿ ನೀಡಿದ ಯುರೋಪ ಪ್ರವಾಸಿ ಜಾನ್ ಆಫ್ ಮಾಂಟೆ ಕೊರ್ರಿನೋ ಹೆಸರು ಸಿಗುತ್ತದೆ. ೧೪ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಮಾರ್ಕೊಪೋಲೋ, ಅಬ್ದುಲ್ ರಜಾಕ್, ಬಾರ್ಬೊಸಾ, ಸೀಜರ್, ಫ್ರೆಡರಿಕ್ ಮುಂತಾದವರು ಭಾರತಕ್ಕೆ ಬಂದು ದೇಶದ ಉದ್ದಗಲಕ್ಕೂ ಅಡ್ಡಾಡಿ, ಭೇಟಿಯಾದ ಆಯಾ ಪ್ರದೇಶಗಳ ಮಾಹಿತಿಗಳನ್ನು ಬರೆದಿಟ್ಟರುವುದಾಗಿ ತಿಳಿಯುತ್ತದೆ. ದಂಡಯಾತ್ರಿಯಾದ ಅಲೆಕ್ಸಾಂಡರ್‌ನನ್ನು ಭಾರತ ಆಕರ್ಷಿಸಿದೆ. ಕ್ರಿಸ್ಟೋಫರ್ ಕೊಲಂಬಸ್‌ನಂತಹ ಸಾಹಸಿಗನು ಭಾರತಕ್ಕೆ ಹೊಸ ಮಾರ್ಗ ಕಂಡು ಹಿಡಿಯಲು ಹೊರಟವನು ಬೇರೊಂದು ಹೊಸ ಪ್ರಪಂಚವನ್ನು ಕಂಡು ಹಿಡಿದ.

ಹೀಗೆ ಹೊಸ ಸ್ಥಳಗಳ ಅನ್ವೇಷಣೆಯಲ್ಲಿ, ಅಲ್ಲಿಯ ಸಂಪತ್ತು ವ್ಯಾಪಾರಗಳ ವಹಿವಾಟಿನ ಹಂಬಲದಲ್ಲಿ ಸಾಹಸಿ ಜನರು ತಂಡೋಪತಂಡವಾಗಿ ನೌಕೆಯನ್ನು ಹತ್ತಿಜಿಡುತ್ತಿದ್ದರು. ಇದೇ ಶತಮಾನದಲ್ಲಿ ಭಾರತಕ್ಕೆ ಬಂದ ಇತರ ಪ್ರವಾಸಿಗಳೆಂದರೆ ಫಾದರ್ ಥಾಮಸ್ ಸ್ಟಿವೆನ್ಸ್, ಆ್ಯಂತೋನಿ, ನಿಕೊಲೆಸ್ ಮುಂತಾದವರು ಭಾರತದ ಬಗೆಗೆ ವಿವರವಾದ ಕಥನಗಳನ್ನು ಬರೆದಿದ್ದಾರೆ. ಹಾಗೆಯೇ ಹೆಸರಾಂತ ಪ್ರವಾಸಿಗಳಾದ ಹೊಡೊವಿಕೆ, ಸೆಬಾಸ್ಟಿನ್ ಮುಂತಾದವರೂ ಭಾರತದ ಸಾಂಸ್ಕೃತಿ ಹಿನ್ನೆಲೆಯ ಪರಿಚಯವನ್ನು ಕೊಟ್ಟಿದ್ದಾರೆ.

೧೭ನೆಯ ಶತಮಾನದ ಔರಂಗಜೇಬನ ಆಳ್ವಿಕೆಯಲ್ಲಿ ಬಂದಿದ್ದ ಇಟಲಿ ದೇಶದ ಪ್ರವಾಸಿಗ 'ಮನೂಚಿ' ಅಂದಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿವರಗಳನ್ನು ತನ್ನ ಪ್ರವಾಸ ಕಥನದಲ್ಲಿ ಪರಿಚಯಿಸಿದ್ದಾನೆ. ೧೮ನೆಯ ಶತಮಾನದ ಅಂದರೆ ಬ್ರಿಟಿಷರ ಆಳ್ವಿಕೆಯ ಸಮಯದಲ್ಲಿ ಭಾರತಕ್ಕೆ ಬಂದ ರಾಬರ್ಟ್‌ಕೂಕರ್, ಹೆನ್ರಿಲಾರ್ಡ್, ಜಾನ್ ಓವಿಂಗ್‌ಟನ್ ಮುಂತಾದ ಹತ್ತು ಪ್ರವಾಸಿಗರು ತಾವು ಕಂಡ ಇಂಡಿಯಾ ಬಗೆಗೆ ಬರೆದ ಪ್ರವಾಸ ಕಥನ ಬಂದಿದೆ. ಇನ್ನಷ್ಟು ವಿವರಗಳಿಗೆ ನಾಗೇಗೌಡರ ಪ್ರವಾಸಿ ಕಂಡ ಇಂಡಿಯಾ ಓದಬಹುದು.

ವ್ಯಾಪಾರದ ಅನ್ವೇಷಣೆ, ಹೊಸ ಸ್ಥಳಗಳ ಅನ್ವೇಷಣೆಗೆ ಸುತ್ತಾಡುತ್ತಿದ್ದ ಪ್ರವಾಸಿಗರ ಯೋಜನೆ ಒಂದು ಕಡೆಗಾದರೆ ಧರ್ಮದ ನೆಪದಲ್ಲಿ ತೀರ್ಥಕ್ಷೇತ್ರಗಳಿಗೆ ಮಧ್ಯಕಾಲದ ಅಂತ್ಯದಲ್ಲಿ ಬಹುದೊಡ್ಡ

ಪ್ರಮಾಣದ ಯಾತ್ರಾರ್ಥಿಗಳು ಯುರೋಪಿನ ಹಾಗೂ ಅದಕ್ಕೆ ಚರ್ಚುಗಳಿಗೆ ಪ್ರವಾಸ ಕೈಕೊಂಡಿದ್ದರು. ಕ್ರಿಶ್ಚಿಯನ್ ಮತದ ಪ್ರಚಾರ ಹಾಗೂ ಅದಕ್ಕೆ ಮತಾಂತರಗೊಂಡವರಿಂದಾಗಿ ಧಾರ್ಮಿಕ ಪ್ರವಾಸ ಹೆಚ್ಚಿನ ರಂಗು ಪಡೆಯಿತು. ಧರ್ಮದ ಬಗೆಗೆ ಜನರಲ್ಲಿ ಗಾಢವಾದ ನಂಬುಗೆ ಇರುವುದರಿಂದಾಗಿ ಶತಶತಮಾನಗಳಿಂದಲೂ ಧಾರ್ಮಿಕ ಪ್ರವಾಸ ಸಾಗಿ ಬಂದಿದೆ. ಜನರನ್ನು ಒಂದುಗೂಡಿಸುವ ಪ್ರಬಲ ಇರುವ ಶಕ್ತಿ ಧರ್ಮಕ್ಕಿದೆ. ಧಾರ್ಮಿಕ ಪ್ರಚಾರವು ಜನರಲ್ಲಿ ಧರ್ಮವು ಮೊದಲಿಗೆ ಯುರೋಪಿನಲ್ಲಿ ನಂತರ ಅಮೆರಿಕಾದಲ್ಲಿ, ಬೌದ್ಧ ಧರ್ಮ, ಇಸ್ಲಾಂ ಧರ್ಮ, ಹಿಂದೂ ಧರ್ಮಗಳ ಏಷ್ಯಾದಲ್ಲಿ ಅವಕಾಶ ಪಡೆದು ಭಾಷೆ, ಸಾಹಿತ್ಯ, ಸಂಗೀತ, ಕಲೆ, ವಾಸ್ತುಶಿಲ್ಪ ವೇದಾಂತ ಇವುಗಳನ್ನು ಅಭಿವೃದ್ಧಿ ಪಡಿಸುವ ಚಿರಸ್ಮರಣೀಯ ಕಾರ್ಯವನ್ನು ಮಾಡಿದವು. ಹೀಗೆ ಧರ್ಮವು ವಿಶ್ವದ ಜನತೆಯ ಬದುಕಿನಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದ್ದು ಅದು ಪ್ರವಾಸದಲ್ಲಿಯೂ ನಿರ್ಣಾಯಕ ಪಾತ್ರವನ್ನು ಹೊಂದಿದೆ ಎನ್ನುತ್ತಾರೆ ಎಸ್. ವಿದ್ಯಾಶಂಕರ.

ಒಂದು ಕಾಲಕ್ಕೆ ನಮ್ಮ ಪೂರ್ವಜರ ಪ್ರವಾಸದ ಕಾರಣಗಳು ಕೆಲವೇ ಕೆಲವು ಇದ್ದವು. ಪುಣ್ಯಕ್ಷೇತ್ರಗಳ ದರ್ಶನ ಅತೀ ಪ್ರಾಮುಖ್ಯತೆಯನ್ನು ಹೊಂದಿತ್ತು. ಪುಣ್ಯ ಪ್ರಾಪ್ತಿ ಹೊಂದುವುದೇ ಮುಖ್ಯ ಉದ್ದೇಶವಾಗಿತ್ತು. ನಂತರ ಧರ್ಮ ಪ್ರಚಾರಕ್ಕಾಗಿ, ರಾಜರುಗಳ ಆಡಳಿತ ಕಾಲದಲ್ಲಿ ದಿಗ್ವಿಜಯಕ್ಕಾಗಿ ಹೀಗೆ. ಆದರೆ ೨೦ನೆಯ ಶತಮಾನದ ಪ್ರವಾಸ ಉದ್ದೇಶಗಳ ಪಟ್ಟಿ ಮಾಡುತ್ತ ಹೋದರೆ ಬೆಚ್ಚಿ ಬೀಳುವಂತಾಗುತ್ತದೆ. ಕೆಲವರು ಗೊತ್ತು ಗುರಿಯಿಲ್ಲದ ಅಲೆಮಾರಿ ಪ್ರವಾಸಿಗರನ್ನು ಕಾಣುತ್ತೇವೆ. ಇದೂ ಒಂದು ಅವರ ವಿಚಿತ್ರ ಅನುಭವವೆಂದು ಹೇಳಬೇಕಾಗುತ್ತದೆ. (ಇದು ಶ್ರೀಮಂತ ವರ್ಗ, ಪಾಶ್ಚಾತ್ಯ ದೇಶಗಳಲ್ಲಿಯ ವಿಚಿತ್ರ ಮನೋವೃತ್ತಿಯವರ ಹವ್ಯಾಸ) ಎಂದು ಹೇಳಬೇಕಾಗುತ್ತದೆ.

ಎರಡನೆಯದಾಗಿ ಪ್ರವಾಸವೆಂದರೆ 'ತೀರ್ಥಯಾತ್ರೆ' ಎಂಬ ಧೋರಣೆಯು ಪ್ರವಾಸಿ ಸಾಹಿತ್ಯದ ಪ್ರಾರಂಭದ ಕಾಲಘಟ್ಟದಲ್ಲಿ ಕಂಡು ಬರುತ್ತಿತ್ತು. ಆದರೆ ಕಾಲಾನಂತರ ಪ್ರವಾಸ ಸಾಹಿತ್ಯ ತೊಟ್ಟ ರೂಪ ಯಾವುದು? ಎಂಬುದು ಕೂಡ ಬಹು ಚರ್ಚಿತ ವಿಷಯ ಎಂಬುದು ನನ್ನ ಭಾವನೆ.

ಭಾರತೀಯ ಪ್ರವಾಸಿಯ ಮನಸ್ಸು ಸುಮ್ಮನೆ ಸಂತೋಷಕ್ಕೋಸ್ಕರ ಸಂಚಾರ ಮಾಡುವುದು ಭಾರತೀಯ ಮನಸ್ಸಿಗೆ ಒಗ್ಗುವಂಥ ವಿಷಯ ಅಲ್ಲ. ಅದೇನಿದ್ದರೂ ತೀರ್ಥಯಾತ್ರೆಯನ್ನು ಇಷ್ಟಪಡುವಂಥ ಮನಸ್ಸು ಅದು. ನಮ್ಮಲ್ಲಿ ಶುದ್ಧ ಪ್ರವಾಸ ಇಲ್ಲವೇ ಇಲ್ಲ. ಏನಿದ್ದರೂ ಪುಣ್ಯ ಕ್ಷೇತ್ರಗಳನ್ನು ಹುಡುಕಿಕೊಂಡು ಹೋಗಿ, ನದಿಗಳಲ್ಲಿ ಸ್ನಾನ ಮಾಡಿ, ಬೆಟ್ಟಗಳನ್ನು ಹತ್ತಿ, ಅಲ್ಲಿ ದೇವರ ದರ್ಶನ ಮಾಡಿಕೊಂಡು ಪಾಪ ಪರಿಹಾರ ಮತ್ತು ಪುಣ್ಯ ಸಂಪಾದನೆ ಇತ್ಯಾದಿಗಳಿಗೆ

ಬದ್ಧವಾದ ಒಂದು ಸಂಚಾರವಾಗಿರತ್ತೇ ಹೊರತಾಗಿ ಆಧುನಿಕ ಅರ್ಥದ ಪ್ರವಾಸ ಅಂತ ಏನು ಕರೀತೀವಿ ಆ ಕಲ್ಪನೆ ನಮ್ಮಲ್ಲಿ ಇಲ್ಲ.

ಭಾರತೀಯ ಮನೋಧರ್ಮ ಶುದ್ಧ ಗಣಪತಿ ಮನೋಧರ್ಮ! ನಮಗೆ 'ಸ್ವದೇಶೋ ಭುವನತ್ರಯಂ', ಅಷ್ಟೆ. ಈ ದೇಶವೇ ಮೂಲಭೂತ; 'ಸ್ವದೇಶೋ ಭುವನತ್ರಯಂ' ಅನ್ನುವ ಒಂದು ಮನೋಧರ್ಮದಿಂದ 'ಭುವನತ್ರಯವೇ ಸ್ವದೇಶ' ಎನ್ನವ ಕಲ್ಪನೆ ನಮ್ಮಲ್ಲಿ ರೂಢಿಸಿಕೊಂಡಿದ್ದೇವೆ. ಹೊರದೇಶದಕ್ಕೆ ಹೋಗುವಾಗ ಪದ್ಧತಿಯೇ ಇರಲಿಲ್ಲ. ವಿದೇಶಕ್ಕೆ ಹೋಗುವುದೇ ಒಂದು ಮಹಾಪರಾಧ. ಶಾಸ್ತ್ರಗಳ ಪ್ರಕಾರ, ಯಾರಾದರೂ ಪರದೇಶಕ್ಕೆ ಹೋದರೆ, ಸಮುದ್ರವನ್ನು ದಾಟಿದ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತಿತ್ತು. ಇಂಥ ಕತೆಗಳು ಬೇಕಾದಷ್ಟಿವೆ. ಹೀಗೆ ವಿದೇಶಕ್ಕೆ ಹೋಗುವುದು ಒಂದು ಅಪರಾಧವೇ ಆಗಿತ್ತು. ಇಲ್ಲಿ ಒಂದು ಕೊಳ್ಳೆ ಹೊಡೆದರೆ ಹೊರತಾಗಿ ಇಂಡಿಯಾ ದೇಶದ ಜನ ಇದನ್ನು ದಾಟಿ ಆ ಕಡೆ ಬೇರೆ ಬೇರೆ ದೇಶಗಳನ್ನು ಗೆಲ್ಲಬೇಕು ಅನ್ನುವ ಮಹತ್ತ್ವಾಕಾಂಕ್ಷೆ ನಮ್ಮವರಿಗೆ ಬರಲೇ ಇಲ್ಲ. ಒಂದು ರೀತಿಯಲ್ಲಿ ಪುಣ್ಯ ಸಂಪಾದನೆ, ಆಧ್ಯಾತ್ಮಿಕವಾದ ಧಾರ್ಮಿಕವಾದ ಭಾವನೆಗಳಿದ್ದುವೇ ಹೊರತಾಗಿ ಪ್ರವಾಸ ಮಾಡುವುದರಿಂದ ಲಾಭ ಉಂಟು; ಅನುಭವದ ವಿಸ್ತರಣೆ ಉಂಟು; ಪ್ರಯೋಜನ ಉಂಟು ಅನ್ನುವ ಕಲ್ಪನೆ ಬಹುಶಃ ನಮ್ಮಲ್ಲಿ ಬೆಳೆದದ್ದು ಇತ್ತೀಚೆಗೆ. **ರೋಜರ್ ಬೇಕನ್** ಎಂಬ ಇಂಗ್ಲಿಷ್ ಪ್ರಬಂಧಕಾರ ಒಂದು ಮಾತು ಹೇಳುತ್ತಾನೆ: "ಪ್ರವಾಸ ಅನ್ನುವುದು ಚಿಕ್ಕಂದಿನಲ್ಲಿ ಶಿಕ್ಷಣದ ಒಂದು ಭಾಗ; ದೊಡ್ಡವರಲ್ಲಿ ಅನುಭವದ ಒಂದು ಭಾಗ" ಚಿಕ್ಕ ಮಕ್ಕಳಿಗೆ ಪ್ರವಾಸ ಮಾಡುವ ಒಂದು ಅನುಕೂಲವನ್ನು ಇವತ್ತು ನಮ್ಮ ಶಿಕ್ಷಣ ಕ್ರಮದಲ್ಲೇ ಅಳವಡಿಸಿದ್ದೇವೆ. ಪ್ರವಾಸ ಅನ್ನುವುದು ಶಿಕ್ಷಣದ ಒಂದು ಭಾಗವಾಗಿದೆ. ಬೆಳೆದ ಮೇಲೆ ಅನುಭವದ ಒಂದು ಭಾಗವಾಗುತ್ತದೆ. ಈ ಪ್ರವಾಸವನ್ನು ನೋಡಿದಾಗ ವಿಸ್ತಾರವಾದ ಅನುಭವವನ್ನು ನಮ್ಮ ಮುಂದೆ ಅವರು ತೆರೆದಿದ್ದಾರೆ; ಅನ್ನುವುದುನ್ನು ನಾವು ಕಾಣಬಹುದು.

ಹೀಗಾಗಿ ಒಂದು ಪ್ರವಾಸ ಕಥನವನ್ನು ಕೈಯಲ್ಲಿಟ್ಟುಕೊಂಡರೆ ನಮಗೆ ಅನಾಯಸವಾಗ ಪ್ರವಾಸವಾಗುತ್ತದೆ. ಕೂತಲ್ಲಿಯೇ ನಾವು ಜಗತ್ತನ್ನು ನೋಡಬಹುದು. ದುಡ್ಡಿದ್ದವರು ಖರ್ಚು.ಮಾಡುವುದಕ್ಕೆ ಸಾಮರ್ಥ್ಯವಿದ್ದವರು; ಹೊರಗಡೆ ಹೋಗಬಹುದು. ಪ್ರವಾಸ ಬಹಳ ಖರ್ಚಿನ ಕೆಲಸ. ಆದರೆ ಹೊರಗಡೆ ಹೋಗಿ ಬಂದು ಅದನ್ನು ಬರೆಹಕ್ಕಿಳಿಸಿದರೆ ಕೂತಲ್ಲಿಯೇ ನಾವು ಆ ಪುಸ್ತಕದ ಮೂಲಕ ಅನೇಕ ಅನುಭವವಗಳನ್ನು ಪಡೆಯಬಹುದು. ಹೀಗೆ ಪ್ರವಾಸ ಅನ್ನುವಂಥದ್ದು ಅನಾಯಾಸವಾದ ರೀತಿಯಲ್ಲಿ ಹೊರಗಡೆ ಹೋಗಲಾರದ ಬಹುಸಂಖ್ಯಾಕರನ್ನು ಕೂತಲ್ಲಿಯೇ ಪ್ರವಾಸಕ್ಕೆ ವ್ಯವಸ್ಥೆ ಮಾಡುವಂಥ ಒಂದು ಟೆಕ್ನಿಕ್ ಆಗಿ ಪರಿಣಮಿಸುತ್ತಿದೆ.

ಕನ್ನಡದಲ್ಲಿ ಪ್ರವಾಸಕಥನಗಳೇನೋ ಬಹಳವಾಗಿವೆ. ಆದರೆ ಪ್ರವಾಸ ಸಾಹಿತ್ಯದ ಸ್ವರೂಪ-ಲಕ್ಷಣ, ರೀತಿ-ನಿಯಮಗಳನ್ನು ಕುರಿತಂತೆ ಬರೆಹಗಳಿದ್ದಂತಿಲ್ಲ. 'ವಿಶ್ವಕೋಶ' ಸಂಪುಟಗಳಲ್ಲಿ ಚೆದುರಿರುವ ಕೆಲವು ಕಿರುಬರೆಹಗಳು. ಡಾ.ಸಾ.ಶಿ. ಮರುಳಯ್ಯನವರ 'ಕನ್ನಡ ನುಡಿ' ಬೆಳ್ಳಿ ಸಂಚಿಕೆಯ ಒಂದು ಲೇಖನ, ವರದರಾಜ ಹುಯಿಲಗೋಳರ 'ಪ್ರಬುದ್ಧ ಕರ್ಣಾಟಕ'ದ ಚಿನ್ನದ ಸಂಚಿಕೆಯ ಒಂದು ಲೇಖನ- ಇವನ್ನುಳಿದರೆ ಕನ್ನಡದಲ್ಲಿ ಎದ್ದು ಕಾಣುವ ಬೇರೆ ಬರೆಹಗಳಾವುವೂ ಇಲ್ಲ. ಕನ್ನಡದಲ್ಲಿರಲಿ, ಇಂಗ್ಲಿಷ್‌ನಲ್ಲೇ ಪ್ರವಾಸ ಸಾಹಿತ್ಯದ ಪ್ರಕಾರ ವಿಶ್ಲೇಷಣೆ ಮಾಡಿರುವ ಕೃತಿಗಳಿಲ್ಲ. ಇಂಗ್ಲಿಷ್‌ನಲ್ಲಿ ಪ್ರವಾಸ ಸಾಹಿತ್ಯವನ್ನು 'ಟ್ರಾವೆಲೋಗ್' (Travelogue) ಅಥವಾ 'ಟ್ರಾವೆಲ್ ಲಿಟರೇಚರ್' (Travel Literature) ಎಂದು ಕರೆಯುತ್ತಾರೆ. ಆದರೆ ಈ ಟ್ರಾವೆಲೋಗ್/ಟ್ರಾವೆಲ್ ಲಿಟರೇಚರ್‌ನನ್ನು ಇಂಗ್ಲಿಷ್‌ನ ಯಾವುದೇ ಕೋಶಗಳೂ ವಿವರಿಸಿದಿರುವುದು ಆಶ್ಚರ್ಯಕರವಾದದ್ದು; ಸಾಹಿತ್ಯದ ಪರಿಭಾಷಾ ಶಬ್ದಗಳನ್ನು (Literature terms) ಕುರಿತಂತೆ ಜೋಸೆಫ್ ಷಿಪ್ಲಿ, ರೋಜರ್ ಫ್ಲಾವರ್ ಮತ್ತು ಜೆ.ಎ.ಸಡನ್ ಮತ್ತಿತರರು ಬರೆದ ಕೃತಿಗಳಲ್ಲಿ ಕೂಡ ಟ್ರಾವೆಲೋಗ್‌ನ ಸೂತ್ರ ವಿವರಣೆಗಳಿರುವುದು ಕುತೂಹಲಕರವಾದದ್ದು. ಅಲ್ಲೆಲ್ಲ ಪ್ರವಾಸ ಸಾಹಿತ್ಯವನ್ನು ಒಂದು ಗಂಭೀರವಾದ, ಪ್ರಮುಖವಾದ ಸಾಹಿತ್ಯ ಪ್ರಕಾರ ಎಂದು ಭಾವಿಸಿದಂತಿಲ್ಲ. ಆದ್ದರಿಂದ ಪ್ರವಾಸ ಸಾಹಿತ್ಯ ಎಂದರೇನು ಎಂಬುದನ್ನು ನಾವೇ ಮೊದಲಿಗೆ ಹೇಳಬೇಕಾದ ಸ್ಥಿತಿಯುಂಟಾಗಿದೆ.

ನಮ್ಮಲ್ಲಿ 'ದೇಶ ಸುತ್ತಬೇಕು ಕೋಶ ಓದಬೇಕು' ಎಂಬ ಒಂದು ಗಾದೆಯಿದೆ. ಸಾಮಾನ್ಯ ಮನುಷ್ಯನ ಲೋಕಜ್ಞಾನ, ಅನುಭವಗಳು ವಿಸ್ತಾರಗೊಳ್ಳಲಿ ಎಂದು ಈ ಮಾತನ್ನು ಹೇಳುತ್ತಿದ್ದರು. ಕುಳಿತು ಕೋಣೆಯಲ್ಲಿ ಪುಸ್ತಕ ಓದುವುದರ ಮೂಲಕ, ಇಲ್ಲವೇ ನಡೆದು ದೇಶ ಸಂಚಾರ ಮಾಡುವುದರ ಮೂಲಕ ಒಬ್ಬ ವ್ಯಕ್ತಿಯ ಜೀವನಾನುಭವ ಪ್ರಾಪಂಚಿಕ ತಿಳಿವಳಿಕೆಗಳು ಹೆಚ್ಚಾಗುತ್ತಿದ್ದವು ಎಂಬುದನ್ನು ಈ ಮಾತು ಧ್ವನಿಸುತ್ತದೆ. ಆದರೆ ಪ್ರಾಚೀನ ಭಾರತದಲ್ಲಿನ ಜನ ಇಂಥ ಪ್ರವಾಸ ಕೈ ಗೊಳ್ಳುತ್ತಿದ್ದುದು ತಮ್ಮ ಜೀವನ ಸಂಧ್ಯೆಯಲ್ಲಿ, ಉತ್ಸಾಹದ ತಾರುಣ್ಯ ಕಳೆದ ಅನಂತರವೇ. ತೀರ್ಥಯಾತ್ರೆಯ ರೂಪದಲ್ಲಿ ಪ್ರವಾಸ ಆ ಕಾಲದಲ್ಲಿ ಪ್ರಚಲಿತವಾಗಿತ್ತು. ಇಂಥ ತೀರ್ಥಯಾತ್ರೆ ಕೂಡ ಕಾಶಿ, ರಾಮೇಶ್ವರ, ಹರಿದ್ವಾರವೇ ಮುಂತಾದ ದೈವಕ್ಷೇತ್ರಗಳ ಸಂದರ್ಶನಕ್ಕೆ ಮೀಸಲಾಗಿತ್ತು. ಎಂದರೆ ಪ್ರಾಚೀನ ಭಾರತೀಯರ ಪ್ರವಾಸ ಹೆಚ್ಚು ಕಡಿಮೆ ಭಾರತೀಯ ನೆಲದಲ್ಲೇ ಒಂದು ತುದಿಯಿಂದ ಇನ್ನೊಂದು ತುದಿಗೆ ಹೋಗುವ ಮಟ್ಟಿಗೆ ಸೀಮಿತವಾಗಿತ್ತು. ಇದಕ್ಕೆ ಕಾರಣ ಸಮುದ್ರಯಾನ ಮಾಡಿ, ಸೀಮೆ ದಾಟುವುದನ್ನು ಆ ಕಾಲದ ಜನ ಹಾಗೂ ಧರ್ಮ ಗ್ರಂಥಗಳು ಒಪ್ಪಿರಲಿಲ್ಲ. ಹೀಗೆ ಮಾಡಿದರೆ ಇದ್ದದ್ದು ಮೆಚ್ಚುಗೆಯ ಪುರಸ್ಕಾರವಲ್ಲ; ಬಹಿಷ್ಕಾರದ ದಂಡನೆ ! ಹೀಗಾಗಿ ದೇಶ ದಾಟುವ ಕಲ್ಪನೆ, ಪ್ರಯತ್ನಗಳು ನಮ್ಮಲ್ಲಿ ಇರಲೇ ಇಲ್ಲವೆನ್ನಬಹುದು.

ಇದಕ್ಕೆ ವ್ಯತಿರಿಕ್ತವಾಗಿ ವಿದೇಶೀಯರು ಹಲವಾರು ಮಂದಿ ಭಾರತದ ಮೂಲೆ ಮೂಲೆಗಳನ್ನು ಸುತ್ತಿದ್ದಾರೆ; ಸಂದರ್ಶಿಸಿದ್ದಾರೆ; ತಮ್ಮ ದೇಶಕ್ಕೆ ಹಿಂದಿರುಗಿದ ಮೇಲೆ ತಮ್ಮ ಭಾರತಾನುಭವಗಳನ್ನು ಕುರಿತು ಬರೆದಿದ್ದಾರೆ. ವಿದೇಶಿಯರ ಇಂಥ ಭಾರತ ಸಂಚಾರ ವಿವರಣೆಯಿರುವ 'ಪ್ರವಾಸಿ ಕಂಡ ಇಂಡಿಯಾ'ದ ಏಳು ಸಂಪುಟಗಳನ್ನು ಎಚ್.ಎಲ್. ನಾಗೇಗೌಡರು ಕನ್ನಡದಲ್ಲಿ ತಂದಿದ್ದಾರೆ. ಈ ಬಗೆಯ ವಿದೇಶಾನುಭವಗಳನ್ನು ಕುರಿತ ಪ್ರಾಚೀನ ಭಾರತೀಯ ಗ್ರಂಥವೊಂದು ಇಲ್ಲ; ಇದಿರಲಿ, ಭಾರತದಲ್ಲೇ ಸಾವಿರಾರು ಮೈಲು ದೂರವಿರುವ ರಾಜ್ಯಗಳನ್ನು ಕಾಲ್ನಡಗೆಯಲ್ಲಿ ಕ್ರಮಿಸಿ, ಸಂದರ್ಶಿಸಿದ ಪ್ರಾಚೀನ ಅನುಭವ ಕಥನಗಳನ್ನೂ ನಮ್ಮವರು ಬರೆದಿಟ್ಟಿಲ್ಲ! ಹೀಗಾಗಿ ಪ್ರವಾಸ ಸಾಹಿತ್ಯವೆಂಬ ಪ್ರಾಕಾರವೊಂದನ್ನು ಕಾಣಲು ಹೆಚ್ಚು ಕಡಿಮೆ ನಾವು ಆಧುನಿಕ ಯುಗಕ್ಕೆ ಬರಬೇಕಾಗಿದೆ. ಸಹಜವಾಗಿಯೇ ಇದರಿಂದ ಪ್ರಾಚೀನ ಸಾಹಿತ್ಯದಲ್ಲಿ ಇದರ ಉಲ್ಲೇಖ ಸ್ವರೂಪಗಳನ್ನು ಕಾಣಲಾಗಿದೆ.

ಹಾಗಾದರೆ ಪ್ರವಾಸ ಸಾಹಿತ್ಯ ಎಂದರೇನು? ಒಬ್ಬ ವ್ಯಕ್ತಿ ತನ್ನದಾದಂತಹ ಒಂದು ಊರು/ ಜಾಗವನ್ನು ಬಿಟ್ಟು ತನ್ನದಲ್ಲದಂಹ ಇನ್ನೊಂದು ಜಾಗಕ್ಕೆ ಹೋಗಿ ಆ ಪ್ರದೇಶವನ್ನು ಸುತ್ತಿ ಬಂದು ಆ ಹೊಸ ಜಾಗದಲ್ಲಿ ಆದಂಥಹ ಅನುಭವಗಳನ್ನು ಬಣ್ಣಿಸಿದ, ಅಲ್ಲಿ ನೋಡಿದಂತಹ ಪ್ರೇಕ್ಷಣಿಯ ಸ್ಥಳಗಳನ್ನು ವರ್ಣಿಸಿದ. ಅಲ್ಲಿನ ಜನರ ರೀತಿ–ನೀತಿ ಜೀವನ ವಿಧಾನಗಳನ್ನು ವಿವರಿಸಿದ ಸಾಹಿತ್ಯವನ್ನು ಸ್ಥೂಲವಾಗಿ ಪ್ರವಾಸ ಸಾಹಿತ್ಯವೆಂದು ಕರೆಯಬಹುದು.

ಸಾಮಾನ್ಯ ಲಕ್ಷಣಗಳು ದೊರೆಯುತ್ತವೆ. ಅವು ಹೀಗೆ:

೧) ಪ್ರವಾಸ ಸಾಹಿತ್ಯ ಬಹುಮಟ್ಟಿಗೆ ಗದ್ಯರೂಪದಲ್ಲಿ ಇರುತ್ತದೆ. ಬಹುಮಟ್ಟಿಗೆ ಏನು, ಒಂದೆರಡು ಅಪವಾದಗಳನ್ನು ಉಳಿದರೆ ಅದು ಗದ್ಯ ಬರೆಹವೇ ಆಗಿರುತ್ತದೆ. ಒಟ್ಟಿನಲ್ಲಿ ಅದೊಂದು ಗದ್ಯ ನಿರೂಪಣ (Prose Narrative).

೨) ಪ್ರವಾಸ ಕಥನಗಳಲ್ಲಿ ಕೃತಿಯುದ್ದಕ್ಕೂ ಪ್ರಧಾನವಾಗಿ ನಿರೂಪಣ ಶೈಲಿಯಿರುತ್ತದೆ. ಸಂಭಾಷಣಾ ಶೈಲಿಯಾಗಲಿ, ಪದ್ಯವಿಧಾನ ಕ್ರಮವಾಗಲಿ ಅಥವಾ ನಾಟಕಗಳಲ್ಲಿ ಕಂಡುಬರುವ ಅಂಕ ದೃಶ್ಯಗಳ ರಚನೆಯ ಚೌಕಟ್ಟಾಗಲಿ ಇಲ್ಲಿ ಕಾಣುವುದಿಲ್ಲ. ಸಂಭಾಷಣೆ, ಪದ್ಯಗಳು ಕೃತಿಯ ಒಡಲಲ್ಲಿ ಅಲ್ಲೋ ಇಲ್ಲೋ ಇರಬಹುದು. ಆದರೆ ಪೂರ್ಣಕೃತಿ ಈ ಬಗೆಯಲ್ಲಿರುವುದಿಲ್ಲ. ಪ್ರವಾಸ ಕಥನಗಳಲ್ಲಿ ಒಟ್ಟಾರೆ ನಮಗೆ ಕಂಡುಬರುವುದು 'ನೆರೇಟಿವ್ ಸ್ಟೈಲ್'.

೩) 'ನಾನು' ಎನ್ನುವ ಆತ್ಮವೃತ್ತಾಂತ ನಿರೂಪಣೆಯ ಕ್ರಮ, ಇಲ್ಲವೇ ದನಿ ಪ್ರವಾಸ ಕಥನದುದ್ದಕ್ಕೂ ಹರಿದಿರುತ್ತದೆ. ವೀಸಾ, ಪಾಸ್‌ಪೋರ್ಟ್. ಸ್ಥಳಾನುಭವಗಳೂ ಪ್ರವಾಸ ಕಥನದ ವಸ್ತುದ್ರವ್ಯವಾಗುತ್ತದೆ. ಇದೂ ಪ್ರವಾಸ ಕಥನದ ಮುಖ್ಯವಾದ ಲಕ್ಷಣ. ಏಕೆಂದರೆ ಒಬ್ಬ ವ್ಯಕ್ತಿ

ತನ್ನೂರನ್ನು ತೊರೆದು, ದೇಶಾಂತರ ಮಾಡಿ ಆ ಇನ್ನೊಂದು ದೇಶದಲ್ಲಿಯೇ ನೆಲಸಿ ಏನಾದರೂ ಅದನ್ನು ಕುರಿತು ಬರೆದರೆ ಆಗ ಅದು ಪ್ರವಾಸ ಸಾಹಿತ್ಯ ಎನ್ನಿಸಿಕೊಳ್ಳುವುದಿಲ್ಲ. ಈ ನಾಲ್ಕು ಲಕ್ಷಣಗಳನ್ನು ಪ್ರವಾಸ ಸಾಹಿತ್ಯದ ಚತುರಂಗಗಳು.

ಒಬ್ಬರನ್ನೊಬ್ಬರು ಅರಿಯಲು ತುಂಬ ಮುಖ್ಯವಾಗಿ ಬೇಕಾದದ್ದು ಭಾಷೆ. ನಿದರ್ಶನಕ್ಕೆ ಅಮೇರಿಕಾ ನಾವರಿಯದ ದೇಶ. ಆ ಜನರ ಜೊತೆ ಮಾತನಾಡಲು, ಅಲ್ಲಿ ಓಡಾಡಲು ನಮಗೆ ಮೊದಲು ಇಂಗ್ಲಿಷ್‌ನ ಪರಿಚಯವಿರಬೇಕು. ಅದಿಲ್ಲದಿದ್ದರೆ ಒಂದೊಂದು ಗಳಿಗೆಯೂ ನಮಗೆ ಉಸಿರುಕಟ್ಟುವ ಸನ್ನಿವೇಶವಾಗುತ್ತದೆ. ಭಾಷಿಕ ಅಸಂವಹನತೆ ಒಂದು ಮುಖ್ಯ ತೊಡಕಾಗಿ ನಿಲ್ಲುತ್ತದೆ. ಅದಷ್ಟೇ ಸಾಕು ಅಪರಿಚಿತತೆಯನ್ನು ಉಂಟುಮಾಡಲು. ಈ ಅಪರಿಚಿತತೆಯನ್ನು ಗೆಲ್ಲುತ್ತ, ದಾಟುತ್ತ, ಪರಿಚಿತವಾಗಿಸಿಕೊಳ್ಳುತ್ತ ಹೋಗುವ ಪ್ರಕ್ರಿಯೆ ಪ್ರವಾಸಕಥನದುದ್ದಕ್ಕೂ ಕಾಣುತ್ತದೆ.

ಪ್ರವಾಸ ಕಥನಗಳಲ್ಲಿ ಕಾಣುವ ಮತ್ತೊಂದು ಗುಣ ಅದು ಆತ್ಮಕಥನ ರೂಪ ವನ್ನ ಹೊಂದುವಂಥದು. ಆತ್ಮಕಥನವೇ ಅಲ್ಲದಿದ್ದರೂ ಆತ್ಮಕಥನಕ್ಕೆ ಸಮೀಪವಾಗಿರುವ ಲಕ್ಷಣಗಳು ಅದರಲ್ಲಿರುತ್ತವೆ. ಒಬ್ಬ ಲೇಖಕ ಹೊರ ದೇಶದಲ್ಲಿ ಒಂದು ನಿಶ್ಚಿತ ಅವಧಿಯನ್ನು ಅದು ಒಂದು ತಿಂಗಳಿರಲಿ. ಒಂದು ವರ್ಷವಿರಲಿ ಕಳೆಯುವಾಗ ತನಾಗುವ ವಾಸ್ತವಾನುಭವಗಳನ್ನು ಮಾತ್ರ ಬರೆವಣಿಗೆಯಲ್ಲಿ ಹಿಡಿದಿಡುತ್ತಾನೆ. ಆದ್ದರಿಂದ ಅದು ಸಹಜವಾಗಿಯೇ ಆತ್ಮಕಥನರೂಪವನ್ನು ಪಡೆದು ಎಷ್ಟೋ ಜನರ ಜೀವನಚರಿತ್ರೆ ಬರೆಯಲು ಅವರ ಪ್ರವಾಸ ಕಥನಗಳನ್ನು ಒಂದು ಆಕರವಾಗಿ ಬಳಸಿರುವುದುಂಟು.

ಇನ್ನು ಸಾಮಾನ್ಯವಾಗಿ ಪ್ರವಾಸ ಸಾಹಿತ್ಯದಲ್ಲಿ ಏನಿರುತ್ತದೆ ಎಂಬುದನ್ನು ನೋಡಬಹುದು. ಪ್ರವಾಸ ಕಥನಗಳಲ್ಲಿ ಪ್ರೇಕ್ಷಣೀಯ ಸ್ಥಳಗಳ ವರ್ಣನೆ ಪ್ರಧಾನವಾಗಿರುತ್ತದೆ. ಸ್ಥಳಗಳು ಪ್ರಾಕೃತಿಕ, ರಾಜಕೀಯ, ಸಾಮಾಜಿಕ ಹಾಗೂ ಐತಿಹಾಸಿಕ ಪ್ರಾಮುಖ್ಯದ್ದಾಗಿರಬಹುದು. ಇವುಗಳ ವರ್ಣನೆ ಸಹಜವಾಗಿಯೇ ಅವನ ಪ್ರವಾಸಕಥನದಲ್ಲಿ ಎಡೆಪಡೆಯುತ್ತದೆ. ಜಗತ್ತಿನ ಉದ್ದಗಲಕ್ಕೂ ಇವು ಹೆಸರು ಪಡೆದಿರುವುದರಿಂದ ಇವುಗಳ ವರ್ಣನೆಗೆ ಆತ ಪ್ರಾಮುಖ್ಯ ನೀಡುತ್ತಾನೆ. ಈ ಪ್ರೇಕ್ಷಣೀಯ ಸ್ಥಳಗಳ ವಿಚಾರ ಸಾಮಾನ್ಯವಾಗಿ ಎಲ್ಲರೂ ಕೇಳಿರುವಂಥದೇ ಆಗಿರುತ್ತದೆ. ಜನ ಕೇಳಿಲ್ಲದ, ಸಾಮಾನ್ಯವಾಗಿ ಪರಿಚಿತವಲ್ಲದ ಬೇರೆ ಯಾವುದೋ ಜಾಗಕ್ಕೆ ಲೇಖಕ ವರ್ಣಿಸಲು ತೊಡಗುವುದಿಲ್ಲ. ಇಂಥ ದೇಶದ ಪ್ರವಾಸ ಕಥನವಿದು ಎಂದರೆ ಓದುಗ ನಿರೀಕ್ಷಿಸಬಹುದಾದ, ಊಹಿಸಬಹುದಾದ ಕೆಲವು ವಸ್ತು, ಸ್ಥಳಗಳ ವಿವರ ಆ ಪ್ರವಾಸಕಥನದಲ್ಲಿರುತ್ತದೆ.

ಪ್ರವಾಸಕಥಕ ತಾನು ಸಂದರ್ಶಿಸಿದ ದೇಶದ ಜನರ ಜೀವನ ವಿಧಾನ, ದೃಷ್ಟಿ-ಧೋರಣೆ, ರೀತಿ-ನೀತಿಗಳ ಬಗ್ಗೆ ತನ್ನ ಕಥನದುದ್ದಕ್ಕೂ ಹೇಳುತ್ತಾನೆ. ಆ ದೇಶದ ಜನ ಈತನನ್ನು

ಸ್ವಾಗತಿಸಿದ್ದು, ಈತನೊಂದಿಗೆ ಮಾತನಾಡಿದ್ದು. ಈತನ ನೆರವಿಗೆ ಒದಗಿದ್ದು ಇತ್ಯಾದಿ ಸಂಗತಿಗಳ ಮೂಲಕ ಆ ಜನರ ಮನಸ್ಸು, ಜೀವನ ವಿಧಾನಗಳನ್ನು ಸೆರೆಹಿಡಿದಿರುತ್ತಾನೆ. ಸಾಂಸ್ಕೃತಿಕ ಮುಖಾಮುಖಿ ಪುಸ್ತಕದಲ್ಲಿ ಎರಡು ಸಂಸ್ಕೃತಿಗಳ ಮುಖಾಮುಖಿಯೇ ಮಾತುಗಳಲ್ಲಿ ನಡೆಯುತ್ತದೆ.

ಪ್ರವಾಸ ಸಾಹಿತ್ಯದ ನಿರ್ವಚನ ಹೊಸದೇನೂ ಅಲ್ಲ. ಇದೊಂದು ಪ್ರತ್ಯೇಕವಾದ ಸಾಹಿತ್ಯ ಪ್ರಕಾರ. ಪರಿಕಲ್ಪನೆ ಇಲ್ಲದಿದ್ದರೂ ಪ್ರಾಚೀನ ಪ್ರವಾಸ ದಾಖಲೆ ಮೌಲ್ಯ ಉಳ್ಳವು. ಒಂದನೆಯ ಶತಮಾನದ ಪಸಾನಿಯಸರ ಬರೆಹಗಳಲ್ಲಿ ಸ್ಥಳ, ಜನ, ಅವರ ನಡೆನುಡಿಗಳ ಪ್ರವಾಸಿಗಳು ಧಾರ್ಮಿಕ ಉದ್ದೇಶದಿಂದ ಪ್ರವಾಸ ಮಾಡಿದರೂ ಪ್ರವಾಸ ಕಥನ ಲೋಕ ಪ್ರಸಿದ್ಧ ಸಾಹಸಾನುಭವಗಳ ದಾಖಲೆಯಾಗಿದೆ. ಹದಿನೇಳು ಹದಿನೆಂಟರ ಶತಮಾನಗಳಲ್ಲಿ ಪ್ರವಾಸ ಸಾಹಿತ್ಯ ದಾಖಲೆ ಸ್ವರೂಪದಿಂದ ಕಥನ ಸ್ವರೂಪಕ್ಕೆ ತಿರುಗಿದಂತೆ ತೋರುತ್ತದೆ. ರೊಮಾಂಟಿಕ್ ಯುಗದಲ್ಲಿ ಪ್ರವಾಸ ಕಥನವೂ ಜನಪ್ರಿಯವಾಯಿತು. ವಾಸ್ತವ ಪ್ರವಾಸ ಸಾಹಿತ್ಯದಂತೆ ಕಾಲ್ಪನಿಕ ಪ್ರವಾಸ ಕಥನಕ್ಕೂ ಈ ಜನಪ್ರಿಯತೆ ಕಾರಣವಾಯಿತು. ಕಾಳಿದಾಸನ ಮೇಘಸಂದೇಶವನ್ನು ಕಾಲ್ಪನಿಕವಾದರೂ ಪ್ರಾಚೀನ ಪ್ರವಾಸ ಕಥನ ಎನ್ನಬಹುದೇನೊ.

ಲಕ್ಷಣ ಉದ್ದೇಶ ಕನ್ನಡದಲ್ಲಿ ಪ್ರವಾಸ ಕಥನ ಬರೆದಿರುವವರ ಅಭಿಪ್ರಾಯಗಳೂ ಈ ನಿಟ್ಟಿನಲ್ಲಿ ವೈವಿಧ್ಯಪೂರ್ಣವಾಗಿದ್ದು ಬರಹದ ಉದ್ದೇಶ ವಿಧಾನವನ್ನು ಸ್ಪಷ್ಟಪಡಿಸುತ್ತವೆ. ಕನ್ನಡದಲ್ಲಿ ಮೊದಲನೆಯಲ್ಲದಿದ್ದರೂ ಹೆಚ್ಚು ಪ್ರಸಿದ್ಧಿಗೆ ಬಂದ 'ಪಂಪಯಾತ್ರೆ'ಯಲ್ಲಿ ವಿ.ಸೀ. ಅವರು "ವರ್ಣನೆಯೊಂದಿಗೆ ನಮ್ಮ ಭಾವನೆಗಳನ್ನು ಬೆರೆಸಿ, ಮನಸ್ಸನ್ನು ಅದರೊಳಗೆ ಹೊಗಿಸಿ ಸ್ವಚ್ಛಂದವಾಗಿ ಬರೆದಿರುವವರು ಕನ್ನಡದಲ್ಲಿ ಕಮ್ಮಿ..." ಎಂದಿದ್ದಾರೆ. ಯಾವುದೋ ಒಂದು ಬಗೆಯ ಚೆಲುವು ಅಲ್ಲಿ ಕಾಣಸಿಕ್ಕೀತು ಎಂಬ ಆಸೆ ಉಂಟಾಗಿತ್ತು. ಎಂದು 'ಅಪೂರ್ವ ಪಶ್ಚಿಮ'ದಲ್ಲಿ ಡಾ. ಶಿವರಾಮಕಾರಂತರು ಹೇಳಿದ್ದಾರೆ. "ಇದು ದಿನಚರಿಯೂ ಅಲ್ಲ, ಸಾಮಾನ್ಯ ಕಥನವೂ ಅಲ್ಲ; ಅವರೆಡರ ಬೆರಕೆ. ಆ ಬಗೆಯ ತಲೆಚೀಟಿ ಹಚ್ಚದೆ 'ಅನುಭವ ನಿರೂಪಣೆ' ಎಂದು ಕರೆದು ಸುಮ್ಮನಾಗುತ್ತೇನೆ." ಎನ್ನುತ್ತಾರೆ ಪ್ರೊ. ಎ.ಎನ್ ಮೂರ್ತಿರಾಯರು. ಹಲವು ಪ್ರವಾಸ ಕಥನಗಳನ್ನು ನೀಡಲಿರುವ ಇತಾಲಿಯಾ ನಾ ಕಂಡಂತೆ, ರಂಗಾಯನ, ಜಗದಗಲ, ಒಮ್ಮೆ ಡಾ. ಪ್ರಭುಶಂಕರ ಕೃತಿಗೆ ಮುನ್ನುಡಿ ಬರೆಯುತ್ತ ಕುವೆಂಪು ಅವರು "ಕಾದಂಬರಿಯ ಸ್ವಾರಸ್ಯವೂ ಭಾವ ಪ್ರಬಂಧದ ಆತ್ಮೀಯತೆಯೂ ಹೊಸೆದುಕೊಂಡು ಪ್ರವಾಸಕಥನ ಪ್ರವಹಿಸುತ್ತಿತ್ತು." ಎಂದಿದ್ದಾರೆ.

ಪಾಶ್ಚಾತ್ಯರು 'ಟ್ರಾವಲೋಗ್' ಎಂದು ಕರೆಯುವ ಸಾಹಿತ್ಯ ಪ್ರಕಾರಕ್ಕೆ ಪ್ರವಾಸ ಕಥನ ಎನ್ನಬಹುದು. ಇಲ್ಲಿ ಕಥನ ಎಂದರೆ ಕಥೆ ಎಂದು ಅರ್ಥ ಮಾಡ ಬೇಕಿಲ್ಲ, ನಿರೂಪಣೆ ಎಂದು

ಸ್ವೀಕರಿಸಬಹುದು. ಪ್ರವಾಸ ಕಥನವನ್ನು ನಾನ್ ಫಿಕ್ಷನಲ್ ಫಾರ್ಮ್ ಎಂದು ವಿವರಿಸಿದ್ದಾರೆ. ಪ್ರವಾಸ ಕಥನದ 'ರೂಪ'ದ ಸೂಚನೆ ಅಲ್ಲಿಗೆ. ಕಾದಂಬರಿ, ಕಥೆ, ನಾಟಕಗಳಂತೆ ಕಥಾವಸ್ತು, ಪಾತ್ರ, ಕ್ರಮಬದ್ಧ ವಿಕಾಸವುಳ್ಳ ಘಟಾನಾವಳಿಗಳ ಕಲ್ಪನೆಯಲ್ಲಿ, ಕಟ್ಟು ಕಥೆಯಲ್ಲ. ಕಾರಂತರ ಎರಡು ಕೃತಿಗಳನ್ನು ಹೋಲಿಸಿ ನೋಡಬಹುದು. ಅವರ ಆಬೂಪಿಂದ ಬರಮಾಕ್ಕೆ ಒಂದು ಪ್ರವಾಸ ಕಥನವಾದರೆ ಅದೇ ಸ್ಥಳಗಳಲ್ಲಿ ಕ್ರಿಯೆ ಸಾಗುವ 'ಆಳ-ನಿರಾಳ' ಎಂದು ಕಾದಂಬರಿಯಾಗಿದೆ. ಅಪರೂಪವಾಗಿ ನಗರ ವರ್ಣನೆ ವಿವರಗಳನ್ನೊಳಗೊಂಡ ಶುದ್ಧ ಫ್ಯಾಂಟಸಿ ರೂಪದ ಪ್ರವಾಸ ಕಥನ ರಚನೆಯಾಗಿರುವುದುಂಟು. ಆಂಡ್ರಿಬೆಲೆಯ 'ಸೇಂಟ್ ಪೀಟರ್ಸ್ ಬರ್ಗ್' ೧೯೧೩ರ ಅಂಥ ಒಂದು ಕೃತಿ. ಒಂದು ನಗರದ ಶದ್ಧ ಫ್ಯಾಂಟಸಿ-ರಮ್ಯ ಕಲ್ಪನೆ-ಯ ಪ್ರವಾಸ ಕಥನ ಅದು. ಜೇಮ್ಸ್ ಜಾಯ್ಸ್‌ನ ಡಬ್ಲಿನ್ ಆಗಲಿ, ಬಾಲ್ಜಾಕನ ಪ್ಯಾರಿಸ್ ಆಗಲಿ ಇಷ್ಟು ಸ್ಪಷ್ಟ ಸ್ಫುಟ ವಿವರಗಳಿಂದ ಪುನರ್‌ಸೃಷ್ಟಿಯಾಗಿಲ್ಲ ಎನ್ನುವಂಥದು. ಆದ್ದರಿಂದ ಪ್ರವಾಸನುಭವಗಳ ಪುನರ್ ಸೃಷ್ಟಿ ಇಲ್ಲಿ ನಿರೂಪಣಾ ವಿಧಾನದಲ್ಲಿರುತ್ತದೆ, ಎನ್ನಬಹುದು.

ಎರಡನೆಯದಾಗಿ ಪ್ರವಾಸ ಕಥನಕ್ಕೂ ಐತಿಹಾಸಿಕ, ಭೌಗೋಳಿಕ ದಾಖಲೆಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ದಾಖಲೆ ಸೃಜನಾತ್ಮಕ ಸಾಹಿತ್ಯರೂಪ ಅಲ್ಲ, ಚಿಂತನೆಗಳ ಅಭಿವ್ಯಕ್ತಿಯ ಸೃಜನಕಲೆ. ಅದರ ವಿಷಯ ಪ್ರವಾಸಕ್ಕೇ ಮಿತವಾದುದಲ್ಲ. ಆದರೆ ಪ್ರಬಂಧದ ಆತ್ಮೀಯ ನಿರೂಪಣೆಯ ಗುಣ, ಉತ್ತಮ ಪುರುಷದಲ್ಲಿ ಆತ್ಮೀಯವಾಗಿ ಹೇಳುವ ಧಾಟಿಯಿಂದ ಒದಗುವ ಗುಣ ಪ್ರವಾಸ ಕಥನದಲ್ಲಿ ಉಂಟು. ಆದ್ದರಿಂದ ಅದು ಕೇವಲ ಶುಷ್ಕ ದಾಖಲೆಯಾಗದೆ ತಾನು ಕಂಡುಂಡ ಅನುಭವಗಳನ್ನು ಭಾವ, ಭಾವನೆ, ಅನುಭೂತಿ, ಸಂವೇದನೆ, ಪ್ರತಿಕ್ರಿಯೆಗಳ ಸಮೇತ ಸಂವಹನ ಮಾಡುವುದಾಗಿದೆ. ಈ ಸಂದರ್ಭದಲ್ಲಿಯೇ ಪ್ರವಾಸಕಥನ ಸೃಜನಾತ್ಮಕವೊ ಅಲ್ಲವೊ ಎಂಬ ಪ್ರಶ್ನೆಯೂ ಏಳುತ್ತದೆ.

ಮೂರನೆಯದಾಗಿ ಎಲ್ಲರೂ ಪ್ರವಾಸಿಗರಾಗಬಹುದು. ಕೆಲವರು ಮಾತ್ರ ಪ್ರವಾಸ ಕಥನಕಾರರು ಆಗಲು ಸಾಧ್ಯ. ಹಾಸ್ಯ ಮನೋವೃತ್ತಿ, ಹಾಸ್ಯ ದೃಷ್ಟಿ, ವಕ್ರದೃಷ್ಟಿ ಇರುವವರೆಲ್ಲರೂ ಉತ್ತಮ ಹಾಸ್ಯಗಾರರಾಗಬಹುದು. ಲೇಖಕರಾಗಲು ಸಾಧ್ಯ ಎಂದು ಹೇಳುವಂತೆ ಪ್ರವಾಸ ಅನುಭವ ಎಲ್ಲರೂ ಪಡೆಯಬಹುದು. ಆದರೆ ಉತ್ತಮ ಪ್ರವಾಸ ಸಾಹಿತ್ಯ ರಚನೆಗೆ ಪ್ರವಾಸ ಕಥನಕಾರರಲ್ಲಿ ಸೂಕ್ಷ್ಮ ಸಂವೇದನೆ, ಅಂತರ್‌ದೃಷ್ಟಿ ಅಥವಾ ಅಂತರ್‌ಬೋಧೆಯೂ ಇರಬೇಕಾಗುತ್ತದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಗ್ರಹಿಸಿ ನಿರೂಪಿಸುವಂತೆಯೇ ಒಂದು ಸಮಾಜ, ಒಂದು ಜನಾಂಗ, ಒಂದು ದೇಶ ಸಹ. ಪ್ರೇಕ್ಷಣೀಯ ಸ್ಥಳಗಳ, ಪ್ರಗತಿ ವೈಭವಗಳ ಹಿಂದಿನ ಬದುಕಿನ ಅಂತರ್ಯವನ್ನು ಈ ಒಳಗಣ್ಣು ಮಾತ್ರ ಗ್ರಹಿಸಬಲ್ಲದು.

ಪ್ರವಾಸ ಕಥನದಲ್ಲಿ ಸ್ವಾರಸ್ಯ, ಆಕರ್ಷಣೆಯನ್ನು ತರಲು ವಾಸ್ತವ ನಿರೂಪಣೆಯ ಜೊತೆಗೆ ರಮ್ಯ ಕಲ್ಪನೆಯೂ ಇರಬೇಕು. ಕಂಡು ಅನುಭವಿಸಿದ್ದನ್ನು ನಿರೂಪಿಸುವುದರಲ್ಲಿಯೇ ಕಲ್ಪನೆ ಕ್ರಿಯಾತ್ಮಕವಾಗುತ್ತದೆ, ಕಲಾತ್ಮಕವಾಗುತ್ತದೆ. ಐದನೆಯ ಲಕ್ಷಣವಾಗಿ ಗುರುತಿಸುವುದಾದರೆ ಪ್ರವಾಸ ಕಥನ ಉತ್ತಮ ಪುರುಷದಲ್ಲಿ, ಗದ್ಯ ನಿರೂಪಣೆಯಲ್ಲಿರುತ್ತದೆ. ವಿ.ಕೃ ಗೋಕಾಕರ 'ಇಂದಿಲ್ಲ ನಾಳೆ' ಕೃತಿ. ಅಮೆರಿಕೆಯ ಪ್ರವಾಸ ಕಥನವಾದರೂ ಅದೊಂದು ಹೊಸ ನಿರೂಪಣೆಯ ನಡುನಡುವೆ ಪುಸ್ತಕದುದ್ದಕ್ಕೂ ಕವನಗಳು ಇವೆ. ಎಲ್ಲ ಭಾವದ ಉತ್ಕಟತೆ, ವಾಸ್ತವ ವಿವರಗಳನ್ನು ಮೀರಿ ನಿಲ್ಲುತ್ತದೋ ಅಲ್ಲಿ ಕವನವಾಗಿ ಹರಳುಗಟ್ಟುತ್ತದೆ. ಅದು ನಿಸರ್ಗ ವರ್ಣನೆಯೇ ಆಗಿರಬೇಕಿಲ್ಲ. ನಗರ ದೃಶ್ಯ, ಕಟ್ಟಡಗಳು, ಸ್ಮಾರಕಗಳು, ಕೊನೆಗೆ ಒಂದು ಚಿಂತನೆಯ ಹೊಳಹೂ ಆಗಿರಬಹುದು ಅಂತಹವನ್ನು ಕವನವಾಗಿ ಬರೆದಿದ್ದಾರೆ.

ಪ್ರಾಚೀನ ಭಾರತದಲ್ಲಿ ಪ್ರವಾಸವೆಂಬುದು ತೀರ್ಥರೂಪದಲ್ಲಿ ಪ್ರಚಲತವಾಗಿತ್ತು. ಪುಣ್ಯಸಂಪಾದನೆಗಾಗಿ, ಸಂಸ್ಕಾರ ಸಂವರ್ಧನೆಗಾಗಿ, ಚಿತ್ತಶುದ್ಧಿಗಾಗಿ ಹಿಂದಿನವರು ವಿಶೇಷ ಸೌಲಭ್ಯಗಳಿಲ್ಲದ ಕಾರನ ಕಾಲ್ನಡಿಗೆಯಲ್ಲೇ 'ಕಾಲಿಗೆ ಭೂಷಣ ಹರಿಯಾತ್ರೆಯು' ಎಂದು ದೂರದೂರದ ದಿವ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಿದ್ದರು. ಬದುಕಿನ ಮುಸ್ಸಂಜೆಯಲ್ಲಿ ಅವರು ಅಂತಹ ಯಾತ್ರೆ ಕೈಗೊಳ್ಳುತ್ತಿದ್ದುದರಿಂದ 'ಮತ್ತೆ ಊರಿಗೆ ಮರಳಿದರೆ ಮರಳಿಯೇವು, ಇಲ್ಲದಿದ್ದರೆ ಇಲ್ಲ' ಎಂಬ ವೈರಾಗ್ಯದಲ್ಲಿಯೇ ಮನೆಯಿಂದ ಹೊರಬೀಳುತ್ತಿದ್ದರು. ಕಾಶಿಯಂತಹ ಪವಿತ್ರ ತೀರ್ಥದಲ್ಲಿ ದೇಹತ್ಯಾಗ ಮಾಡಿದರೆ ಮೋಕ್ಷಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆಯೂ ಅಂತಹ ಯಾತ್ರೆಗಳಿಗೆ ಬೆಂಬಲವಾಗಿತ್ತು. ಸಮಸ್ತ ಭರತಖಂಡವೂ ನಮ್ಮದು ಎಂಬ ವಿಶಾಲವಾದ ದೇಶಪ್ರೇಮವಿದ್ದ ಅವರು ಕಾಶಿಯಲ್ಲಿ ತುಂಬಿ ತಂದ ಪವಿತ್ರ ಗಂಗಾಜಲವನ್ನು ದಕ್ಷಿಣ ತುದಿಯ ರಾಮೇಶ್ವರಲಿಂಗಕ್ಕೆ ಅಭಿಷೇಕ ಮಾಡಿಸಿದಾಗಲೇ ತಮಗೆ ತೀರ್ಥ ಯಾತ್ರೆಯ ಪೂರ್ಣಫಲ ಲಭಿಸುವುದು ಎಂದು ಹೇಳುತ್ತಿದ್ದರು. ತೀರ್ಥಯಾತ್ರೆಯೇ ಅಂದಿನ ಭಾರತೀಯರನ್ನು ಸ್ನೇಹಸೂತ್ರವೊಂದರಲ್ಲಿ ಬಂಧಿಸಿತ್ತು. ಸನ್ಯಾಸಿಗಳು, ಭಾಗವತರಂತೂ ತೀರ್ಥಯಾತ್ರೆಯನ್ನು ತಮ್ಮ ಅಧ್ಯಾತ್ಮ ಸಾಧನೆಯ ಒಂದಂಗವಾಗಿ ಮಾಡಿಕೊಂಡಿದ್ದರು. ಶಂಕರಾಚಾರ್ಯ, ರಾಮಾನುಚಾರ್ಯ, ಮಧ್ವಾಚಾರ್ಯ ಮೊದಲಾದ ಯತಿಶ್ರೇಷ್ಠರು ಭರತಭೂಮಿಯನ್ನೆಲ್ಲ ಕಾಲ್ನಡಿಗೆಯಲ್ಲಿಯೇ ಸುತ್ತಾಡಿ, ಧರ್ಮಪ್ರಸಾರ ಮಾಡದ ಸಂಗತಿ ಪ್ರಸಿದ್ಧವಾಗಿದೆ. ಮಧ್ವಾಚಾರ್ಯರ ಪರಂಪರೆಗೆ ಸೇರಿದ ವಾದಿರಾಜ ಸ್ವಾಮಿಗಳು ತಾವು ಕೈಗೊಂಡ ತೀರ್ಥಯಾತ್ರೆಯ ಕೆಲವು ವಿವರಗಳನ್ನು ಕ್ಷೇತ್ರದೇವತೆಗಳ ಸ್ತುತಿರೂಪದಲ್ಲಿ ಬರೆದಿಟ್ಟಿರುವುದು ಉಲ್ಲೇಖನೀಯವಾದ ಸಂಗತಿ.

## ಅಧ್ಯಾಯ – ೦೩

## ಇದುವರೆಗಿನ ಅಧ್ಯಯನಗಳ ಸಮೀಕ್ಷೆ

'ದಕ್ಷಿಣ ಯಾತ್ರಾ ಚರಿತ್ರೆ' ಕನ್ನಡದ ಮೊದಲ ಪ್ರವಾಸ ಕಥನವೆಂದು ಅನೇಕರು ತಿಳಿದಿದ್ದಾರೆ. ಶಾಸ್ತ್ರಿಗಳು ಉಡುಪಿಯಿಂದ ಗುರುವಾಯೂರುಗಳ ವರೆಗಿನ ಕ್ಷೇತ್ರಗಳನ್ನು ಒಂದೊ ಎರಡೂ ಪದ್ಯಗಳಲ್ಲಿ ವರ್ಣಿಸಿದ್ದಾನೆಂದು ಮೂವತ್ತೇಳು ಪದ್ಯಗಳ ಅಂಗೈಗಲದ ಪುಸ್ತಕವೆಂದೂ ಇದರ ಬಗ್ಗೆ ಶ್ರೀನಿವಾಸ ಹಾವನೂರು ಬರೆಯುತ್ತಾರೆ. ಇದರ ನಂತರ ಪ್ರಕಟವಾಗಿರುವ ಬಿ. ಪುಟ್ಟಯ್ಯನವರ 'ಅಭಿವೃದ್ಧಿ ಸಂದೇಶ' (೧೯೨೧) ಉದ್ದೇಶಿತ ಪ್ರವಾಸ ಕಥನವಲ್ಲದಿದ್ದರೂ, ಪ್ರವಾಸದ ಒಳಮೈಯನ್ನೂ ಪಡೆದಿದೆ. "ಇದು ಮೊದಲು ಪತ್ರರೂಪವಾಗಿ ಒಕ್ಕಲಿಗ ಪತ್ರಿಕೆಯಲ್ಲಿ ಪ್ರಕಟವಾಗುತ್ತಿತ್ತು. ಇದನ್ನ ಪತ್ರರೂಪದ ಪ್ರವಾಸನುಭವವೆಂದು ಸಡಿಲವಾಗಿ ಕರೆಯ ಬಹುದೇನೋ." ಎಂದು ಎನ್. ತಾರಾನಾಥರು ಹೇಳುತ್ತಾರೆ. ಆದರೆ ಪ್ರಕಟವಾಗಿರುವ ಪುಸ್ತಕ ನೋಡಿದರೆ, ಪತ್ರಗಳ ಮಾದರಿಯಲ್ಲಿ ಇಲ್ಲ. ತಮಗಾದ ಅನುಭವವನ್ನೂ ತೆಳುವಾಗಿ ಹೇಳಿದ್ದರೂ 'ಪ್ರವಾಸ'ದ ಛಾಯೆಯಂತೂ ಇದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿ ಅವರನ್ನು ಲೆಕ್ಕಕ್ಕೆ ಹಿಡಿಯದೆ ಬಿಟ್ಟರೂ ಮುಕ್ಕಾಲು ಶತಮಾನದ ಗಟ್ಟಿಮುಟ್ಟಾದ ಅಸ್ತಿತ್ವವಂತೂ ಪ್ರವಾಸ ಸಾಹಿತ್ಯಕ್ಕಿದೆ.

ಸದ್ಯ ಯಾರ ಕಣ್ಣಿಗೂ ಬೀಳದಿರುವ ಅಪರೂಪದ ಕೃತಿಯೊಂದು ಪ್ರಕಟವಾದೆ. ಇದು ಅರಸು ಮನೆತನದ ರಾಜಕುಮಾರಿ ಚನ್ನಾಜಮ್ಮಣ್ಣಿ ೧೯೩೭–೩೮ರಲ್ಲಿ ಬರೆದ 'ನನ್ನ ಪ್ರಪಂಚ ಸಂಚಾರ, ಮಹಿಳೆಯೊಬ್ಬಳ ಮೊದಲ ಪ್ರವಾಸ ಕೃತಿ. ಇವರ ಬರವಣಿಗೆಯಂತೂ ಸ್ಫುಟವಾಗದಿದ್ದು ಅನುಭವಗಳನ್ನು ನೇರವಾಗಿ ಹಾಗು ನಿರ್ಭೀಡೆಯಿಂದ ಹೇಳುತ್ತಾ ಹೋಗುತ್ತಾರೆ. ಈಕೆ ಇನ್ನಾವುದನ್ನು ಬರೆದಿದ್ದಾಳೊ ಗೊತ್ತಿಲ್ಲ. ಕೈಯಂತೂ ಪಳಗಿದೆ. ಸರಳತೆ, ಖಚಿತತೆ, ರಮ್ಯ ನಿರೂಪಣೆ, ವಸ್ತು ನಿರ್ವಹಣೆಯಲ್ಲಿ ನಮ್ಮ ಆಸಕ್ತಿಯನ್ನು ಕೆರಳಿಸುತ್ತದೆ. ಎರಡನೆಯ ಘಟ್ಟದ ಇಂಥ ಪುಸ್ತಕಗಳು ಇನ್ನು ಎಲ್ಲೆಲ್ಲಿ ಹುದುಗಿವೆಯೊ ಯಾರಿಗೆ ಗೊತ್ತು? ಕನ್ನಡ ಪ್ರವಾಸ ಸಾಹಿತ್ಯ ಕೃತಿಗಳ ಚರಿತ್ರೆಯನ್ನು ಸ್ಥೂಲವಾಗಿ ಈ ಕೆಳಕಂಡಂತೆ ಹೀಗೆ ವಿಂಗಡಿಸಬಹುದು: ಆರಂಭದಿಂದ ವಿ.ಸೀ ಅವರ ಕೃತಿ ಪ್ರಕಟವಾಗುವವರೆಗೂ ಮೊದಲ ಘಟ್ಟವಾದರೆ; ವಿ.ಸೀ. ಅವರ ನಂತರ ಸುಮಾರು ೧೯೫೦ರವರೆಗೂ ಎರಡನೆಯ ಘಟ್ಟ; ಆನಂತರದ್ದು ಮೂರನೆಯ ಘಟ್ಟ. ಮೊದಲ ಘಟ್ಟದಲ್ಲಿ ಕರ್ಕಿ ವೆಂಕಟರಮಣಶಾಸ್ತ್ರಿ ಸೂರಿ, ಜೆ. ಕೃಷ್ಣಮೂರ್ತಿ, ಶ್ರೀ ಕರವೀರಪ್ಪ ಅಂದಾನೆಪ್ಪ ಕುಲಕರ್ಣಿ ಇಂಥವರು ಮೊದಲನೆಯ ಘಟ್ಟದ ಮುಖ್ಯ ಪ್ರತಿನಿಧಿಗಳು ಎರಡನೆಯ ಘಟ್ಟವು ಮೊದಲ ಘಟ್ಟದ ಸ್ವಲ್ಪ ಹಿಂದೆ ಸೇರಿದರೂ ವಿ.ಸೀ., ಶ್ರೀರಂಗ, ನೆಗಳೂರು, ಎಸ್. ಎಸ್. ಪಾಟೀಲ (ಇವರು ಮೂವರು ಕೂಡಿ ಮಾಡಿದ ಯಾತ್ರೆ) ದ.ಕೃ. ಭಾರದ್ವಾಜ, ಸಿದ್ಧವನಹಳ್ಳಿ,

ಕೃಷ್ಣಶರ್ಮ, ಕೃಷ್ಣನಾರಾಯಣ ಗೋಸಾವಿ, ವಿ.ಕೃ.ಗೋಕಾಕ, ಇವರು ಎರಡನೆಯ ಘಟ್ಟದ ಪ್ರತಿನಿಧಿಗಳು. ಮೂರನೆ ಘಟ್ಟದಲ್ಲಿ ಶಿವರಾಮಕಾರಂತ, ಎ.ಎನ್.ಮೂರ್ತಿರಾವ್, ಜಿ.ಎಸ್.ಶಿವರುದ್ರಪ್ಪ, ಹೊ. ಶ್ರೀನಿವಾಸ್ಯ, ಕು.ಶಿ. ಹರಿದಾಸಭಟ್ಟ ಇವರು ಮುಖ್ಯವಾಗಿ ಬರುತ್ತಾರೆ.

ಈ ಹಿನ್ನೆಲೆಯಲ್ಲಿನ ಪ್ರವಾಸ ಸಾಹಿತ್ದ ಸ್ವರೂಪ, ಲಕ್ಷಣಗಳನ್ನು ಕುರಿತು ಸಾಕಷ್ಟು ಚರ್ಚೆಯಾಗಿಲ್ಲವಾದರೂ–ಆಗಿರುವ ಚರ್ಚೆ ತಾತ್ವಿಕವಾಗಿ ಗಟ್ಟಿಮುಟ್ಟಾಗಿವೆ. ಸಾ.ಶಿ. ಮರುಳಯ್ಯ, ವರದರಾಜ ಹುಯಿಲಗೋಳ, ಬಿ.ಎ. ವಿವೇಕ ರೈ, ಎಸ್. ವಿದ್ಯಾಶಂಕರ್ ಮತ್ತು ಎನ್.ಎಸ್. ತಾರಾನಾಥ ಇವರುಗಳು ಪ್ರವಾಸ ಸಾಹಿತ್ಯದ ಸ್ವರೂಪ–ಲಕ್ಷಣ–ಬಗೆಗಳ ಬಗ್ಗೆ ಬರೆದಿದ್ದಾರೆ. ಮೊದ ಮೊದಲು 'ಪ್ರವಾಸ'ವೆಂದರೆ "ಧಾರ್ಮಿಕ ಕ್ಷೇತ್ರಗಳಿಗೆ ಪ್ರವಾಸ ಹೋಗುವುದು" ಎನ್ನುವಷ್ಟರ ಮಟ್ಟಿಗೆ ಸೀಮಿತವಾಗಿತ್ತು. ನಂತರ ಆ ಭಾವ ತೊಲಗಿದೆ. "ಪ್ರವಾಸ ನಮ್ಮ ಅನುಭವ ಕೋಶವನ್ನು ಹಿಗ್ಗಿಸಲು ಬಹು ಮುಖ್ಯವಾದ ಸಾಧನವಾಗಿದೆ. ನಾವು ಮಾಡುವ ನಮ್ಮ ಅನುಭವಕ್ಕೊಂದು ವ್ಯಾಪ್ತಿಯನ್ನೂ ಅರ್ಥವಂತಿಕೆಯನ್ನೂ ಭಾವಗಮ್ಯವಾದ ಸುಖವನ್ನೂ ನೀಡುತ್ತದೆ. ದೇಹ ಮತ್ತು ಮನಸ್ಸು ನಾನಾ ದೇಶಗಳ ಮನಗಳ ನದಿ–ಕಾನನಗಳ, ನೆಲ–ಬಾನುಗಳ, ಇತಿಹಾಸ ಕಲೆ ಸಾಹಿತ್ಯ ಸಂಸ್ಕೃತಿಗಳ ಜೊತೆಗೆ ಅರ್ಥಪೂರ್ಣವಾದ ಸಂಬಂಧ ಬೆಳೆಸಿದಾಗಲೇ ಅವುಗಳಿಗೆ ಒಂದು ಬಗೆಯ ಕಳೆ ತೃಪ್ತಿ, ಗೆಲವು, ಲವಲವಿಕೆ ಪ್ರಾಪ್ತವಾಗವುದು ಎಂಬ ಮಾತಿನೊಡನೆ ಕು.ಶಿ. ಹರಿದಾಸಭಟ್ಟರು ಹೇಳುವ "ನಮ್ಮಲ್ಲಿ ನಿಸರ್ಗ ಸೌಂದರ್ಯವನ್ನು ಸವಿಯುವುದಕ್ಕಾಗಿ, ಇತಿಹಾಸ ಕಣ್ಣು ಬೆಳೆಸುವ ಸಲುವಾಗಿ ಪ್ರವಾಸ ಕೈಗೊಳ್ಳುವ ಸಂದರ್ಭ ಮತ್ತು ಮನೋವೃತ್ತಿ ವಿರಳ" ಎಂಬುದನ್ನು ಹೋಲಿಸಿ ನೋಡಬಹುದು.

ನಮ್ಮಲ್ಲಿ ಪ್ರವಾಸ ಎನ್ನುವ ಶಬ್ದಕ್ಕೆ ಮೊದಲೇ 'ಯಾತ್ರೆ' ಎನ್ನುವ ಶಬ್ದ ಎಲ್ಲರಿಗೂ ಪರಿಚಿತವಾಗಿತ್ತು. ಸಾಮಾನ್ಯವಾಗಿ ವಯೋವೃದ್ಧರು ತಮ್ಮ ಇಳಿವಯಸ್ಸಿನಲ್ಲಿ ಪುಣ್ಯಕ್ಷೇತ್ರಗಳಿಗೆ ಹೋಗಿ ದೇವರುಗಳ ದರ್ಶನ ಮಾಡಿಕೊಂಡು ಬರುವುದೇ ಯಾತ್ರೆ ಆಗಿತ್ತು. ತೀರ್ಥಯಾತ್ರೆ, ಪುಣ್ಯಕ್ಷೇತ್ರಗಳ ಯಾತ್ರೆಯ ಅರ್ಥವೇ, ಪವಿತ್ರ ನದಿಗಳ ಸ್ನಾನ ಮಾಡಿಕೊಂಡು ಪಾಪ ಪರಿಹಾರ ಮಾಡಿಕೊಂಡು, ದೇವರ ದರ್ಶನ ಮಾಡಿಕೊಂಡು ಸುತ್ತಮುತ್ತ ಓಡಾಡಿಕೊಂಡು ಬರುವುದು **ಪ್ರವಾಸ** ಎಂದೆನಿಸಿಕೊಳ್ಳುತ್ತದೆ.

ಸ್ವಾಮಿ ಸೋಮನಾಥನಂದರ **"ಹೈಮಾಚಲ ಸಾನಿಧ್ಯ"** ಎಂಬ ಕೃತಿಯ ಮುನ್ನುಡಿಯಲ್ಲಿ ಕುವೆಂಪುರವರು "ತೀರ್ಥಯಾತ್ರೆಗಳಿಂದಲೂ ತಮ್ಮ ಪುಣ್ಯಕ್ಷೇತ್ರಗಳಿಂದಲೂ ನೊಂದ ಜೀವಕ್ಕೂ, ಬೆಂದ ಲೋಕಕ್ಕೂ ಶಾಂತಿ ಸಮಾಧಾನಗಳು ಮತ್ತೆ ಮತ್ತೆ ದೊರೆಯುವುದರಿಂದ ಜನರು ಪ್ರಯಾಣದ ಕ್ಲೇಶ, ಕಷ್ಟ, ದುರ್ಗಮತೆ, ಅಪಾಯ, ಸಾವು–ನೋವು ಯಾವುದನ್ನೂ ಲೆಕ್ಕಿಸದೆ ಮತ್ತೆ ಮತ್ತೆ ಅಂತಹ ಪ್ರವಾಸಗಳನ್ನು ಕೈಗೊಳ್ಳುತ್ತಿದ್ದರು ಎನ್ನುತ್ತಾರೆ. ಹಾಗೆಯೇ ಆಧ್ಯಾತ್ಮಿಕ

ಭೂಮಿಗೆಯಲ್ಲಿ ಮುಂದುವರೆಯುವುದಕ್ಕಾಗಿ, ಆತ್ಮವಿಶ್ವಾಸಕ್ಕಾಗಿ, ಆತ್ಮವಿಕಾಸಕ್ಕಾಗಿ ಭಗವಂತನಲ್ಲಿ ಶರಣಾಗತಿ ಮತ್ತು ಸಮರ್ಪಣಾ ಬುದ್ಧಿ ಸಾಧನೆಗಾಗಿ ಅಥವಾ ನಮ್ಮ ಯೋಗಕ್ಷೇಮವನ್ನು ಸಂಪೂರ್ಣವಾಗಿ ಭಗವಂತನ ಅಡಿದಾವರೆಗಳಿಗೆ ಅರ್ಪಿಸಿ ಹೃದಯದಲ್ಲಿ ನಿರ್ಭರತೆಯ ಭಾವವನ್ನು ಬಲಿಯುವುದಕ್ಕಾಗಿ, ಅಹಂಕಾರ ವಿಸರ್ಜನೆಗಾಗಿ ಆಧ್ಯಾತ್ಮದಲ್ಲಿ ಮುಂದುವರೆದ ಸಿದ್ಧಪುರುಷರ ಸಂಗ, ಸನ್ಮಾರ್ಗ, ಸಾನಿಧ್ಯ ಸಂಪಾದನೆಗಾಗಿ ಶತ-ಶತಮಾನಗಳಿಂದಲೂ ಕೋಟ್ಯಾಂತರ ಭಕ್ತರ, ಸಾಧಕರ, ಸಿದ್ಧರ, ಕರೆ ಕೇಳಿ, ಮೊರೆ ಕೇಳಿ ಕೃಪೆಯಿಂದಿಳಿದ ಭಗವಂತನ ಅನುಗ್ರಹದಿಂದ ಜಾಗೃತಮೂರ್ತಿ ಸ್ಥಾನಗಳಲ್ಲಿ ತಮಃ ಪರಿಹಾರ ಮಾಡಿಕೊಳ್ಳುವ ಸಾಧನೆಗಾಗಿ ಕೈಗೊಳ್ಳುವ ತೀರ್ಥಯಾತ್ರಾ ರೂಪವಾದ ಪ್ರವಾಸವೇ **ಊರ್ಧ್ವಮುಖಿ** ಎಂಬ ಹೆಸರಿಗೆ ಅರ್ಹವಾಗುತ್ತದೆ" ಎಂದು ಕುವೆಂಪುರವರು ಅಭಿಪ್ರಾಯ ಪಡುತ್ತಾರೆ.

**'ಹೈಮಾಚಲ ಸಾನಿಧ್ಯ'** ಎಂಬ ಪ್ರವಾಸ ಕಥನದಲ್ಲಿ ಹರಿದ್ವಾರದಿಂದ ಬದರಿವರೆಗಿನ ಅನುಭವಗಳ ಸಂಗ್ರಹವಿದೆ. ಶ್ರೀಮತಿ ಶಾಂತಾದೇವಿ ಮಾಳವಾಳರ **'ಶ್ರೀಗಿರಿಯಿಂದ ಹಿಮಗಿರಿಯವರೆಗೆ'** ಎಂಬ ಪ್ರವಾಸ ಕಥನದಲ್ಲಿ ಭಾರತದ ಪುಣ್ಯಕ್ಷೇತ್ರಗಳ, ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ಸ್ಥೂಲ ಪರಿಚಯ ನೀಡುತ್ತಾರೆ. ಶ್ರೀಯುತ ಎ.ವಿ.ಶಾಸ್ತ್ರಿಯವರ **'ಭಾರತ ದರ್ಶನ ಭಾಗ-೧'** ಎಂಬ ಪ್ರವಾಸ ಕೃತಿಯಲ್ಲಿ ಇಡೀ ಭಾರತವನ್ನು ಸುತ್ತಾಡಿದ ಪರಿಚಯವನ್ನು ನೀಡುತ್ತಾರೆ. ಪಾಟೀಲ್ ಪುಟ್ಟಪ್ಪನವರ **'ನಮ್ಮದು ಈ ಭಾರತ ಭೂಮಿ'** ಎಂಬ ಕೃತಿಯಲ್ಲಿ ಭಾರತದ ರಾಜ್ಯಗಳ ಸ್ಥೂಲ ಪರಿಚಯದ ಜೊತೆಗೆ ಜನಜೀವನ, ಸಂಸ್ಕೃತಿ, ನಡೆ-ನುಡಿ, ಆಚಾರ-ವಿಚಾರ ಇವುಗಳ ಜೊತೆಗೆ ಪ್ರಾಕೃತಿಕ ವಿವರಗಳನ್ನು ನೀಡುತ್ತ ಹೋಗುತ್ತಾರೆ. ಶಿವರಾಮಕಾರಂತರ **'ಅಬೂವಿನಿಂದ ಬರಾಮಕ್ಕೆ'** ಎಂಬ ಪ್ರವಾಸ ಕೃತಿಯಲ್ಲಿ ಪ್ರವಾಸ ಸಾಹಿತ್ಯಕ್ಕೆ ಇರಬೇಕಾದ ಮೌಲ್ಯಗಳು ಕಾಣಸಿಗುತ್ತವೆ. ಕೇವಲ ಸ್ಥಳ, ದೇವರು, ಊರುಗಳು ಇವುಗಳ ಪರಿಚಯ ಮಾಡಿಕೊಡುವುದಕ್ಕಿಂತ ಅವುಗಳ ಜೊತೆ ಜೊತೆಗೆ ಆ ನಾಡಿನ ಬದುಕು ನಿಸರ್ಗಗಳ ಪರಿಚಯ ಕಾರಂತರ ಬರವಣಿಗೆ ತುಂಬ ತುಂಬಿಕೊಂಡಿರುವುದನ್ನು ಕಾಣಬಹುದಾಗಿದೆ. ಬರವಣಿಗೆಯ ಮಧ್ಯೆ ಅಲ್ಲಲ್ಲಿ ಹಾಸ್ಯದ ಪ್ರಸಂಗಗಳು ಕೂಡ ಕಂಡುಬರುತ್ತವೆ. ಜಿ. ಮರುಳು ಸಿದ್ದಯ್ಯನವರ **'ಭಾರತ ಪ್ರವಾಸ ಚಿತ್ರಗಳು'** ಎಂಬ ಪ್ರವಾಸ ಕೃತಿಯಲ್ಲಿ ಭಾರತದ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಸ್ಥಳ ಪುರಾಣಗಳ ಪರಿಚಯದೊಂದಿಗೆ ಸಿಗುತ್ತಾ ಹೋಗುತ್ತದೆ. ಪ್ರಪಂಚದ ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ ಒಂದಾದ ಭಾರತದ ಪ್ರಾಕೃತಿಕ ಸ್ಥಳಗಳ ಬಗ್ಗೆ ನಮ್ಮ ಲೇಖಕರು ಹಾಡಿಹೊಗಳಿದ್ದಾರೆ. ಸಂತೃಪ್ತ ಭಾವನೆ ತುಂಬಿದ್ದಾರೆ. "ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ, ಲಕ್ಷದ್ವೀಪಗಳಿಂದ ಅಂಡಮಾನ್ ನಿಕೋಬಾರ್

ಹವಳ ದ್ವೀಪಗಳವರೆಗೆ ಅಲ್ಲಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಐತಿಹಾಸಿಕ ಸಂಗತಿಗಳ ಪರಿಚಯವನ್ನು ಅತ್ಯಂತ ವಿವರಾತ್ಮಕವಾಗಿ ನೀಡುತ್ತಾ ಹೋಗುತ್ತಾರೆ."

ಇತ್ತೀಚೆಗೆ **ಚಾರಣ (ಟ್ರೆಕ್ಕಿಂಗ್)** ಕ್ಕೆ ಹೋಗಿ ಬಂದ ಕೆಲವರು ಕೃತಿರಚನೆಯಲ್ಲಿ ತೊಡಗಿಕೊಂಡಿದ್ದಾರೆ. ಇವುಗಳಲ್ಲಿ ಕೆಲವು ಅತ್ಯಂತ ಲವಲವಿಕೆಯಿಂದ ಕೂಡಿದ ಪ್ರವಾಸ ಕಥನಗಳಾಗಿದ್ದು ಪ್ರಭಾಕರ ಶಿಶಿಲರವರ **'ಜಲಲಜಲಧಾರೆ'**, ಶಶಿಧರ ಹೆಬ್ಬಾರ ಹಾಲಾಡಿರವರ **'ಹಿತ್ತಲಿನಿಂದ ಹಿಮಾಲಯಕ್ಕೆ'**, ಮನಿಯಾಲ ಗಣೇಶ ಶೆಣೈರವರ **'ಮಂಜು ಮುಸುಕಿದ ಕಣಿವೆಗಳಲ್ಲಿ'** ಪರಂಜ್ಯೋತಿರವರ **'ಬೆಟ್ಟಸಾಲಿನ ಮೋಡಿ'** ಮುಂತಾದವು ಕೂಡ ಸೇರಿಕೊಂಡಿವೆ.

**'ಚಂದ್ರಕಾಂತ ಶಿಲೆಯ ಚಂಡಮಾರುತ'** ಅಂಡಮಾನ್‌ನ ಪ್ರವಾಸ ಸಂದರ್ಭದಲ್ಲಿ ತಾವು ಕಂಡ ಕೆಲವು ಯುವಕರ ಸಾಹಸ ಕುರಿತು ರಚಿಸಿದ ಪ್ರವಾಸಿ ಕಥನ **ವಾಣಿರಾವ್** ಅವರದ್ದಾಗಿದೆ. ಪ್ರವಾಸ ಸಾಹಿತ್ಯದಲ್ಲಿ ಪ್ರವಾಸಿಯ ಅನುಭವಗಳೇ ಮುಖ್ಯವಾಗಿರಬೇಕಾದುದು ಅವಶ್ಯಕ. ಇಲ್ಲಿ ತಮ್ಮ ಅನುಭವಕ್ಕಿಂತ ಯುವಕರ ಸಾಹಸ, ಅವರ ಸಂತೋಷದ ಅನುಭವಗಳೇ ಇಡೀ ಪುಸ್ತಕವನ್ನು ತುಂಬಿಕೊಂಡಿದೆ. ಇಂಗ್ಲೀಷಿನ ಸಾಹಸ ಯಾತ್ರೆಯ ಪುಸ್ತಕಗಳ ಪ್ರವಾಹ ಇವುಗಳ ಮೇಲಾಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಶಾಂತಿ ಸಂಪಾದನೆಗಾಗಿ ಹಾಗೂ ಪ್ರಕೃತಿ ಸೌಂದರ್ಯೋಪಾಸಕರಾಗಿ ಕೈಗೊಂಡ ಯಾತ್ರಾ ಪ್ರವಾಸ ಇದಾಗಿದ್ದು ಇಲ್ಲಿ ಲೇಖಕಿ ಪ್ರಕೃತಿ ಮತ್ತು ಮನುಷ್ಯರ ನಡುವಿನ ನಿರಂತರ ಸಂಘರ್ಷದ ಬಗ್ಗೆ ಸಾಕಷ್ಟು ರೀತಿಯಲ್ಲಿ ಚರ್ಚಿಸಿದ್ದಾರೆ **ನಿಸರ್ಗದ ವಿರಾಟ್ ಸ್ವರೂಪ**ದ ಮುಂದೆ ಮನುಷ್ಯನ ಪ್ರಯತ್ನಗಳು ಹೇಗೆ ಗೌಣವಾಗುತ್ತದೆ ಎಂಬುದನ್ನು ಇಲ್ಲಿ ಪರಿಚಯ ಮಾಡಿಕೊಡುತ್ತಾರೆ. ಹೀಗೆ ಬೆರಳಣಿಕೆಯ ಕೆಲವು ಪ್ರವಾಸ ಕೃತಿಗಳು ಸಾಹಿತ್ಯಕಿರಬೇಕಾದ ಮೌಲ್ಯಗಳನ್ನು ದೊರಕಿಸಿಕೊಡುತ್ತವೆ. ಈ ಎಲ್ಲಾ ಕೃತಿಗಳು ಭಾರತದ ಉದ್ದಗಲ ಓಡಾಡಿದವರ ಪ್ರವಾಸಿ ಕೃತಿಗಳಾದರೆ ನಮ್ಮ ಭಾರತದ್ದೇ ಭಾಗವಾಗಿದ್ದ ಅಂಡಮಾನ್ ಮತ್ತು ನಿಕೋಬಾರ್ ಹಾಗೂ ಮಾಲ್ಡೀವ್ಸ್ ಲಕ್ಷ ದ್ವೀಪಗಳಲ್ಲಿ ಓಡಾಡಿದ ನಮ್ಮ ಪ್ರವಾಸಿ ಲೇಖಕರ ಕೆಲವು ಕೃತಿಗಳು ಓದಲು ನಮಗೆ ಸಿಗುತ್ತವೆ. ದೇ.ನಾ. ಶ್ರೀನಿವಾಸಮೂರ್ತಿಯವರ **'ಕಾಲಾತೀತರ ದ್ವೀಪಗಳಲ್ಲಿ'**, ಶ್ರೀಮತಿ ವಿಜಯ ಸುಬ್ಬರಾಜರ **'ಸ್ವರ್ಗ ದೀಪದ ಕನಸಿನ ಬೆನ್ನೇರಿ'**, ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ **'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್'**, ರಹಮತ್ ತರೀಕೆರೆಯವರ **'ಅಂಡಮಾನ್ ಕನಸು'**, ಕೆ.ಟಿ. ಗಟ್ಟಿಯವರ **'ನಿಸರ್ಗ ಕನ್ಯೆ ಅಂಡಮಾನ್'**, ತ್ರಿವೇಣಿ ಶಿವಕುಮಾರರ **'ಹವಳ ದ್ವೀಪ'**, ಉಷಾ ಪಿ. ರೈರವರ **'ಲಕ್ಷ ದ್ವೀಪಕ್ಕೆ ಲಗ್ಗೆ ಇಟ್ಟಾಗ'**, ಹೋ. ನಾಗರತ್ನರವರ **'ನಿಸರ್ಗ ಸ್ವರ್ಗ ಅಂಡಮಾನ್'**, ವಾಣಿರಾವ್‌ರವರ **'ಚಂದ್ರಕಾಂತ ಶಿಲೆಯ ಚಂಡಮಾರುತ'**, ಎ.ಎಲ್. ರಾಮಚಂದ್ರರಾವ್‌ರವರ **'ಮಾಲ್ಡೀವ್ಸ್ ದ್ವೀಪಗಳು'**, ಬಿ.ಎನ್. ಅಶೋಕ್‌ವರ್ಧನ್‌ರವರ

**'ದ್ವೀಪ ಸಮೂಹದ ಕಥೆ'** ಮುಂತಾದ ಪ್ರವಾಸಿ ಕಥನಗಳು ಭಾರತದ ಪೂರ್ವ ಪಶ್ಚಿಮದ ದ್ವೀಪ ಜಗತ್ತಿನ ಕುರಿತಾಗಿ ಬರೆದ ಪ್ರವಾಸಿ ಕೃತಿಗಳಾಗಿ ಅಧ್ಯಯನಕ್ಕೆ ಕಾಣಸಿಗುತ್ತವೆ.

ವಿಜಯಸುಬ್ಬರಾಜ್‌ರವರು ತಮ್ಮ ಕೃತಿ **'ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ'**ಯಲ್ಲಿ ಅಂಡಮಾನ್ ಬಗೆಗೆ ತಾವು ಸಂಗ್ರಹಿಸಿದ ಒಂದಷ್ಟು ಮಾಹಿತಿಯನ್ನು ಹೇಳುತ್ತಾ ಹೋಗಿ ವಿಜ್ಞಾನ ವಿಭಾಗದ ವಿದ್ಯಾರ್ಥಿಗಳೊಂದಿಗೆ ಹವಳ ದ್ವೀಪಗಳಲ್ಲಿ ಸುತ್ತಾಡಿದ ಮಧುರಾತಿಮಧುರ ನೆನಪುಗಳನ್ನು ತಮ್ಮ ಪ್ರವಾಸಿ ಕಥನದ ಆರಂಭದಲ್ಲೇ ದಾಖಲಿಸಿದ್ದಾರೆ. ಬಂಗಾಳಕೊಲ್ಲಿಯ ನಡುಗಡ್ಡೆಯಂತೆ ಕಾಣುವ ಅಂಡಮಾನ್ ಮತ್ತು ನಿಕೋಬಾರ್ ಸಣ್ಣ ಮತ್ತು ದೊಡ್ಡದಾದ ದ್ವೀಪ ಸಮುದಾಯವನ್ನು ಒಳಗೊಂಡಿದ್ದು, ವಿದ್ವಾಂಸರ ಅಭಿಪ್ರಾಯದಂತೆ ಮಲೆಯನ್ ಭಾಷೆಯ **ಹಂಡಮಾನ್** (ಹನುಮಾನ್, ಕಪಿ) ಕ್ರಮೇಣ **ಅಂಗವೇನಿಯ** > **ಅಂಡಮೇನಿಯ** ಆಗಿ ಕೊನೆಗೆ **ಅಂಡಮಾನ್** ಆಗಿ ಉಳಿದದ್ದು. ಇಲ್ಲಿಯ ಮೂಲ ನಿವಾಸಿಗಳು ಮಂಗೋಲಿಯನ್ನರನ್ನು ನೀಗ್ರೋಜನಾಂಗದವರು ಎಂದದ್ದು. ೧೭–೧೮ನೇ ಶತಮಾನದಲ್ಲಿ ಯೂರೋಪಿನ ಸಮುದ್ರ ಸಾಹಸಿಗಳ ಮತ್ತು ಮಿಷನರಿಗಳ ಮುಖಾಂತರ ಈ ಭೂಪ್ರದೇಶ ಅತಿ ಹೆಚ್ಚಿನ ಪರಿಚಯವನ್ನು ಪಡೆದುಕೊಂಡದ್ದನ್ನು ತಮ್ಮ ಪ್ರವಾಸ ಕೃತಿಯಲ್ಲಿ ವಿವರಿಸಿದ್ದಾರೆ. "ನರಿಬುದ್ಧಿಯ ಬ್ರಿಟೀಷರು ಏನನ್ನು ಬೇಕಾದರೂ ವಶಪಡಿಸಿಕೊಳ್ಳಬಲ್ಲವರೆಂಬುದಕ್ಕೆ ೧೮೫೮ರಲ್ಲಿ ಅಂಡಮಾನ್‌ನ್ನು ಸ್ವಾಧೀನ ಪಡಿಸಿಕೊಂಡರು" ಎನ್ನುತ್ತಾರೆ. ಈ ಬ್ರಿಟೀಷ್ ಜನಾಂಗಕ್ಕೂ ಅಂಡಮಾನಿಗೂ ಒಂದು ವಿಶೇಷ ಬಗೆಯ ರಾಜಕೀಯ ಸಂಬಂಧವಿತ್ತು. 'ಅಂಡಮಾನ್ ನಮ್ಮದೇ ಭಾರತದ ಭೂಭಾಗವಾಗಿದ್ದರೂ ನಮಗೇ ದಂಡನೆ ನೀಡಲು ಇದನ್ನೇ ಕೇಂದ್ರಸ್ಥಾನವಾಗಿ ಬಳಸಿಕೊಂಡಿದ್ದು ಮಹಾದುರಂತವೆಂದು ವಿಷಾದ ಹಾಗೂ ಬೇಸರವನ್ನು ವ್ಯಕ್ತಪಡಿಸುತ್ತಾರೆ'. ಭೂಮಿಯ ಮೇಲಿನ ಸ್ವರ್ಗದ್ವೀಪದಲ್ಲಿ ತಮ್ಮ ಕಾಲೇಜು ತಂಡದೊಂದಿಗೆ ಕಾರ್ಯಾಚರಣೆಗಿಳಿದ ಲೇಖಕಿ, ಗೆಳತಿ ಮತ್ತು ವಿದ್ಯಾರ್ಥಿಗಳು ಸಂತೋಷ ಮತ್ತು ಸಂಭ್ರಮದಲ್ಲಿ ಮುಳುಗಿದ್ದೆರುವುದನ್ನು ಸವಿವರವಾಗಿ ಚಿತ್ರಿಸಿದ್ದಾರೆ.

ದೇ.ನಾ. ಶ್ರೀನಿವಾಸಮೂರ್ತಿಯವರ **'ಕಾಲಾತೀತರ ದ್ವೀಪಗಳಲ್ಲಿ'** ಅಂಡಮಾನಿನ ಬಗೆಗಿನ ಪರಿಚಯವಿರುವ ಕೃತಿ. ವಿದ್ಯಾರ್ಥಿಗಳೊಂದಿಗೆ ಹಡಗಿನಲ್ಲಿ ಪ್ರಯಾಣಿಸಿದ ಸಂದರ್ಭದಿಂದ ಹಿಡಿದು ಮರಳಿ ಮನೆಗೆ ಬರುವವರೆಗಿನ ಎಲ್ಲಾ ಸಂದರ್ಭಗಳನ್ನು ಸುಂದರವಾಗಿ ದಾಖಲಿಸಿದ್ದಾರೆ. ಅಲ್ಲಿನ ಮೂಲನಿವಾಸಿಗಳು, ಅವರ ಜೀವನದ ರೀತಿನೀತಿಗಳು ನಡವಳಿಕೆಗಳನ್ನು ಓದುವಾಗ ಬೆಕ್ಕಸ ಬೆರಗಾಗುತ್ತೇವೆ. ಮೂಲ ನಿವಾಸಿಗಳ ಅಪರೂಪದ ಕೆಲವು ಚಿತ್ರಗಳನ್ನು ತಮ್ಮ ಕೃತಿಯಲ್ಲಿ ದಾಖಲಿಸಿದ್ದಾರೆ. ಇಲ್ಲಿನ ಬರವಣಿಗೆ ಸಹಜ, ಸರಳ, ಸುಂದರವಾದ ನಿರೂಪಣೆಗಳಿಂದ ತುಂಬಿದ್ದು ಈ ಕೃತಿ ಓದುಗನನ್ನು ತುಂಬಾ ಲವಲವಿಕೆಯಿಂದ ಓದಿಸಿಕೊಂಡು ಹೋಗುತ್ತದೆ.

ಹೋ. ನಾಗರತ್ನರವರ **'ನಿಸರ್ಗ ಸ್ವರ್ಗ ಅಂಡಮಾನ್'** ಕೃತಿಯಲ್ಲಿ ಅಂಡಮಾನನ್ನು **ಪ್ರಪಂಚದಲ್ಲಿಯೇ ಅತ್ಯಂತ ಸುಂದರವಾದ** ದ್ವೀಪವೆನ್ನುತ್ತಾರೆ. ಸಮುದ್ರದ ರುದ್ರಮನೋಹರ ಅಲೆಗಳ ನರ್ತನ, ಸಮುದ್ರದ ಗರ್ಭದಲ್ಲಿ ಅಡಗಿರುವ ಹವಳ ಮತ್ತು ಜಲಚರ ಪ್ರಾಣಿಗಳ ಪ್ರಪಂಚ, ಅವುಗಳಿಂದ ನಿರ್ಮಿತವಾದ ದ್ವೀಪಗಳು, ಶಂಖ, ಕಪ್ಪೆಚಿಪ್ಪು, ರಂಗುರಂಗಿನ ಮತ್ಸ್ಯ ಲೋಕ, ಅವುಗಳ ಆಕರ್ಷಣೆಗೆ ಲೇಖಕಿ ಬಹಳಷ್ಟು ಒಳಗಾಗಿದ್ದಾರೆ. ಜರವಾ ಮತ್ತು ಓಂಗೇ, ಶಾಂಪೆಯನ್ ಮತ್ತು ಸೆಂಟಿಯನ್ ಆದಿವಾಸಿಗಳ ನಡೆ–ನುಡಿ, ಆಚಾರ–ವಿಚಾರಗಳನ್ನು ಸವಿಸ್ತಾರವಾಗಿ ಇಲ್ಲಿ ಪರಿಚಯಿಸಿ ಕೊಟ್ಟಿದ್ದಾರೆ.

ತ್ರಿವೇಣಿ ಶಿವಕುಮಾರರ **'ಹವಳ ದ್ವೀಪಗಳಲ್ಲಿ'** ಅಂಡಮಾನ ಕುರಿತಾದ ಸುಂದರ ಪ್ರವಾಸಿ ಕಥನ. ಸೆಲ್ಯೂಲಾರ್ ಜೈಲ್, ಕಾಲಾಪಾನಿ ಶಿಕ್ಷೆಗೆ ಗುರಿಯಾದ ಸ್ವಾತಂತ್ರ್ಯ ಹೋರಾಟಗಾರರ ಕೆಲವು ವಿವರಗಳು ಅದರಲ್ಲೂ ಕರ್ನಾಟಕದ ವೀರರ ಹೆಸರುಗಳು, ಊರುಗಳನ್ನು ತಿಳಿಸಿದ್ದಾರೆ. ರಾಸ್ ಐಲ್ಯಾಂಡ್, ವೈಪರ್ ಐಲ್ಯಾಂಡ್‌ಗಳನ್ನು ಪರಿಚಯಿಸಿದ್ದಾರೆ. ಸೆಲ್ಯೂಲರ್ ಜೈಲಿನ ಕುರಿತಾಗಿ ಹೇಳುವಾಗ ಧ್ವನಿ ಮತ್ತು ಬೆಳಕು ಕಾರ್ಯಕ್ರಮದಲ್ಲಿ ಖೈದಿಗಳು ಎಣ್ಣೆ ತೆಗೆಯಲು ಉಪಯೋಗಿಸುತ್ತಿದ್ದ ಕೈಗಾಣ, ಅವರ ಗೋಣಿ ಉಡುಪು, ನೇಣುಗಂಬ, ಹಗ್ಗ ಇವುಗಳನ್ನು ನೋಡುತ್ತಿದ್ದಂತೆಯೇ ಅವರ ಪ್ರವಾಸಿ ಗುಂಪಿನ ಸದಸ್ಯೆ ಬಿಕ್ಕಿ ಬಿಕ್ಕಿ ಅತ್ತದ್ದು, ಕಾರ್ಯಕ್ರಮ ಮುಗಿದ ಮೇಲೆ ಅವರು ಜೈ ಭಾರತಮಾತಾಕಿ ಎಂದು ಭಾವುಕರಾಗಿ ಜೈಕಾರ ಹಾಕಿದ್ದು ಓದಿದಾಗ ಹೃದಯ ಆರ್ದ್ರವಾಗುತ್ತದೆ. ವೈಪರ್ ಐಲ್ಯಾಂಡ್‌ನಲ್ಲಿ ಮಹಿಳಾ ಖೈದಿಗಳನ್ನು ಶಿಕ್ಷೆಗೆ ಗುರಿಪಡಿಸುತ್ತಿದ್ದು, ಜಾಲಿಬಾಯ್ ದ್ವೀಪಗಳಲ್ಲಿ ಅಡ್ಡಾಡುತ್ತಾ ಈಜುಗಾರರ ಸಹಾಯದಿಂದ ಕಡದೊಳಗಿನ ಅತ್ಯದ್ಭುತ ಲೋಕವನ್ನು ಕಂಡಿರುವುದನ್ನು ದಾಖಲಿಸಿದ್ದಾರೆ.

ಕೆ. ಉಷಾ ಪಿ. ರೈರವರು **'ಲಕ್ಷ ದ್ವೀಪಕ್ಕೆ ಲಗ್ಗೆ ಇಟ್ಟಾಗ'** ಎಂಬ ಪ್ರವಾಸ ಕೃತಿಯಲ್ಲಿ ಲಕ್ಷ ದ್ವೀಪಗಳ ಬಗೆಗಿನ ಅನೇಕ ಮಾಹಿತಿಯನ್ನು ಕೊಡುತ್ತಾ ಹೋಗುತ್ತಾರೆ. "ಸುಮಾರು ೩೨ ಕಿ.ಮೀ. ವಿಸ್ತಾರದಲ್ಲಿ ಅರ್ಧ ಲಕ್ಷಕ್ಕಿಂತಲೂ ಹೆಚ್ಚು ಜನಸಂಖ್ಯೆ ಇರುವ ಲಕ್ಷದ್ವೀಪ ನಮ್ಮ ದೇಶದ ಅತಿ ಚಿಕ್ಕ ಯೂನಿಯನ್ ಟೆರಿಟರಿ. ಇಲ್ಲಿ ಇಸ್ಲಾಂ ಧರ್ಮೀಯರು ಹೆಚ್ಚಿದ್ದು ಎಲ್ಲ ಧರ್ಮದ ಜನರುಗಳು ಇಲ್ಲಿ ವಾಸವಿದ್ದಾರೆ. ಈ ದ್ವೀಪವನ್ನು ಸುತ್ತುವರಿದಿರುವ ಭೋರ್ಗರೆಯುವ ಸಮುದ್ರದಲ್ಲಿ ಚಾಚಿಕೊಂಡಿರುವ ಹವಳದ ಬಂಡೆಗಳ ಸಾಲುಗಳು, ದ್ವೀಪದ ತುಂಬಾ ಬೆಳೆದಿರುವ ಕಲ್ಪವೃಕ್ಷದ ಸಾಲುಗಳು ದ್ವೀಪವನ್ನು ಸ್ವರ್ಗ ಮಾಡಿವೆ" ಎಂಬ ಮಾತುಗಳು ಅವರ ಕೃತಿಯಲ್ಲಿ ಕಾಣಬಹುದಾಗಿದೆ.

ಕನ್ನಡದಲ್ಲಿ ಅಧ್ಯಯನಗಳ ಸಮೀಕ್ಷೆ ಬಗೆಗಿನ ಪ್ರವಾಸ ಸಾಹಿತ್ಯವನ್ನು ಕುರಿತು ಬರೆಯುವಾಗ ಈ ಸುದೀರ್ಘ ಹಿನ್ನೆಲೆಯಲ್ಲಿ ನೀಡಿದ ಉದ್ದೇಶವೆಂದರೆ ಯುರೋಪ್ ಕುರಿತ ಪ್ರವಾಸ

ಸಾಹಿತ್ಯದಲ್ಲೂ ಹೀಗೆ ಭಿನ್ನ ರೀತಿಯ ಪ್ರವಾಸ ಕಥನಗಳಿವೆ. ಬಿಡಿ ಬಿಡಿಯಾಗಿ ಅವುಗಳನ್ನು ವಿಶ್ಲೇಷಿಸುವುದು, ಸಮೀಕ್ಷಿಸುವುದು ಇಲ್ಲಿ ನನ್ನ ಉದ್ದೇಶವಲ್ಲ. ವೈವಿಧ್ಯಮಯವಾದ, ವಿವಿಧ ಸ್ವರೂಪದ ಈ ಎಲ್ಲ ಪ್ರವಾಸ ಕಥನಗಳನ್ನು ಒಟ್ಟಿಗೇ ಓದಿದಾಗ ಕಂಡು ಬರುವ ಕೆಲವು ಸಾಮಾನ್ಯ ಅಂಶಗಳನ್ನು ಗುರ್ತಿಸುವುದು ಪ್ರಸ್ತುತ ಲೇಖನದ ಉದ್ದೇಶ.

ಅಂಡಮಾನ್‌ಗೆ ಹೋಗಿ ಬಂದ ಕನ್ನಡ ಮನಸ್ಸು ಅಂಡಮಾನನ್ನು ಗ್ರಹಿಸಿದ ಕ್ರಮ ಪ್ರವಾಸ ಕಥನಗಳಲ್ಲಿ ಹೇಗೆ ಪ್ರಕಟಗೊಂಡಿದೆಯೆಂಬುದನ್ನು ನಾವು ಗಮನಿಸಬಹುದು. ಅಂಡಮಾನ್ ಪ್ರವಾಸ ಸಾಹಿತ್ಯವನ್ನು ನಾವು ಓದಿದಾಗ ಆಗುವ ಅನುಭವಕ್ಕೂ ಮೂಲಭೂತವಾದ ಒಂದು ವ್ಯತ್ಯಾಸವಿದೆ: ಅಂಡಮಾನ್ ಭಾರತೀಯ ಮನೋಭಾವಕ್ಕೆ ಹತ್ತಿರವೆನ್ನಿಸುತ್ತದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣುವ ಮತ್ತೊಂದು ಸಂಗತಿ–ಕಮ್ಯುನಿಟಿ ಫೀಲಿಂಗ್. ಜನಾಂಗದ ಕುರಿತು ಇತ್ತೀಚೆಗೆ ಅಲ್ಲಿ ಯುರೋಪಿಯನ್ ಕಮ್ಯೂನಿಟಿ ಎಂಬ ಹೊಸ ಶಕ್ತಿಯೇ ಉದಯವಾಗುತ್ತಿರುವುದನ್ನು ನಾವು ಗಮನಿಸಬಹುದು. ಸಾಮಾನ್ಯವಾಗಿ ಭಾರತೀಯ ಮನಸ್ಸು, ಕನ್ನಡ ಮನಸ್ಸು–ಇಂಡಿವಿಚ್ಯುಯಲ್ ಆದ ಪರಿಕಲ್ಪನೆಗೆ ಒಗ್ಗಿರುವಂಥದು. 'ನಾನು' ಎನ್ನುವ ಭಾರತೀಯ ಮನಸ್ಸಿಗೂ, 'ನಾವು' ಎನ್ನುವ ಯೂರೋಪ್ ಪರಿಕಲ್ಪನೆಗೂ ಇರುವ ವ್ಯತ್ಯಾಸವನ್ನು ನಮ್ಮ ಲೇಖಕರು ತಮ್ಮ ಪ್ರವಾಸ ಕಥನಗಳನ್ನು ಗುರ್ತಿಸಿದ್ದಾರೆ.

ಕುವೆಂಪು ರವರ ಪರಿಕಲ್ಪನಾತ್ಮಕ ಸಿದ್ಧಾಂತವಾದ ಅಲೆಮಾರಿಯಾಗಿ ಹೋಗುವುದು

**" ಎಲ್ಲಿಯೂ ನಿಲ್ಲದಿರು ಮನೆಯನೆಂದು ಕಟ್ಟದಿರು,**

**ಕೊನೆಯನೆಂದು ಮುಟ್ಟದಿರು ಸದಾ ನೀ ಅನಂತವಾಗಿರು"**

ಪ್ರವಾಸ ಸಾಹಿತ್ಯ ಓದುವಾಗೆಲ್ಲ ಗೋಪಾಲಕೃಷ್ಣ ಅಡಿಗರ ಈ ಸಾಲು ನೆನಪಾಗುತ್ತದೆ.

**"ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ"**

ಮನುಷ್ಯ ಪ್ರವಾಸ ಏಕೆ ಮಾಡುತ್ತಾನೆ? ಏನು ಪ್ರಯೋಜನ? ಏನು ತೃಪ್ತಿ? ಅನುಕೂಲಗಳು ಇಲ್ಲದ ಕಾಲದಲ್ಲಿ ಪ್ರವಾಸಕ್ಕಾಗಿ, ಪ್ರವಾಸದಲ್ಲಿ ಏನೆಲ್ಲ ಸಾಹಸ ಮಾಡಿದ್ದಾನೆ, ಕಷ್ಟ ಅಪಾಯಗಳನ್ನು ಸಹಿಸಿದ್ದಾನೆ ಎಂಬುದು ತಿಳಿದಾಗ ಆಶ್ಚರ್ಯವಾಗುತ್ತದೆ. ಆದ್ದರಿಂದ ಪ್ರವಾಸ ಮಾಡುವ ಚಪಲ ಒಂದು ಮೂಲ ಮನೋವೃತ್ತಿ ಇರಬಹುದೆ, ಎನಿಸುತ್ತದೆ.

"ಮನುಷ್ಯ ಮತ್ತು ನಿಸರ್ಗ ಸಂಬಂಧ ನಾಗರಿಕತೆಯಿಂದ ಬಿರುಕು ಬಿಟ್ಟಿದೆ. ಕಂದಕ ಏರ್ಪಟ್ಟಿದೆ. ತೀರ್ಥಯಾತ್ರೆ ನೆವದಿಂದ ಸ್ವಲ್ಪ ಕಾಲ ಆ ಸಂಬಂಧ ಸ್ಥಾಪನೆ ಪ್ರಯತ್ನವೆ?" ಎಂದು ಕೇಳಿಕೊಳ್ಳುತ್ತಾರೆ. "ಮನುಷ್ಯನ ಆತ್ಮದಲ್ಲಿಯೆ ಯಾತ್ರೆಯ ಅವಶ್ಯಕತೆಗೆ ಒಂದು

ಆಧಾರವಿರಬಹುದೆ? ಮನುಷ್ಯ ವಾಸ್ತವಾಗಿಯೂ ಈ ಪ್ರಪಂಚದಲ್ಲಿ ಒಬ್ಬ ಪ್ರವಾಸಿ. ಜೀವನ ಸಮಸ್ತವೂ ಒಂದು ಪ್ರವಾಸ". ಎಂದು ಹೇಳುತ್ತಾ ಮೂರು ಬಗೆಯಾಗಿ ವಿಂಗಡಿಸಿ ವಿವರಿಸುತ್ತಾರೆ. ಅಧೋಮುಖಿ, ಸಮತಲಮುಖಿ, ಮತ್ತು ಊರ್ಧ್ವಮುಖಿ, ತೀರ್ಥ ಯಾತ್ರೆ ಊರ್ಧ್ವಮುಖಿಯಾದದ್ದು ಮಾದಕದ್ರವ್ಯಗಳ ಸೇವನೆಯಿಂದ ಪಡೆಯುವ ದೃಷ್ಟಿಯ ವ್ಯಸನಗಳು, ಪ್ರವಾಸಗಳನ್ನು ಸಮತಲಮುಖಿ ವರ್ಗಕ್ಕೆ ಸೇರಿಸಬೇಕಾಗುತ್ತದೆ.

ತೇಜಸ್ವಿ "ಮನುಷ್ಯ ಹುಟ್ಟಿನಿಂದಲೇ ಒಬ್ಬ ಅಲೆಮಾರಿ. ಅವನು ಹುಟ್ಟಿದ್ದೆ ಹಡಗಿನಲ್ಲಿ, ಕಾಲನೆಂಬ ನದಿ ಎದೆಯಲ್ಲಿ" ಎನ್ನುತ್ತಾರೆ ಮ್ಯಾಥ್ಯೂ ಆರ್ನಾಲ್ಡ್. "ಮನುಷ್ಯ ತನಗೆ ಬೇಕಾದದ್ದು ಹುಡುಕುತ್ತಾ ಪ್ರಪಂಚವೆಲ್ಲಾ ಸುತ್ತುತ್ತಾನೆ. ಆದರೆ ಕೊನೆಗೆ ಮನೆಗೆ ಹಿಂದಿರುಗಿ ಅದನ್ನು ಕಾಣುತ್ತಾನೆ.""ನನ್ನ ಮಟ್ಟಿಗೆ ಹೇಳುವುದಾದರೆ, ಎಲ್ಲಿಗಾದರೂ ಹೋಗಬೇಕೆಂದು ಪ್ರವಾಸ 'ಹೋಗು'ವುದು ನನಗೆ ಮುಖ್ಯ. ಪ್ರವಾಸ ಮಾಡುತ್ತೇನೆ. ಚಲಿಸುವುದು, ಹೋಗುವುದು ಮಹತ್ವದ್ದಾಗಿದೆ." "ಕೋಶ ಓದುವುದಕ್ಕಿಂತ ದೇಶ ನೋಡುವುದು ಮೇಲು" ಎಂಬ ಗಾದೆಯಲ್ಲಿ ಸ್ವಾನುಭವದ ಮಹತ್ವಕ್ಕೆ ಒತ್ತು. ವಸಾಹತು ನೆಲೆಗೊಳಿಸಿದ ಸಾಹಸಿಗರಂತಹವರ ಕಥೆಗಳು ಆ ಅದಮ್ಯ ಪ್ರವೃತ್ತಿಯ ಚರಿತೆಗಳಾಗಿವೆ.*

ಪ್ರವಾಸ ಸಾಹಿತ್ಯವು ಅತ್ಯಂತ ಸಂಕೀರ್ಣವಾದ ಸಾಹಿತ್ಯ ಪ್ರಕಾರ. ಅದರಲ್ಲಿ ಸೇರ್ಪಡೆಯಾಗದ ವಸ್ತುವೇ ಈ ಜಗತ್ತಿನಲ್ಲಿಲ್ಲ; ಅದಕ್ಕೆ ಹೊರತಾದ ವಿಷಯವೇ ಈ ಲೋಕದಲ್ಲಿಲ್ಲ. ಇತಿಹಾಸ, ಭೂಗೋಳ, ಸಮಾಜಶಾಸ್ತ್ರ, ತತ್ತ್ವಶಾಸ್ತ್ರ, ಅರ್ಥಶಾಸ್ತ್ರ, ಐತಿಹ್ಯ, ಪುರಾಣ, ಸಂಸ್ಕೃತಿ, ಶಿಲ್ಪ, ಚಿತ್ರ, ಸಾಹಿತ್ಯ, ಜಾನಪದ ಮುಂತಾದ ನೂರಾರು ವಿವರಗಳು ಅದರಲ್ಲಿ ಕೂಡಿಕೊಳ್ಳುತ್ತವೆ. ಇವೆಲ್ಲಕ್ಕೂ ಕಿರೀಟವಿಟ್ಟಂತೆ ಲೇಖಕನು ಆ ಜಡ ವಿವರಗಳಿಗೆ ಸ್ವಾನುಭವವೆಂಬ ಚೈತನ್ಯವನ್ನು ತುಂಬುತ್ತಾನೆ. ಯಾವುದನ್ನು ಎಷ್ಟು ಹೇಳಬೇಕು ಹೇಗೆ ಹೇಳಬೇಕು, ಎಲ್ಲಿ ಹೇಳಬೇಕು ಎಂಬ ಔಚಿತ್ಯವನ್ನೂ, ಕುಶಲತೆಯನ್ನೂ, ತಂತ್ರಗಾರಿಕೆಯನ್ನೂ ಮೆರೆಯುತ್ತಾನೆ. ಹೀಗಾಗಿ ಅದು ಕ್ಷೇತ್ರಸಾಹಿತ್ಯ, ಲಲಿತ ಪ್ರಬಂಧ, ಜೀವನ ಚರಿತ್ರೆ, ಆತ್ಮಕಥೆ, ಬೇಟೆ ಸಾಹಿತ್ಯ, ವಿಚಾರಸಾಹಿತ್ಯ, ಪತ್ರಸಾಹಿತ್ಯ, ನಾಟಕ, ವಿಮರ್ಶೆ, ಸಣ್ಣಕತೆ, ಸ್ಪರ್ಶವನ್ನು ಪಡೆದುಕೊಳ್ಳುತ್ತದೆ. ರಂಗ ಮೇಲೆ ನಲಿದಾಡುವ ಪಾತ್ರಗಳು ಕಾದಂಬರಿ ಮುಂತಾದ ವಿವಿಧ ಸಾಹಿತ್ಯ ಪ್ರಕಾರಗಳ ಕ್ಷಣಕ್ಷಣಕ್ಕೂ ಹೊಸ ಹೊಸದನ್ನು ತೋರಿಸುವಂತೆ ಪ್ರವಾಸಕಥನಕಾರನೂ ಸಹ ನಿರೂಪಣೆಯುದ್ದಕ್ಕೂ ಹೊಸ ಹೊಸ ಸಂಗತಿಗಳ ರಸದೌತಣವನ್ನು ಮಾಡಿಸುತ್ತಾನೆ.

# ಅಧ್ಯಾಯ – ೦೪

## ಇತಿಹಾಸದ ಕಣ್ಣುಗಳಲ್ಲಿ ಅಂಡಮಾನ್

ಕ್ಷೇತ್ರ ಸಾಹಿತ್ಯವನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕು. ಯಾವುದಾದರೊಂದು ಕ್ಷೇತ್ರದ ಪ್ರೇಕ್ಷಣಿಯ ಸ್ಥಳಗಳ ಹಾಗೂ ಭೌಗೋಳಿಕ, ಐತಿಹಾಸಿಕ, ಸಾಮಾಜಿಕ ಸಂಗತಿಗಳ ವಿವರಗಳನ್ನು ಒಳಗೊಂಡ ಗ್ರಂಥಕ್ಕೆ 'ಕ್ಷೇತ್ರ ಸಾಹಿತ್ಯ' ಎಂದು ಹೆಸರು. ಅದು ಪ್ರವಾಸ ಕಥನದ ಪಕ್ಕದಲ್ಲಿಯೇ ನಿಲ್ಲುವ ಸಾಹಿತ್ಯ ಪ್ರಕಾರವಾದರೂ ಅದರಲ್ಲಿ ಲೇಖಕನು ತಾನು ಆ ಕ್ಷೇತ್ರವನ್ನು ನೋಡಿದ್ದು ಹೇಗೆ? ಅದರ ವಿವರಗಳನ್ನು ತಿಳಿದಿದ್ದು ಹೇಗೆ, ತನಗೆ ಆದ ಅನುಭವಗಳು ಎಂಥವು, ತಾನು ಕಂಡ ಜನರು ಎಂಥವರು, ತನ್ನ ನೋಟದ ಸಿಹಿಕಹಿಗಳೇನು ಎಂಬ ಸಂಗತಿಗಳನ್ನೇನೂ ನಿರೂಪಿಸುವುದಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಆತ್ಮಾನುಭೂತಿಯ ಲೇಪ ಅದಕ್ಕಿರುವುದಿಲ್ಲ. ತಾನು ಓದಿ ತಿಳಿದ ಕೇಳಿ ತಿಳಿದ ಮಾಹಿತಿಗಳ ಬಲದಿಂದಲೇ ಒಬ್ಬ ಲೇಖಕನು ಕ್ಷೇತ್ರ ಸಾಹಿತ್ಯವನ್ನು ನಿರ್ಮಿಸಿಬಿಡಬಹುದು. ಆದರೆ ಪ್ರವಾಸ ಸಾಹಿತ್ಯ ಹಾಗಲ್ಲ.

ಡಾ. ಜಿ.ಎಸ್. ಶಿವರುದ್ರಪ್ಪ ಅವರು ಭಾರತೀಯ ಮನೋಧರ್ಮ ಎಂಥದೆಂದು ಬಹಳ ಚೆನ್ನಾಗಿ ಹೇಳಿದರು. ನಮ್ಮ ಹಿಂದಿನವರದು ತೀರ್ಥಯಾತ್ರೆಯ ಒಂದು ಮನೋಧರ್ಮ, ಎಂದರು–ಈಗ 'ತೀರ್ಥಯಾತ್ರೆ' ಎಂಬುದಕ್ಕೂ ಬೇರೆ ಅರ್ಥ ಬಂದು ಬಿಟ್ಟಿದೆ! ಈ ಅರ್ಥವನ್ನು ಬಿಟ್ಟು ನೋಡಿದರೆ ನಮ್ಮ ಹಿಂದಿನವರದು ತೀರ್ಥಯಾತ್ರೆಯ ಮನೋಧರ್ಮ, ಪ್ರವಾಸದ ಮನೋಧರ್ಮ ಅಲ್ಲ. ಅವರಿಗೆ ಪ್ರವಾಸದ ಪ್ರವೃತ್ತಿಯೇ ಇರಲೇ ಇಲ್ಲ ಎಂದು ಹೇಳುವ ಹಾಗಿಲ್ಲ. ಅದು ಆನುಷಂಗಿಕವಾಗಿತ್ತು; ಗೌಣವಾಗಿತ್ತು ಅಷ್ಟೆ. ಅವರ ಪಾಲಿಗೆ ಅದೊಂದು ಧಾರ್ಮಿಕ ಕರ್ತವ್ಯವಾಗಿತ್ತು. ಜೊತೆಗೆ ಅವರ ಸೌಂದರ್ಯ ಪ್ರಜ್ಞೆಯೂ ಅವರಿಗರಿವಿಲ್ಲದೆ ಕೆಲಸ ಮಾಡುತ್ತಿತ್ತು . ನಮ್ಮ ತೀರ್ಥಕ್ಷೇತ್ರಗಳೆಲ್ಲ ಇರುವುದು ಪ್ರಕೃತಿ ಸೌಂದರ್ಯದ ಮಡಿಲಲ್ಲಿ.ರಮಣೀಯವಾದ ಪರಿಸರದಲ್ಲ ಎಂಬುದನ್ನು ನಾವು ಮರೆಯಬಾರದು. ಸೌಂದರ್ಯಸ್ವಾದನೆಗೆಂದೇ ಅವರು ಪ್ರವಾಸ ಮಾಡದಿದ್ದರೂ ಪ್ರಕೃತಿ ಸೌಂದರ್ಯವನ್ನು ನೋಡಿ ಅವರು ಸಂತೋಷಪಡುತ್ತಿದ್ದರು. ಯಾತ್ರೆಯ ಆನಂದ ಪಡೆಯುತ್ತಿದ್ದರು. ಜೊತೆಗೆ ತೀರ್ಥ ಯಾತ್ರೆಯಿಂದ ಪುಣ್ಯ ಸಿಗುತ್ತದೆ, ಮೋಕ್ಷ ಸಿಗುತ್ತದೆ ಎಂಬ ನಂಬಿಕೆಯೂ ಇತ್ತು.

**ಅ) ಚಾರಿತ್ರಿಕ ನೆಲೆ:**

ಅಂಡಮಾನ್ ಸ್ವತಂತ್ರಪೂರ್ವದಲ್ಲಿ ಹೆಚ್ಚು ಪ್ರಸಿದ್ಧವಾಗಿದ್ದು ಖೈದಿಗಳನ್ನು ಬಂಧಿಸಿಡುವ ಜೈಲಿಗೆ ಹೆಚ್ಚು ಪ್ರಸಿದ್ಧ ಏಕೆಂದರೆ ಹಲವಾರು ಕಿ.ಮೀ. ಗಳ ವರೆಗೆ ಸಮುದ್ರವೇ

ಆವರಿಸಿರುವುದರಿಂದ ಬಹಳ ಸುಲಭವಾಗಿ ಖೈದಿಗಳು ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಆದಕಾರಣದಿಂದಾಗಿ ಇತಿಹಾಸದ ಪುಟದಲ್ಲಿ ಅಂಡಮಾನ್ ಜೈಲಿಗೆ ಹೆಚ್ಚಿನ ರೀತಿಯ ಮನ್ನಣೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಈ ಕಪ್ಪು ನೀರಿನ ಮಧ್ಯದಲ್ಲಿ ತಂದಿಡುತ್ತಿದ್ದರು.

೧೮೫೭ರಲ್ಲಿ ಲಾರ್ಡ್ ಕೇನಿಂಗ್ ತನ್ನ ನಿಕಟವರ್ತಿ ಪ್ರೆಡ್ರಿಕ್ ಜೆ ಮೌಂಟ್, ಇಂಡಿಯನ್ ಜೈಲುಗಳ ಇನ್ಸ್‌ಫೆಕ್ಟರ್‌ರನ್ನು ಅಂಡಮಾನ್ ದ್ವೀಪಗಳ ಸಮೀಕ್ಷೆ ನಡೆಸುವಂತೆ ಆಜ್ಞೆ ನೀಡಿದ. ಆತ ದೊಡ್ಡ ಸ್ಟೀಮರ್ 'ಪ್ಲೂಟೊ'ನಲ್ಲಿ ಹಲವು ಅಧಿಕಾರಿಗಳೊಂದಿಗೆ ಸಮೀಕ್ಷೆ ನಡೆಸಿ ಕೊನೆಗೆ ಎಲ್ಲಾ ದ್ವೀಪಗಳಲ್ಲೂ ಪೋರ್ಟ್‌ಬ್ಲೇರ್ ದ್ವೀಪವೇ ಜೈಲು ಕಟ್ಟಲು ಸರಿಯಾದ ದ್ವೀಪ ಎಂದು ವರದಿಯಲ್ಲಿ ತಿಳಿಸಿದ. ಜೊತೆಗೆ 'ಅಂಡಮಾನ್ ಐಲ್ಯಾಂಡರಸ್' ಎಂಬ ಪುಸ್ತಕದಲ್ಲಿ ಇಲ್ಲಿನ ಆದಿವಾಸಿಗಳ ಬಗ್ಗೆ ಅಧಿಕೃತ ವಿಷಯಗಳನ್ನು ದಾಖಲೆ ಮಾಡಿದ ಎಂದು ತಿಳಿದುಬರುತ್ತದೆ.

ಆದಿಮಾನವರು, ರಾಸ್ ದ್ವೀಪದ ಹತ್ತಿರದಲ್ಲಿದ್ದ ಪೋರ್ಟ್‌ಬ್ಲೇರ್‌ನ ಅಬರ್‌ಡೀಸ್ ಬಸ್ತಿ ಮೇಲೆ ದಾಳಿ ಮಾಡಿ ಬ್ರಿಟಿಷರನ್ನು ಸಾಯಿಸಿದರು. ನಿರಂತರವಾಗಿ ಆಂದೋಲನಕಾರರ ಗುಂಪುಗಳನ್ನು ಇಲ್ಲಿಗೆ ಕರೆದು ತರಲಾಗುತ್ತಿದ್ದು, ವಸತಿ ಮತ್ತು ಊಟದ ವ್ಯವಸ್ಥೆಯನ್ನು ಸರಿಯಾಗಿ ಮಾಡಿರಲಿಲ್ಲ. ಜೊತೆಗೆ ಆದಿಮಾನವರ ದಾಳಿಯಿಂದ ಆಂದೋಲನಕಾರರನ್ನು ರಕ್ಷಿಸಲು ಸಾಧ್ಯವಾಗದೆ ಹೊಸ ಜೈಲನ್ನು ಕಟ್ಟಲು ಯೋಚಿಸಲಾಯಿತು. ಜೇಮ್ಸ್ ಪೆಟ್ಟಿಸನ್ ವಾಕರ್ ಪೋರ್ಟ್‌ಬ್ಲೇರ್‌ನ್ನು ಮೊದಲ ಜೈಲು ಸೂಪರಿನ್ವಿಂಡೆಂಟ್ ಆಗಿ ನೇಮಿಸಲಾಯಿತು. ವಾಕರ್ ನಾಲ್ಕು ಬ್ರಿಟಿಷ್ ಅಧಿಕಾರಿಗಳು ಮತ್ತು ಏಳನೂರ ಮೂವತ್ತೂರು ಖೈದಿಗಳೊಂದಿಗೆ ೧೮೫೮ರಲ್ಲಿ ಇಲ್ಲಿಗೆ ಆಗಮಿಸಿದ. ಈತನ ಜೊತೆಗೆ ಮೌಂಟ್ ಎಂಬ ವೈದ್ಯನೂ ಬಂದಿದ್ದ.

ದೇಶದಲ್ಲಿ ಮೊದಲ ಬಾರಿಗೆ ೧೮೫೭ರಲ್ಲಿ ಬ್ರಿಟಿಷರ ವಿರುದ್ಧ 'ಕ್ವಿಟ್ ಇಂಡಿಯಾ ಚಳುವಳಿ' ಕಾಣಿಸಿಕೊಂಡಿತು. ಮುಂದಿನ ದಿನಗಳಲ್ಲಿ ಇದು ದೊಡ್ಡದಾಗಿ ಬೆಳೆಯುವ ಸೂಚನೆಗಳನ್ನು ಕಂಡ ಬ್ರಿಟಿಷರು ಈ ಚಳುವಳಿಯನ್ನು ತಡೆಗಟ್ಟಲು ಮತ್ತು ಆಂದೋಲನಕಾರರನ್ನು ಹತ್ತಿಕ್ಕಲು ಬಂಗಾಳ ಕೊಲ್ಲಿಯ ಮಧ್ಯೆ ಪೋರ್ಟ್‌ಬ್ಲೇರ್ ದ್ವೀಪದಲ್ಲಿ ದೊಡ್ಡದಾದ ಸೆಲ್ಯೂಲಾರ್ ಜೈಲನ್ನು ಕಟ್ಟಲು ಯೋಜನೆಯನ್ನು ರೂಪಿಸಿದರು. ಮುಂದೆ ಇದು ಸುಮಾರು ತೊಂಬತ್ತು ವರ್ಷಗಳ ಕಾಲ ಭಾರತೀಯ ಸ್ವಾತಂತ್ರ್ಯ ಹೋರಾಟಗಾರರಿಗೆ ಅತ್ಯಂತ ಹೇಯ ಹಿಂಸೆ ನೀಡಿದ ಮತ್ತು ದುಃಸ್ವಪ್ನಕಾರಕ ಜೈಲಾಗಿ, **'ಸೆಲ್ಯೂಲಾರ್ ಜೈಲ್'** ಅಥವಾ **'ಕಾಲಾಪಾನಿ ಶಿಕ್ಷೆ'** ಎಂದೇ ಕುಖ್ಯಾತಿಯಾಯಿತು. ೧೮೫೮ರಲ್ಲಿ ಮೊದಲ ಬಾರಿಗೆ ಇಲ್ಲಿಗೆ ಆಂದೋಲಕಾರರನ್ನು ಹಿಡಿದು ತರಲಾಯಿತು. ಮೊದಲಿಗೆ ಕಟ್ಟಿದ್ದ ಸಣ್ಣಸಣ್ಣ ಕಟ್ಟಡಗಳು ಸಾಲದಾಗಿ ದೊಡ್ಡದಾಗಿ ಜೈಲನ್ನು ಕಟ್ಟಲು ಯೋಚಿಸಲಾಯಿತು.

**ಸೆಲ್ಯೂಲಾರ್ ಜೈಲ್:**

ನಕ್ಷತ್ರ ಮೀನಿನ ೭ ರೆಕ್ಕೆ ಅಥವಾ ಮೃದ್ವಂಗಿಯ ಟೆಂಟ್ಯಾಕಲ್ಸ್ ಆಕಾರದಲ್ಲಿ ಮೂರು ಅಂತಸ್ತಿನ ೭ ಕಟ್ಟಡಗಳನ್ನು ಕಟ್ಟಲು ೩೦, ಸೆಪ್ಟೆಂಬರ್ ೧೮೯೬ ರಂದು ಅಡಿಪಾಯ ಹಾಕಲಾಯಿತು. ಸರಿಯಾಗಿ ಹತ್ತು ವರ್ಷಗಳ ನಂತರ ೧೯೦೬ರ ಅಂತ್ಯಕ್ಕೆ ಈ ಜೈಲನ್ನು ಕಟ್ಟಿ ಮುಗಿಸಲಾಯಿತು. ಮೊದಲಿಗೆ ೬೦೦ ಜನರಿಗೆ ಮಾತ್ರ ಜೈಲು ನಿರ್ಮಿಸಲು ಯೋಚಿಸಿ ಅದರ ವೆಚ್ಚ ೫,೧೭,೩೫೨ ರೂಪಾಯಿಗಳೆಂದು ಲೆಕ್ಕ ಹಾಕಲಾಗಿದ್ದು ಇದರಲ್ಲಿ ಕಬ್ಬಿಣ, ಕಲ್ಲು-ಮಣ್ಣಿನ ವೆಚ್ಚವನ್ನು ಸೇರಿಸಿರಲಿಲ್ಲ. ಇದರ ಜೊತೆಗೆ ೬೦೦ ಜನ ಖೈದಿಗಳು ಮತ್ತು ಕೆಲವು ಕೆಳದರ್ಜೆ ಉಸ್ತುವಾರಿ ಅಧಿಕಾರಿಗಳ ಸಂಬಳವನ್ನು ಸೇರಿಸಿರಲಿಲ್ಲ. ಪಕ್ಕದ ವೈಪರ್ ದ್ವೀಪದಲ್ಲಿದ್ದ ಖೈದಿಗಳಿಂದ ಪ್ರತಿ ತಿಂಗಳು ೨೦,೦೦೦ ಚದರ ಅಡಿ ಶಿಲೆಗಳನ್ನು ಕಟ್ಟಡಕ್ಕಾಗಿ ಒಡೆದು ತರಲು ದಕ್ಷಿಣ ದ್ವೀಪ ಸಮೂಹಗಳ ಅಧಿಕಾರಿಗೆ ಒಪ್ಪಿಸಲಾಯಿತು. ಇದು ಸಾಲದೆಂಬಂತೆ ಪಕ್ಕದ ಬರ್ಮಾ ದೇಶದಿಂದ ಅಗಾಧ ಕಲ್ಲು ಮತ್ತು ಇಟ್ಟಿಗೆಗಳನ್ನು ತರಿಸಲಾಯಿತು. ಜೊತೆಗೆ ಕಟ್ಟಡದ ಕೆಲಸವನ್ನು ತೀವ್ರಗೊಳಿಸಲು ಸುತ್ತಮುತ್ತಲ ದ್ವೀಪಗಳಲ್ಲಿದ್ದ ಖೈದಿಗಳನ್ನು ಕರೆದು ತರಲಾಗಿತ್ತು. 'ಮೆಕ್ ಕ್ಯೂಲಿನ್' ಎಂಬ ಉಪ ಎಂಜಿನಿಯರನ್ನು ಮೊದಲಿಗೆ ಕಟ್ಟಡದ ಉಸ್ತುವಾರಿ ನೋಡಿಕೊಳ್ಳಲು ನಿಯೋಜಿಸಲಾಗಿತ್ತು.

ಪ್ರತಿ ಕೊಠಡಿ ೧೩.೫೭ ಅಡಿ ಉದ್ದ ಅಗಲ ಮತ್ತು ೧೦ ಅಡಿ ಎತ್ತರವಾಗಿದ್ದು ಹಿಂದಿನ ಗೋಡೆಯಲ್ಲಿ ೩೧ ಅಡಿ ಅಗಲದ ಕಿಟಕಿಯನ್ನು ಮತ್ತು ಮುಂದೆ ಗಟ್ಟಿಯಾದ ಕಬ್ಬಿಣ ಗ್ರಿಲ್ ಬಾಗಿಲುಗಳನ್ನು ಇಡಲಾಯಿತು. ಎಲ್ಲಾ ೭ ಕಟ್ಟಡಗಳು ಕೂಡುವ ಮಧ್ಯೆ ಎತ್ತರದ ಗೋಪುರ ಇದ್ದು ಕಾವಲುಗಾರರು ಇಲ್ಲಿಂದ ಎಲ್ಲಾ ಕಡೆಯೂ ವೀಕ್ಷಿಸಬಹುದಾಗಿತ್ತು. ವಿಶೇಷವೆಂದರೆ ಪೂರ್ತಿ ಕಟ್ಟಡದ ಮುಂದಿನ ಗೋಡೆಗಳನ್ನು ಹಿಂದಿನ ಕಟ್ಟಡದಿಂದ ಪೂರ್ಣವಾಗಿ ನೋಡುವಂತೆ ರೂಪಿಸಲಾಗಿತ್ತು. ಒಟ್ಟು ೨೧ ಅಂತಸ್ತುಗಳಲ್ಲಿ ರಾತ್ರಿ ಹೊತ್ತು ೨೧ ಕಾವಲುಗಾರರನ್ನು ನೇಮಿಸಲಾಗಿದ್ದು, ಮಧ್ಯದ ಎತ್ತರದ ಗೋಪುರದಲ್ಲಿ ಹಗಲೂ ರಾತ್ರಿ ವಿಶೇಷ ಕಾವಲು ಪಡೆ ಇರುತ್ತಿತ್ತು. ಸಾಯಂಕಾಲದಿಂದ ಬೆಳಗಿನವರೆಗೂ ೧೨ ಗಂಟೆ ಕಾಲ ಖೈದಿಗಳನ್ನು ಕೊಠಡಿಗಳಲ್ಲಿ ಕೂಡುಹಾಕಲಾಗಿ ಆ ಸಮಯದಲ್ಲಿ ಮಲ ಮೂತ್ರ ಬಂದರೆ ಖೈದಿಗಳು ಒಳಗೆ ಹೋಗುವಂತಿರಲಿಲ್ಲ. ಕಪ್ಪೆಯಂತೆ ಹೊರಕ್ಕೆ ತೆವಳಿಕೊಂಡು ಬಂದು ಕಾವಲುಗಾರನ ಮೂಲಕ ಜಮಾದಾರನಿಗೆ ವಿಷಯ ತಿಳಿಸಿ ಅವನ ಅಪ್ಪಣೆ ಪಡೆದ ಮೇಲೆ ಹೊರಗೆ ಬಂದು ಮಲ ಮೂತ್ರ ವಿಸರ್ಜನೆ ಮಾಡಬೇಕಾಗಿತ್ತು. ಇದಕ್ಕಾಗಿ ಅವರಿಗೆ ಬೆಳಿಗ್ಗೆ ಜೈಲರ್‌ನಿಂದ ಶಿಕ್ಷೆ ಕಾದಿರುತ್ತಿತ್ತು.

ಈ ಜೈಲಿಗೆ **'ಡೇವಿಡ್ ಬೆರ್ರಿ'** ಎಂಬ ರಾಕ್ಷಸನಂತ ಜೈಲರ್ ಇದ್ದು, ಆತ **'ನಾನೇ ಇಲ್ಲಿ ದೇವರು ದೆವ್ವ ಎಲ್ಲ. ನನ್ನ ಆಜ್ಞೆಯನ್ನು ಇಲ್ಲಿ ದೇವರೂ ಮೀರಲಾರ'** ಎಂದು ಸ್ವಾತಂತ್ರ್ಯ

ಹೋರಾಟಗಾರರನ್ನು ಚಿತ್ರ ಹಿಂಸೆಗೆ ಒಳಪಡಿಸುತ್ತಿದ್ದ. ತೆಂಗಿನಕಾಯಿ ಎಣ್ಣೆ ತೆಗೆಯುವುದು, ಹುಕ್ಕಾ ಶೆಲ್ಸ್ ಮಾಡುವುದು. ಹಗ್ಗ ಹೆಣೆಯುವುದು, ಬೆಟ್ಟ ಕಡೆಯುವುದು, ಹಳ್ಳಗಳನ್ನು ತುಂಬುವುದು, ಕಲ್ಲು ಒಡೆಯುವುದು, ಇಟ್ಟಿಗೆ ಮಾಡುವುದು, ಮರಗಳಿಂದ ರಬ್ಬರ್ ಹಾಲು ತೆಗೆಯುವುದು ಇತ್ಯಾದಿ ಕೆಲಸಗಳನ್ನು ಅವರು ನಿರಂತರವಾಗಿ ಮಾಡಬೇಕಾಗಿತ್ತು. ಇಲ್ಲಿಗೆ ಬಂದ ಖೈದಿಗಳನ್ನು ೬ ತಿಂಗಳು ತೀವ್ರವಾದ ಶಿಕ್ಷೆಗೆ ಒಳಪಡಿಸಲಾಗಿ, ಮುಂದೆ ೧೮ ತಿಂಗಳ ಕಾಲ ಬೇರೆ ದ್ವೀಪಗಳ ಜೈಲಿಗೆ ವರ್ಗಾಯಿಸಲಾಗುತ್ತಿತ್ತು. ಅನಂತರ ೩ ವರ್ಷ ರಾತ್ರಿ ವೇಳೆ ಬ್ಯಾರಕ್‌ಗಳಲ್ಲಿ ಮಲಗಿಸಿ ಅವರಿಂದ ದಿನವೆಲ್ಲ ದುಡಿಸಲಾಗುತ್ತಿತ್ತು. ಮುಂದೆ ೫ ವರ್ಷ ಕಾಲ ಕೂಲಿ ಆಳುಗಳಾಗಿ ದುಡಿತ. ಈ ಸಮಯದಲ್ಲಿ ಸ್ವಲ್ಪ ಕೂಲಿ ದೊರಕುತ್ತಿತ್ತು. ಒಟ್ಟು ೧೦ ವರ್ಷ ಕಾಲ ತೀವ್ರ ರೀತಿಯ ಶಿಕ್ಷೆಗಳನ್ನು ಅನುಭವಿಸಿದ ಮೇಲೆ ಬ್ರಿಟಿಷರು ತೋರಿಸಿದ ಯಾವುದಾದರು ಒಂದು ಸ್ಥಳದಲ್ಲಿ ಅವರು ಸ್ವತಂತ್ರವಾಗಿ ಬದುಕ ಬಹುದಾಗಿತ್ತು. ಅಲ್ಲಿ ಅವರಿಗೆ ಒಂದಿಷ್ಟು ಬಂಜರು ಭೂಮಿ ಕೊಡಲಾಗುತ್ತಿತ್ತು. ಇಲ್ಲಿ ಅವರು ಆಕಳು ಇಟ್ಟುಕೊಂಡು, ಮದುವೆ ಕೂಡ ಮಾಡಿಕೊಳ್ಳಬಹುದಾಗಿತ್ತು. ಆದರೆ ಬ್ರಿಟಿಷರ್ ಅಪ್ಪಣೆ ಇಲ್ಲದೆ ಆ ಸ್ಥಳವನ್ನು ಅವರು ಬಿಟ್ಟು ಹೋಗುವಂತಿರಲಿಲ್ಲ. ೨೫ ವರ್ಷಗಳು ತುಂಬಿದ ಮೇಲೆಯೇ ಅವರಿಗೆ ಪೂರ್ಣ ಸ್ವಾತಂತ್ರ ದೊರಕುತ್ತಿತ್ತು. ೧೯೪೧ರಲ್ಲಿ ಈ ವಲಯದಲ್ಲಿ ಸಂಭವಿಸಿದ ದೊಡ್ಡ ಭೂಕಂಪನದಿಂದ ಈ **ಕಾಲಾಪಾನಿ ಜೈಲು** ಅನೇಕ ಕಡೆ ಬಿರುಕು ಬಿಟ್ಟುಕೊಂಡಿತು. ಅನಂತರ ಜಪಾನ್ ಸೈನಿಕರ ದಾಳಿಯಿಂದ (೧೯೪೨-೧೯೪೫) ಈ ಜೈಲು ಕಟ್ಟಡ ಪೂರ್ಣವಾಗಿ ಜಖಂಗೊಂಡಿತ್ತು. ನಕ್ಷತ್ರ ಮೀನಿನ ಆಕಾರದಲ್ಲಿ ಕಟ್ಟಿದ್ದ ೭ ಸಾಲು ಕಟ್ಟಡಗಳಲ್ಲಿ ೪ ಕಟ್ಟಡಗಳನ್ನು ಪೂರ್ಣವಾಗಿ ಕೆಡವಿ ೩ ಕಟ್ಟಡಗಳನ್ನು ಮಾತ್ರ ಉಳಿಸಿಕೊಳ್ಳಲಾಯಿತು. ಇವುಗಳ ಜೊತೆಗೆ ಪ್ರಸ್ತುತ ಮುಂದಿನ ಮುಖ್ಯ ದ್ವಾರ ಇರುವ ಕಟ್ಟಡ ಮಾತ್ರ ಉಳಿದುಕೊಂಡಿದೆ. ಅಂಡಮಾನ್-ನಿಕೋಬಾರ್ ದ್ವೀಪಗಳ ಮೇಲೆ ಆಕ್ರಮಣ ಮಾಡಿದ ಜಪಾನ್ ಸೈನ್ಯ ಎಲ್ಲವನ್ನು ಧ್ವಂಸ ಮಾಡಿ ಸಿಕ್ಕಿದವರನ್ನು ಹಿಡಿದು ಹಿಂಸಿಸುತ್ತ ಸಾವಿರಾರು ಜನರನ್ನು ಸಾಯಿಸಿತ್ತು. ಬ್ರಿಟಿಷರು ಜೋಪಾನವಾಗಿ ಕಾಯ್ದಿಟ್ಟಿದ್ದ ಲೆಕ್ಕಪತ್ರಗಳನ್ನೆಲ್ಲ ಸುಟ್ಟು ಹಾಕಲಾಯಿತು. ೧೯೪೫ರಲ್ಲಿ ಸುಭಾಷ್ ಚಂದ್ರಭೋಸ್ ಜಪಾನ್ ತಲುಪಿ ಅಲ್ಲಿನ ನಾಯಕರನ್ನು ಸಂಧಿಸಿದ ಮೇಲೆ ಜಪಾನ್ ತನ್ನ ದಾಳಿಯನ್ನು ಹಿಂದಕ್ಕೆ ತೆಗೆದುಕೊಂಡು ಈ ಪ್ರದೇಶವನ್ನು ಮುಕ್ತಿಗೊಳಿಸಿತು.

೧೧ ಫೆಬ್ರವರಿ, ೧೯೭೯ರಂದು ಅಂದಿನ ಪ್ರಧಾನಿ ಮಂತ್ರಿ ಶ್ರೀ ಮುರಾರ್ಜಿ ದೇಸಾಯಿ ಅವರ ಕಾಲದಲ್ಲಿ ಈ ಜೈಲನ್ನು ರಾಷ್ಟ್ರೀಯ ಸ್ಮಾರಕವನ್ನಾಗಿ ಪರಿವರ್ತಿಸಲಾಯಿತು. ಮಧ್ಯದ ಜೈಲು ಕಟ್ಟಡದ ಎರಡನೇ ಅಂತಸ್ತಿನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ಚಿತ್ರ ಹಿಂಸೆಗೆ ಗುರಿಯಾಗಿ ಇಲ್ಲಿ ಪ್ರಾಣತ್ಯಾಗ ಮಾಡಿದ ೩೩೬ ಹೋರಾಟಗಾರರ ಹೆಸರುಗಳನ್ನು ಕೆತ್ತಲಾಗಿದೆ. ಜೈಲು

ಕಟ್ಟುವುದಕ್ಕಿಂದ ಮುಂಚೆ ಮೊದಲ ಬಾರಿಗೆ ಭಾರತದಿಂದ ಇಲ್ಲಿಗೆ ಕರೆದು ತಂದ ೨೨೦ ಕೈದಿಗಳು ರಾತ್ರೋರಾತ್ರಿ ಪೋರ್ಟ್‌ಬ್ಲೇರ್ ದ್ವೀಪದಿಂದ ತಪ್ಪಿಸಿಕೊಂಡು ಓಡಿ ಹೋಗಲು ಪ್ರಯತ್ನಿಸಿ ೧೪೦ ಜನರು ಪ್ರಾಣ ಕಳೆದುಕೊಂಡರು ಎನ್ನಲಾಗಿದೆ. ಅವರೆಲ್ಲ ಸಮುದ್ರಕ್ಕೆ ಬಿದ್ದು ಪ್ರಾಣ ಕಳೆದುಕೊಂಡಿರಬೇಕು. ಇಲ್ಲ ಸುತ್ತಮುತ್ತಲಿನ ದ್ವೀಪಗಳಲ್ಲಿದ್ದ ಆದಿಮಾನವರ ವಿಷ ಬಾಣಗಳ ದಾಳಿಯಿಂದ ಸತ್ತಿರಬೇಕು ಎನ್ನಲಾಗಿದೆ. ಬ್ರಿಟಿಷರ ಕೈಗಳಿಗೆ ಸಿಕ್ಕಿದ ಉಳಿದ ೮೦ ಜನರನ್ನು ಒಂದೇ ದಿನ ನೇಣುಗಂಭಕ್ಕೆ ಏರಿಸಿ ಸಾಯಿಸಲಾಯಿತು. ೯೦ ವರ್ಷಗಳ ಸುದೀರ್ಘ ಹಿಂಸೆ ನಡೆಸಿದ ಬ್ರಿಟಿಷರು ಒಟ್ಟು ೨೫೦ಕ್ಕಿಂತ ಹೆಚ್ಚು ಸ್ವಾತಂತ್ರ್ಯ ಹೋರಾಟಗಾರರನ್ನು ಇಲ್ಲಿ ನೇಣಿನ ಕುಣಿಕೆಗೆ ಏರಿಸಿದ್ದಾರೆ. ಈ ಜೈಲು ಕಟ್ಟಡಗಳ ಮಧ್ಯೆ ಕಟ್ಟಿರುವ ಸಣ್ಣ ಸ್ಮಾರಕದಲ್ಲಿ ಅಂದಿನ ನಾಯಕರು ಮತ್ತು ಬ್ರಿಟಿಷ್ ಕಾರ್ಯವೈಖರಿ ಬಿಂಬಿಸುವ ಕಪ್ಪು ಬಿಳುಪಿನ ಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಪ್ರತಿ ಸಾಯಂಕಾಲ ಜೈಲು ಗೋಡೆಗಳ ಮಧ್ಯೆ ಒಂದು ಗಂಟೆ ಹಿಂದಿ ಮತ್ತು ಒಂದು ಗಂಟೆ ಇಂಗ್ಲಿಷ್ ಭಾಷೆಗಳಲ್ಲಿ ಕತ್ತಲು ಬೆಳಕಿನ ನಡುವೆ ಜೈಲುಗೋಡೆಗಳ ಮಧ್ಯೆ ಆ ಕಾಲದಲ್ಲಿ ನಡೆದ ಬರ್ಬರ ಕೃತ್ಯಗಳ ಅಣಕು ಪ್ರದರ್ಶನವನ್ನು ತೋರಿಸಲಾಗುತ್ತದೆ.

ಒಟ್ಟಿನಲ್ಲಿ ೧೮೫೭ರಿಂದ ೧೯೪೭ರವರೆಗೆ ೯೦ ವರ್ಷಗಳಲ್ಲಿ ನೂರಾರು ದೇಶಪ್ರೇಮಿಗಳನ್ನು ಆಹುತಿ ತೆಗೆದುಕೊಂಡ ಈ ಕಾಲಾಪಾನಿಯ ಮಧ್ಯದಲ್ಲಿರುವ ಸೆಲ್ಯೂಲರ್ ಜೈಲಿನ ಇತಿಹಾಸ ಕೇಳಿದರೆ ಇಂದಿಗೂ ಮೈ ಜುಮ್ಮೆನಿಸುತ್ತದೆ. ಪ್ರತಿ ಭಾರತೀಯನೂ ಒಮ್ಮೆ ಈ ಕಾಲಾಪಾನಿಯ ದ್ವೀಪಗಳನ್ನು ನೋಡಬೇಕಾಗಿದೆ. ಭಾರತದ ಭೌಗೋಳಿಕ ವಿಸ್ತೀರ್ಣದ ಬಗ್ಗೆ ಯಾರನ್ನಾದರು ಕೇಳಿದಾಗ, ಕಾಶ್ಮೀರದಿಂದ ಕನ್ಯಾಕುಮಾರಿ ಅಟಕ್‌ನಿಂದ (ಗುಜರಾತ್) ಕಟಕ್ ಎನ್ನುತ್ತಾರೆ. ಇದು ಶುದ್ಧ ಸುಳ್ಳಿನ ಮಾತು. ಪೂರ್ವದಲ್ಲಿ ಅರುಣನು ಚುಂಬಿಸುವ ಅರುಣಾಚಲ ಪ್ರದೇಶವಿದ್ದರೆ, ದಕ್ಷಿಣದ ತುತ್ತ ತುದಿಯಲ್ಲಿ ಇರುವುದು ಶ್ರೀಲಂಕಾ ದ್ವೀಪಕ್ಕಿಂತ ಕೆಳಗಿರುವ ನಿಕೋಬಾರ್‌ನ ಇಂದಿರಾ ಪಾಯಿಂಟ್. ಇಲ್ಲಿಂದ ಕೇವಲ ೧೪೦ ಕಿ.ಮೀ. ದೂರದ ದಾರಿಯನ್ನು ಸಮುದ್ರದ ಮೇಲೆ ಪಯಣಿಸಿದರೆ ಮಲೇಷಿಯಾ ದೇಶ ದೊರಕುತ್ತದೆ.

ಜಪಾನ್ ಸೈನಿಕರು ಅಂಡಮಾನ್ ದ್ವೀಪಗಳ ಮೇಲೆ ಹೇಯ ಕೃತ್ಯವನ್ನು ಮಾಡಿದರು. ವಿದ್ಯಾರ್ಥಿಗಳನ್ನು ಜೈಲಿನಲ್ಲಿ ಕೂಡಿಹಾಕಿ ಗುಂಪುಗಳಲ್ಲಿ ಅವರ ಮೇಲೆ ಗುಂಡಿಕ್ಕಿ ಸಾಯಿಸಿದರು. ಬಹಳಷ್ಟು ವಿದ್ಯಾರ್ಥಿ ಮತ್ತು ಸಾರ್ವಜನಿಕರನ್ನು ದೊಡ್ಡ ದೊಡ್ಡ ಹಳ್ಳಗಳನ್ನು ತೋಡಿ ಗುಂಪಾಗಿ ಹೂಳಲಾಯಿತು. ಪೋರ್ಟ್‌ಬ್ಲೇರ್‌ಗೆ ೧೫ ಕಿ.ಮೀ. ದೂರದಲ್ಲಿರುವ 'ಹೋಪ್ರಿಯೆಗುಂಗ್ ಸ್ಮಾರಕ' ಅದಕ್ಕೆ ಸಾಕ್ಷಿಯಾಗಿ ನಿಂತಿದೆ. ಅದೇ ರೀತಿಯ ಸ್ಮಾರಕ ಡಾ. ದಿವಾನ್ ಸಿಂಗ್ ಗುರುದ್ವಾರ ಕೂಡ. ಡಿಸೆಂಬರ್ ೨೯, ೧೯೪೩ರಿಂದ ಮೂರು ದಿನಗಳು ಕಾಲ ಸೆಲ್ಯೂಲರ್ ಜೈಲನ್ನು ವೀಕ್ಷಿಸಿದ ನೇತಾಜಿ ಯಾವುದೇ ಆಧಾರ ಇಲ್ಲದೆ ಯಾರಿಗೂ ಶಿಕ್ಷೆ ನೀಡಬಾರದೆಂದು ತಾಕೀತು ಮಾಡಿದರು.

ನೇತಾಜಿಯ ಬೇಟೆಯ ನಂತರ ಯಾವ ಖೈದಿಯನ್ನೂ ಗಲ್ಲಿಗೆ ಏರಿಸಲಿಲ್ಲ ಎಂದು ತಿಳಿದು ಬರುತ್ತದೆ.

**ಉಪವಾಸ ಸತ್ಯಾಗ್ರಹ :**

ಬ್ರಿಟಿಷರ ಶಿಕ್ಷೆಗಳಿಗೆ ರೋಸಿಹೋದ ಖೈದಿಗಳು ಕೊನೆಗೂ ಮೇ ೧೨, ೧೯೩೩ರಂದು ಆಹಾರ ತ್ಯಜಿಸಿ ಸತ್ಯಾಗ್ರಹ ಮಾಡತೊಡಗಿದರು. ಬ್ರಿಟಿಷ್ ಚೀಫ್ ಕಮಿಷನರ್ ಆಂದೋಲನಕಾರರ ವಿರುದ್ಧ **'ನಾನು ಅವರ ಬೇಡಿಕೆಗಳಿಗಾಗಿ ಒಂದೇ ಒಂದು ಇಂಚೂ ಬಗ್ಗುವುದಿಲ್ಲ. ಬೇಕಾದರೆ ಅವರ ಹೆಣಗಳು ಸಮುದ್ರದ ಮೇಲೆಲ್ಲಾ ತೇಲಾಡಲಿ'** ಎಂದು ಹೇಳಿಕೆ ನೀಡಿದ. ಸತ್ಯಾಗ್ರಹ ४೬ ದಿನಗಳು ನಡೆದು ಈ ನಡುವೆ ೩ ಜನರ ಪ್ರಾಣಪಕ್ಷಿ ಹಾರಿಹೋಗಿತ್ತು. ಬ್ರಿಟಿಷರ ಒತ್ತಾಯದಿಂದ ಅವರಿಗೆ ಆಹಾರ ಕೊಡಲು ಹೋಗಿ ಅವರು ಸತ್ತುಹೋಗಿದ್ದರು. ಯಾರಿಗೂ ತಿಳಿಯದಂತೆ ಅವರ ದೇಹಗಳನ್ನು ಸಮುದ್ರಕ್ಕೆ ಎಸೆದಿದ್ದರು. ಈ ವಿಷಯ ಇಡೀ ದೇಶಕ್ಕೆ ತಲುಪಿ, ದೇಶದಲ್ಲೆಲ್ಲಾ ವಿರೋಧಗಳು ಕಾಣಿಸಿಕೊಂಡವು. ದೇಶದ ಮೂಲೆಮೂಲೆಯಿಂದಲೂ ಟೆಲಿಗ್ರಾಂಗಳ ಮೂಲಕ ಜನರು ಬ್ರಿಟಿಷರನ್ನು ನಿಂದಿಸಿದರು. **ರವೀಂದ್ರನಾಥ್ ಟಾಗೂರ್** ಅವರು **'ನಿಮ್ಮ ತಾಯಿ ನಾಡು ಹೂ ಬಿರಿಯುವುದನ್ನು ಮರೆಯಲಾರಳು'** ಎಂದು ಟೆಲಿಗ್ರಾಂ ಕಳುಹಿಸಿದ್ದರು. ಕೊನೆಗೂ ಬ್ರಿಟಿಷ್ ಆಡಳಿತ, ಖೈದಿಗಳ ಬೇಡಿಕೆಗಳ ಬಗ್ಗೆ ಯೋಚಿಸಲೇಬೇಕಾಗಿ ಬಂದಿತು. ೧೯೩೩ ಜೂನ್ ೨೬ ರಂದು ಸತ್ಯಾಗ್ರಹವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ಆಂದೋಲನಕಾರರು ಬರೆಯಲು ಅವಕಾಶ ಮಾಡಿಕೊಡುವುದರ ಜೊತೆಗೆ ಓದಲು ದಿನಪತ್ರಿಕೆ, ಪುಸ್ತಕಗಳನ್ನು ನೀಡಲಾಯಿತು. ರಾತ್ರಿ ಹೊತ್ತು ಕೋಣೆಗಳಲ್ಲಿ ದೀಪಗಳನ್ನು ಹಚ್ಚಲಾಯಿತು. ಒಳಾವರಣದಲ್ಲಿ ಕೇರಮ್, ಚೆಸ್, ಚೆಂಡಾಟ, ಸಂಗೀತ ಇತ್ಯಾದಿಗಳಿಗೆ ಅವಕಾಶ ನೀಡಲಾಯಿತು. ಚರಿತ್ರೆ, ಆರ್ಥಿಕತೆ ಇತ್ಯಾದಿಯ ಬಗ್ಗೆ ಪಾಠಗಳನ್ನು ಪ್ರಾರಂಭ ಮಾಡಲಾಯಿತು. ಕೈಬರಹದ ಪತ್ರಿಕೆಯನ್ನು ಪ್ರಾರಂಭಿಸಲಾಯಿತು. ಹಿಂದಿ, ಬಂಗಾಳಿ ಮತ್ತು ಇಂಗ್ಲಿಷ್ ಪತ್ರಿಕೆಗಳು ಬರತೊಡಗಿದವು.

ಎರಡನೇ ವಿಶ್ವ ಮಹಾಯುದ್ಧ ನಡೆಯುತ್ತಿದ್ದ ಕಾಲದಲ್ಲಿ **ಗ್ರೇಟರ್ ಈಸ್ಟ್ ಏಷ್ಯಾಟಿಕ್ ನೇಷನ್ಸ್ ಅಸೆಂಬ್ಲಿ** ೫, ನವೆಂಬರ್ ೧೯४೩ರಂದು ಟೋಕಿಯೊದಲ್ಲಿ ಪ್ರಾರಂಭವಾಯಿತು. ಈ ಸಭೆಗೆ ಅಜಾದ್ ಹಿಂದ್ ಸರಕಾರದ ಮುಖ್ಯಸ್ಥ **ಸುಭಾಷ್ ಚಂದ್ರ ಬೋಸ್**‌ರನ್ನು ಜಪಾನ್‌ನ ಮುಖ್ಯಮಂತ್ರಿಗಳಾದ ಜನರಲ್ ಟೊಜೊ ಆಹ್ವಾನಿಸಿದ್ದರು. ಆದರೆ ನೇತಾಜಿ ಅವರು ಅಂಡಮಾನ್-ನಿಕೋಬಾರ್ ದ್ವೀಪಗಳನ್ನು ಅಜಾದ್ ಹಿಂದ್ ಸೈನ್ಯದ ವಶಕ್ಕೆ ನೀಡದಿದ್ದರೆ ನಾನು ಟೋಕಿಯೊ ಸಭೆಯಲ್ಲಿ ಪಾಲ್ಗೊಳ್ಳುವುದಿಲ್ಲ ಎಂದರು. ೭ ನವೆಂಬರ್ ೧೯४೩ರಂದು ಟೊಜೊ ಅಂಡಮಾನ್-ನಿಕೋಬಾರ್ ದ್ವೀಪಗಳಿಂದ ನಮ್ಮ ಸೈನ್ಯ ಹೊರಬರುವುದೆಂದು ಹೇಳಿಕೆ ನೀಡಿದ ಮೇಲೆ ನೇತಾಜಿ ಆ ಸಭೆಯಲ್ಲಿ ಪಾಲ್ಗೊಂಡರು. ಭಾರತ ದೇಶ ಬ್ರಿಟಿಷರ ವಶದಲ್ಲಿದ್ದಾಗಲೇ ಈ

ದ್ವೀಪಗಳು ಸ್ವಾತಂತ್ರ್ಯ ಪಡೆದುಕೊಂಡಿದ್ದವು. ಡಿಸೆಂಬರ್ ೨೯, ೧೯೪೩ ರಂದು ನೇತಾಜಿ ಪೋರ್ಟ್‌ಬ್ಲೇರ್‌ಗೆ ಆಗಮಿಸಿದರು. ವಿಮಾನ ನಿಲ್ದಾಣದಲ್ಲಿ ಜಪಾನ್ ಕಮಾಂಡರ್ ಮತ್ತು ಇಂಡಿಯನ್ ಇಂಡಿಪೆಂಡನ್ಸ್ ಲೀಗ್ ಸದಸ್ಯರು ಅವರನ್ನು ಬರಮಾಡಿಕೊಂಡರು. ಮರುದಿನ ೩೦ರಂದು ನೇತಾಜಿ ಸೆಲ್ಯೂಲರ್ ಜೈಲಿನ ಒಳಗೆ ಮತ್ತು ಹೊರಗೆಲ್ಲ ನೋಡಿದರು. ಅವರ ಸುತ್ತಲೂ ರಕ್ಷಣಾ ಸೈನ್ಯವಿದ್ದು ಭಾರತೀಯರನ್ನು ಅವರ ಹತ್ತಿರಕ್ಕೆ ಬಿಡಲಿಲ್ಲ. ಆದರೂ ಜೈಲು ಅಧಿಕಾರಿಗಳ ಜೊತೆಗೆ ಮಾತನಾಡಿ ನೇತಾಜಿ ಅವರು ಎಲ್ಲವನ್ನೂ ಅರ್ಥ ಮಾಡಿಕೊಂಡರು. ಜಪಾನ್ ಎಲ್ಲಾ ರೀತಿಯ ಶಿಕ್ಷೆಗಳನ್ನು ತ್ಯಜಿಸಿ ಎಲ್ಲರನ್ನು ಸ್ವತಂತ್ರವಾಗಿ ಬಿಟ್ಟಿಬಿಡುವುದಾಗಿ ಮಾತು ಕೊಟ್ಟಿತು. ಅದೇ ದಿನ ಜಮ್‌ಖಾನಾ ಮೈದಾನದ ಅಂಡಮಾನ್ ಕ್ಲಬ್ ಮೇಲೆ **ತ್ರಿರಂಗ ಬಾವುಟವ**ನ್ನು ಹಾರಿಸಿದರು. ಬ್ರಿಟಿಷರ ಆಡಳಿತದಲ್ಲಿ ಇದೇ ಮೊದಲು ಹಾರಿಸಿದ ಬಾವುಟ. ೯೦ ನಿಮಿಷಗಳ ಕಾಲ ಸಾರ್ವಜನಿಕರ ಎದುರಿಗೆ ಭಾಷಣ ಮಾಡಿದ ನೇತಾಜಿ ಕೊನೆಗೆ 'ದೆಹಲಿ ಚಲೋ ಜೈಹಿಂದ್' ಎಂದು ಭಾಷಣ ಮುಗಿಸಿದರು. ಇಡೀ ಜನ ಸಮೂಹ ಮಂತ್ರಮುಗ್ಧವಾಗಿ ಭಾಷಣ ಕೇಳಿ ಆತ್ಮಾವಲೋಕನ ಮಾಡಿಕೊಂಡಂತೆ ತೋರುತ್ತಿತ್ತು. ಕೊನೆಗೆ ರಾಷ್ಟ್ರಗೀತೆ ಹಾಡಲಾಯಿತು. ಅಂಡಮಾನ್‌ನಲ್ಲಿ ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗ ಮಾಡಿದವರಿಗೆ 'ಶಹೀದ್' ಅಥವಾ 'ಸ್ವರಾಜ್' ಎಂದು ಕರೆಯಲಾಯಿತು.

ಅನಂತರ ಹತ್ತಿರದ 'ರಾಸ್ ದ್ವೀಪ'ದಲ್ಲಿ ಬ್ರಿಟಿಷ್ ಚೀಫ್ ಕಮಿಷನರ್ ಬಂಗಲೆಯ ಮೇಲೆ ನೇತಾಜಿ ಅವರು ರಾಷ್ಟ್ರೀಯ ಬಾವುಟವನ್ನು ಹಾರಿಸಿದರು. ಅಲ್ಲಿ ಮಾತನಾಡುತ್ತ 'ನಮ್ಮ ತ್ರಿರಂಗಾ ಬಾವುಟ ಬ್ರಿಟಿಷ್ ಚೀಫ್ ಕಮಿಷನರ್ ಬಂಗಲೆಯ ಮೇಲೆ ಹಾರಾಡುತ್ತಿರುವುದು ಮರೆಯಲಾಗದ ಸಂಗತಿ. ಒಂದು ದಿನ ಇದೇ ಬಾವುಟ ದೆಲ್ಲಿಯ ವೈಸ್‌ರಾಯ್ ಬಂಗಲೆಯ ಮೇಲೆ ಕೂಡ ಹಾರಾಡುತ್ತದೆ' ಎಂದರು. ಮುಂದುವರಿದು 'ಅಂಡಮಾನ್ ದ್ವೀಪಗಳು ಸ್ವಾತಂತ್ರ್ಯ ಪಡೆದಿದ್ದು ದೇಶ ಸ್ವಾತಂತ್ರ್ಯ ಪಡೆಯುವುದರ ಸಂಕೇತ. ಬ್ರಿಟಿಷ್‌ರು ಅಂಡಮಾನ್ ದ್ವೀಪಗಳನ್ನು ಸ್ವಾತಂತ್ರ್ಯ ಹೋರಾಟಗಾರರ ಜೈಲಾಗಿ ಉಪಯೋಗಿಸಿಕೊಂಡಿದ್ದಾರೆ. ಫ್ರೆಂಚ್ ಬಂಡಾಯವಾದಾಗಲೂ ಫ್ರೆಂಚ್ ದೇಶ ಮೊದಲಿಗೆ ಪ್ಯಾರಿಸ್‌ನ ಬಾಸ್ಟೈಲನ್ನು ಸ್ವಾತಂತ್ರ್ಯಗೊಳಿಸಿಕೊಂಡಿತ್ತು. ಅಂಡಮಾನ್ ಜನರು ತಮ್ಮ ನಿಜವಾದ ದೇಶಭಕ್ತರು, ಹೆಚ್ಚು ನೋವು ಅನುಭವಿಸಿದವರು. ಅಂಡಮಾನ್ ಮೊದಲಿಗೆ ಸ್ವಾತಂತ್ರ್ಯ ಪಡೆಯಬೇಕಾಗಿತ್ತು, ಪಡೆದಿದೆ. ಈ ದ್ವೀಪಗಳು ಭಾರತದ ಒಂದು ಅವಿಭಾಜ್ಯ ಅಂಗ. ಹಾಗೂ ಬಹಳ ಮುಖ್ಯವಾದುದು'. ಎಂದು ಹೇಳಿದರು.

ಬ್ರಿಟಿಷರು ಮೊದಲಿಗೆ ಈ ಭಾಗವನ್ನು ತಮ್ಮ ವಶದಲ್ಲೇ ಇಟ್ಟುಕೊಳ್ಳಲು ಆಲೋಚಿಸಿದ್ದರು. ಮಾರ್ಚ್ ೩ ೧೯೪೭ರಂದು ಇಂಡಿಯಾದ ಇನ್ ಜಾರ್ಜ್ ಪಾಟ್ರೈಸ್ ಲಾವರೆನ್ಸ್, ಲಾರ್ಡ್ ವೈಸ್‌ರಾಯ್ ಅವರಿಗೆ ಪತ್ರ ಬರೆದು ಇದು ರಕ್ಷಣೆಗೆ ಸಂಬಂಧ ಪಟ್ಟಂತೆ ಬಹಳ

ಮುಖ್ಯವಾದುದ್ದು. ಈ ದ್ವೀಪಗಳು ತಮ್ಮ ವಶದಲ್ಲೇ ಇರುವುದು ಒಳಿತೆಂದು ಬರೆದಿದ್ದರು. ಬ್ರಿಟೀಷ್ ಚೀಫ್ ಆಫ್ ರಾಯಲ್ ಬೇಸನ್ನು ಇಲ್ಲಿ ಸ್ಥಾಪಿಸಬೇಕೆಂದು ಅವರು ಯೋಚಿಸಿದ್ದರು. ಮೇ ೨೮, ೧೯೪೭ ರಂದು ಇಂಡಿಯಾ-ಬರ್ಮಾ ಕ್ಯಾಬಿನೆಟ್ ಸಮಿತಿಯ ಸಭೆಯಲ್ಲಿ ಮೌಂಟ್ ಬ್ಯಾಟನ್, ನೆಹರು ಮತ್ತು ಸರದಾರ್ ಪಟೇಲ್ ಅವರು ಈ ದ್ವೀಪಗಳ ಬಗ್ಗೆ ತುಂಬಾ ಆತಂಕ ಹೊಂದಿದ್ದಾರೆ ಎಂದು ತಿಳಿಸಿ ಅನಂತರ ಈ ದ್ವೀಪಗಳನ್ನು ಭಾರತಕ್ಕೆ ನೀಡದೆ ಹೋದರೆ ಭಾರತ ಬ್ರಿಟನ್ ಸಂಬಂಧ ಹದಗೆಡುವುದರಲ್ಲಿ ಸಂದೇಹವಿಲ್ಲ ಎಂದು ಪ್ರಾಂಕ್ ಟರ್ನ್ ಅವರಿಗೆ ಪತ್ರ ಬರೆದರು.

ಅದೇ ಸಮಯದಲ್ಲಿ ಜಿನ್ನಾ, ಪಾಕಿಸ್ತಾನ ಇಂಡಿಯಾ ವಿಭಜನೆಯಲ್ಲಿ ಈ ದ್ವೀಪಗಳನ್ನು ಪರಿಶೀಲಿಸಬೇಕಿದೆ ಎಂದು ಹೇಳಿಕೆ ನೀಡಿ ಎಲ್ಲರನ್ನು ಗೊಂದಲಗೊಳಿಸಿದ್ದರು. ನೆಹರು, ೧೯೪೧ರ ಜನಗಣತಿಯ ಪ್ರಕಾರ ೩೪,೦೦೦ ಜನರಲ್ಲಿ ೮,೦೦೦ ಮುಸ್ಲಿಮರಿದ್ದು, ಈ ಭಾಗ ಹಿಂದೂಗಳಿಗೆ ಸೇರಬೇಕಿದೆ ಎಂದರು. ರಕ್ಷಣೆಯ ವಿಷಯ ಬಂದಾಗ ದೂರದಲ್ಲಿರುವ ಪಾಕಿಸ್ತಾನಕ್ಕಿಂತ ಈ ಭಾಗ ಭಾರತಕ್ಕೆ ಮುಖ್ಯ ಎಂದರು. ಮೌಂಟ್ ಬ್ಯಾಟನ್ ಅವರು ಬ್ರಿಟಿಷ್ ಪ್ರಧಾನ ಮಂತ್ರಿಗಳಿಗೆ ಮನದಟ್ಟು ಮಾಡಲು ಸಫಲರಾಗಿದ್ದರು. ಕೊನೆಗೂ ಭಾರತಕ್ಕೆ ಈ ದ್ವೀಪಗಳನ್ನು ಸೇರಿಸಲಾಯಿತು. ಇದಾದ ಮೇಲೆ ಜೈಲಿನಲ್ಲಿದ್ದ ಎಲ್ಲರನ್ನೂ ಮುಕ್ತಿಗೊಳಿಸಲಾಯಿತು. ಕೊನೆಗೆ ಲಾರ್ಡ್ ಮೌಂಟ್‌ಬ್ಯಾಟನ್ ಅವರ ಭಾರತದೊಂದಿಗಿನ ಅಕ್ಕರೆಯಿಂದ ಈ ದ್ವೀಪಗಳು ಭಾರತಕ್ಕೆ ದೊರಕಿದವು.

೧೯೧೦ರಿಂದ ಜೈಲಿನಲ್ಲಿದ್ದ **ವೀರ ಸಾರ್ವರ್‌ಕರ್** ೧೯೪೭ರಲ್ಲಿ ಬಿಡುಗಡೆ ಹೊಂದಿ ಸ್ವತಂತ್ರ ಭಾರತವನ್ನು ಕಂಡಿದ್ದರು. ಅವರು ಜೈಲಿನಲ್ಲಿದ್ದಾಗ ಒಮ್ಮೆ 'ನಾವು ಪ್ರಸ್ತುತ ಜೈಲಿನಲ್ಲಿ ಅಸಹಾಯಕ ಖೈದಿಗಳಾಗಿದ್ದೇವೆ. ಒಂದು ದಿನ ಸ್ವಾತಂತ್ರ್ಯ ಯೋಧರ ನೆನಪಿನಲ್ಲಿ ನಮ್ಮ ಪುತ್ಥಳಿಗಳು ಇಲ್ಲೆಲ್ಲಾ ಏಳುತ್ತವೆ. ಮುಂದಿನ ಪೀಳಿಗೆ ಈ ಸ್ಮಾರಕಗಳನ್ನು ದರ್ಶಿಸಿ ನಮ್ಮ ಬಗ್ಗೆ ಹೇಳಿಕೊಳ್ಳುತ್ತದೆ. ನಮ್ಮ ದೇಶ ಪ್ರೇಮಿಗಳು ವರ್ಷಗಟ್ಟಲೆ ಇಲ್ಲಿದ್ದರು, ನಮ್ಮ ದೇಹದ ದೇಹ, ಆತ್ಮದ ಆತ್ಮಗಳು' ಎಂದು ಹೇಳಿದ್ದರು. ಪ್ರಸ್ತುತ ನೀವು ಈ ಸೆಲ್ಯೂಲರ್ ಜೈಲನ್ನು ನೋಡಿ ಆಂದೋಲನಕಾರರ ಕತೆಯನ್ನು ಕೇಳಿದಾಗ ಅವರು ಹೇಳಿದ ಮಾತುಗಳು ನಿಜ ಎನಿಸುತ್ತದೆ. ದೇಶದ ನಾನಾ ಭಾಗಗಳಿಂದ ಆಂದೋಲನಕಾರರನ್ನು ಬ್ರಿಟಿಷರು ಹಿಡಿದು ತಂದು ಇಲ್ಲಿ ಜೈಲಿಗೆ ಹಾಕಿದ್ದರು. ಅವರಲ್ಲಿ ಮುಖ್ಯವಾಗಿ ವಹಾಬಿ ಆಂದೋಲನ/ಗದಾರ್ ಆಂದೋಲನ (೧೮೩೦-೧೮೬೯), ಮೊದಲ ರಾಂಪಾ ಆಂದೋಲನ (೧೮೭೮-೯೦), ಎರಡನೇ ರಾಂಪಾ ಆಂದೋಲನ (೧೯೨೨-೨೪), ಧಾರಾವಾಡಿ (ಬರ್ಮಾ) ಕೃಷಿಕರ ಆಂದೋಲನ (೧೯೩೦) ಮತ್ತು ಮೊಪ್ಲಾ ಆಂದೋಲನ, ಮಲಬಾರ್ ಆಂದೋಲನ (೧೭೯೨-೧೯೪೭). ಈ ಆಂದೋಲನಕಾರರ

ಗುಂಪುಗಳನ್ನು ಇಲ್ಲಿಗೆ ರವಾನಿಸಲಾಯಿತು. ಈ ಗುಂಪುಗಳಲ್ಲಿದ್ದ ಅತಿ ಮುಖ್ಯ ನಾಯಕರೆಂದರೆ ಸರ್ವಶ್ರೀ, ಲಹಿರ, ಆಶುತೋಷ್, ರಾ.ನೋನಿ ಗೋಪಾಲ ಮುಖರ್ಜಿ, ಪಂಡಿತ್ ಪರಮಾನಂದ, ಉಲ್ಲಾಸ್ಕರ್ ದತ್ತ, ಬಿರೇಂದ್ರ ಕುಮಾರ್ ಘೋಷ್, ಜೋಷಿ, ದಾಜಿ ವಾಮನ್ ನಾರಾಯಣ, ಪ್ರೊ. ಭಾಯಿ ಪರಮಾನಂದ ಪೃಥ್ವಿ ಸಿಂಗ್ ಅಜಾದ್, ರಾಮಾ ರಾಖಾ, ಓಂದು ಭೂಷಣ್ ರಾಯ್, ಗಣೇಶ್ ದಾಮೋದರ್ ಸಾವರ್ಕರ್, ಸಾವರ್ಕರ್, ವೀರ್ ವಿನಾಯಕ್ ದಾಮೋದರ್, ಮಹಾವೀರ್ ಸಿಂಗ್, ಶಹಾಪುರ್ ಈಟಾವ್, ಮೊಹಿತ್ ಮೊಯಿತ್ರ, ಪಬ್ನ ಬೆಂಗಾಳ್, ಮೋತಿಲಾಲ್ ವರ್ಮ, ಬಟುಕೇಶ್ವರ್ ದತ್ತ, ಜೆಯದೇವ್ ಕಪೂರ್, ದೂದ್ ನಾಥ್ ತಿವಾರಿ, ಶೇರ್ ಅಲಿ, ಭಾನ್ ಸಿಂಗ್, ಬಾಬಾ ಸೊಹನ್ ಸಿಂಗ್, ಮೋಹ್ ಕಿಶೋರ್ ರಾಮದಾಸ್, ಇಲ್ಲಿ ಪ್ರಾಣ ತ್ಯಾಗ ಮಾಡಿದವರ ಪಟ್ಟಿ ಭಾರಿ ದೊಡ್ಡದಿದೆ. ಬಾಕಿಷ್ಣಯ್ಯ ಹೆಸರಿನ ಮೈಸೂರಿನ ಒಬ್ಬರ ಹೆಸರು ಮಾತ್ರ ದಾಖಲಾಗಿದೆ.

**ಆ) ಸಾಂಸ್ಕೃತಿಕ ನೆಲೆ:**

ಆ ಜನರ ಒಟ್ಟು ಸಂಸ್ಕೃತಿಯ ಬಗ್ಗೆ ಕೂಡ ಲೇಖಕ ಮಾತನಾಡುತ್ತಿರುತ್ತಾನೆ. ಸಂಸ್ಕೃತಿಯೇನು ಎಂಬುದನ್ನು ಕಾಣಲು, ವಿವರಿಸು ಪ್ರಯತ್ನಿಸುತ್ತಾನೆ. ಗದ್ಯರೂಪ, ನಿರೂಪಣ ಶೈಲಿ, ಆತ್ಮಕಥನ ವೃತ್ತಾಂತ, ತಾನಿದ್ದ ಸ್ಥಳವನ್ನು ಬಿಟ್ಟು ಬೇರೆಡೆ ಹೋಗಿ ತಾನಿದ್ದ ಸ್ಥಳಕ್ಕೇ ಬರುವವರೆಗಿನ ಅನುಭವಕಥನ ಈ ನಾಲ್ಕು ಪ್ರವಾಸ ಕಥನದ ಮೇಲ್ಮೈ ಲಕ್ಷಣಗಳು; ಪ್ರೇಕ್ಷಣೀಯ ಸ್ಥಳಗಳ ಬಣ್ಣನೆ, ಜನತೆಯ ಜೀವನ ವಿಧಾನದ ಸ್ಪಷ್ಟೀಕರಣ,ಭೇಟಿಯಿತ್ತ ದೇಶದ ಜನರ ಸಾಧನೆ–ಪ್ರಗತಿ, ಆ ದೇಶಕ್ಕೆ ವಿಶಿಷ್ಟವಾದ ಸಂಸ್ಕೃತಿಯ ತೋರುದರ್ಶನ–ಈ ನಾಲ್ಕು ಪ್ರವಾಸ ಕಥನದ ಒಳಮೈ ಲಕ್ಷಣಗಳು.

ಸಂಸ್ಕೃತಿ ಎನ್ನುವುದು ಪ್ರವಾಸಿ ಕಥನಗಳಲ್ಲಿ ಬಹುಮುಖ್ಯವಾದ ಸ್ಥಾನವನ್ನು ಪಡೆದುಕೊಂಡಿದ್ದು, ಇಂತಹ ಸಂಸ್ಕೃತಿಯು ಅಂಡಮಾನಿನ ಅಧ್ಯಯನದಲ್ಲಿ ಬಹುಮುಖಿಯಾದ ಅಧ್ಯಯನ ವಸ್ತುವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಅನಾವರಣಗೊಳ್ಳುವ ಸಾಂಸ್ಕೃತಿಕ ನೆಲೆಯ ವಿಧಾನ ಕೂಡ ಅತಿಮುಖ್ಯ. ನಿಸರ್ಗಕನ್ಯೆ ಅಂಡಮಾನ್ ಕೃತಿಯಲ್ಲಿ ಕೆ.ಟಿ.ಗಟ್ಟಿಯವರು ಸೌಂದರ್ಯನುಭೂತಿಯ ನೆಲೆಯಲ್ಲಿಯೇ ಅಂಡಮಾನನ್ನು ಕಾಣುತ್ತಾ ಅನುಭವ ಕೇಂದ್ರಿತ ನೆಲೆಗಳನ್ನು ಮೀರುವ ಅಂಶಗಳು ಈ ಪ್ರವಾಸಿ ಕಥನದಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದು ಮೂಲಭೂತವಾದ ಚರ್ಚೆಯ ವಿಷಯವಾಗುವಷ್ಟು ಸಾಕಷ್ಟು ಮಹತ್ವವನ್ನು ಪಡೆದಿದೆ. ಈ ಕೃತಿಯ ಲೇಖಕರು ಸೌಂದರ್ಯನುಭೂತಿಯ ನೆಲೆಯಲ್ಲಿಯೇ ಇದನ್ನು " ನಿಸರ್ಗ ಕನ್ಯೆ ಅಂಡಮಾನ್" ಎಂದು ಕರೆದಿರಬಹುದು ಎಂಬ ಅಂಶಗಳ ಕಡೆಗೂ ಕೂಡ ಚರ್ಚೆಯನ್ನು ಹರಿಯ ಬಿಡಬಹುದು. ಇಲ್ಲಿ ಗಟ್ಟಿಯವರು ಅಂಡಮಾನಿನ ಇತಿಹಾಸವನ್ನು ಅಲ್ಲಿ ವಾಸವಾಗಿರುವ

ಮೂಲ ಅಂಡಮಾನಿಗಳ ಮುಖಾಂತರ ಓದುಗರಿಗೆ ಅರ್ಥೈಸುವ ಕ್ರಮವು ಎಷ್ಟರ ಮಟ್ಟಿಗೆ ಅಂಡಮಾನಿನ ಇತಿಹಾಸವನ್ನು ಕಟ್ಟಿಕೊಡುತ್ತದೆ ಎಂಬುದೂ ಕೂಡ ಈ ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

**ಇ) ಪ್ರಾಕೃತಿಕ ನೆಲೆ:**

ಭಾರತೀಯರ ಪವಿತ್ರ ಗ್ರಂಥದ ರಾಮಾಯಣದಲ್ಲಿ ರಾವಣನನ್ನು ಸದೆ ಬಡಿಯಲು ಲಂಕೆಗೆ ಹೋಗಲು ಸೇತುವೆಯನ್ನು ನಿರ್ಮಿಸುವಲ್ಲಿ ಪ್ರಮುಖವಾದ ಪಾತ್ರವಹಿಸಿದ ಕಪಿ ಸೈನ್ಯವು ಸೇತುವೆ ನಿರ್ಮಿಸುವ ಸಂದರ್ಭದಲ್ಲಿ ಅಂಡಮಾನ್ ದ್ವೀಪವು ಉಗಮವಾಗಿರಬೇಕು. ಜೊತೆಗೆ ಹನುಮಂತನೊಂದಿಗೆ ತಳುಕು ಹಾಕಿಕೊಂಡಿದೆ. ವಿಶ್ವಪರ್ಯಟನೆಗೆ ಹೊರಟ ಪ್ರವಾಸಿಗ ನಿಕೋಲೋ ಕೊಂತಿಯು ೧೫ನೇ ಶತಮಾನದಲ್ಲಿ ಈ ಪ್ರದೇಶಕ್ಕೆ ಭೇಟಿನೀಡಿದ್ದನು. ಹಾಗೂ ಈತನು ಈ ಪ್ರದೇಶವು ಸ್ವರ್ಣ ದ್ವೀಪಗಳೋಪಾದಿಯಲ್ಲಿ ಕಾಣುತ್ತಿವೆ.

ಇದಕ್ಕೆ ಸಂಬಂಧಿಸಿದ ಕಟ್ಟು ಕತೆಗಳು ಏನೇ ಇರಲಿ, ಇದೊಂದು ನಿಸರ್ಗ ರಮ್ಯತಾಣ. ಅಂಡಮಾನವೊಂದು ನಿಜವಾಗಿಯೂ 'ದ್ವೀಪ ಸುಂದರಿ' ಅಲೆನಿರಿಗಳ ಸೀರೆಯುಟ್ಟು, ಹಸುವ, ಕುಸರಿ ಮುಸುಕ ಹೊದ್ದು! ಚಿಕ್ಕ ಮಲ್ಲೆ ದಂಡೆ ಮುಡಿದು! ತುಟಿಗೆ ಅರುಣ ರಾಗ ಬಳಿದು! ಹಣೆಗೆ ಚಂದ್ರ ಬೊಟ್ಟನಿಟ್ಟು! ತೆಂಗು ಚವರಿ ಸೇವೆಯಲ್ಲಿ! ಮರದ ಪಚ್ಚೆ ನೆರಳಲ್ಲಿ! ಗಿರಿ ಗಿರಿಗಳಲ್ಲಿ ಅಲೆದು! ಬನ ಬನಗಳಲ್ಲಿ ಬೀಗಿ ನಡೆದ! ಬೆಡಗಿ ಹುಡುಗಿ ಇವಳು- ಎಂಬುದರಲ್ಲಿ ಸಂಶಯವೇ ಇಲ್ಲ. ಆ ಕ್ಷಣವೇ ಎಲ್ಲ ಮರೆತು, ಎಲ್ಲವನ್ನೂ ಬಿಸುಟು ಬೀಸಿ ಕರೆಯುತ್ತಿರುವ ದಂಡೆ ಮರಳಿನ ಮೇಲೆ ಉನ್ಮತ್ತಳಂತೆ ಮೈ ಮರೆತು ಹೊರಾಳಬೇಕೆನಿಸಿತು.

ಅಂಡಮಾನದ ದ್ವೀಪ ಸಮೂಹಗಳ ವಿಸ್ತೀರ್ಣ ೬೩೪೦ ಚದರ ಕೀ.ಮೀ. ೭೧೩೩ಚ.ಕೀ.ಮೀ. ಸರಾಸರಿ ವಾರ್ಷಿಕ ಮಳೆ ೩೧೮ ಕ್ಯೂ. ಮೀ. ಉಷ್ಣಾಂಶ, ಗರಿಷ್ಟ-೩೦೦ ಸೆಲ್ಸಿಇಯಸ್ ಆದರೆ ಕನಿಷ್ಟ ೨೩೦ ಸೆಲ್ಸಿಯಸ್. ೧೯೮೧ರ ಜನಗಣತಿಯ ಪ್ರಕಾರ ೧,೮೮,೭೪೧ ಇಲ್ಲಿನ ಜನಸಂಖ್ಯೆ, ಇಲ್ಲಿನ ಅತ್ಯಂತ ಎತ್ತರವಾದ ಶಿಖರವೆಂದರೆ 'ಸ್ಯಾಡಲ್ ಪೀಕ್' ಇದು ಉತ್ತರ ಅಂಡಮಾನದಲ್ಲಿದೆ. ಇಲ್ಲಿನ ಮುಖ್ಯವಾದ ಬೆಳೆ ತೆಂಗು, ಕೌಂಗು, ಅಡಿಕೆ ಮತ್ತು ಸಂಬಾರ ಪದಾರ್ಥಗಳು. ಮುಖ್ಯ ಕೈಗಾರಿಕೆಗಳು- ಮರಗೆಲಸ ಮತ್ತು ಷೆಲ್‌ನಿಂದ ಸೌಂದರ್ಯೋಪಕರಣಗಳ ತಯಾರಿಕೆ.

ಅಂಡಮಾನಿನ ಸೌಂದರ್ಯದ ಪರಿಧಿಯು ವಿಶಾಲವಾಗಿದ್ದು ನೋಡುಗನ ಮನಸ್ಸನ್ನು ತನ್ನ ಕಡೆ ಸೆಳೆದು ಕೊಳ್ಳುವ ಶಕ್ತಿ ಜೊತೆಗೆ ಅಗಾಧವಾದ ಪ್ರಾಕೃತಿಕ ಸಂಪತ್ತನ್ನು ತನ್ನಲ್ಲಿ ಅಡಗಿಸಿಕೊಂಡಿದೆ.

**ಬ್ಯಾರನ್ ದ್ವೀಪ :**

ಭೂಮಿಯ ಮೇಲೆ ಇಂದು ನಮ್ಮ ಸುತ್ತಮುತ್ತಲೂ ಕಾಣುತ್ತಿರುವ ಶೇಕಡ ೭೦ ರಷ್ಟು ಪರ್ವತ, ಬೆಟ್ಟಗುಡ್ಡಗಳು ಭೂಮಿ ಸೃಷ್ಟಿಗೊಳ್ಳುತ್ತಿದ್ದ ಕಾಲದಿಂದಲೂ ಜ್ವಾಲಾಮುಖಿಗಳು ಸ್ಫೋಟಗೊಂಡದ್ದರ ಪರಿಣಾಮ. ಪ್ರಸ್ತುತ ಭೂಮಿಯ ಮೇಲೆ ೫೦೦ಕ್ಕಿಂತ ಹೆಚ್ಚು ಕ್ರಿಯಾಶೀಲ ಜ್ವಾಲಾಮುಖಿಗಳು ಆಗಾಗ ಶಿಲಾರಸ ಶಿಲಾಪಾಕ ಮತ್ತು ಹೊಗೆಯನ್ನು ಉಗುಳುತ್ತಿವೆ. ಅದರಲ್ಲಿ ೫೦ ಜ್ವಾಲಾಮುಖಿಗಳು ಸಮುದ್ರದ ಕೆಳಗಿನಿಂದ ಶಿಲಾರಸವನ್ನು ಚಿಮ್ಮುತ್ತವೆ. ಇವುಗಳಲ್ಲಿ ಶೇಕಡ ೭೦ ರಷ್ಟು ರಿಂಗ್ ಆಫ್ ಫೈರ್ ಮತ್ತು ಸುತ್ತಮುತ್ತಲಿವೆ. ಈ ರಿಂಗ್ ಆಫ್ ಫೈರ್, ಪೆಸಿಫಿಕ್ ಸಮುದ್ರವನ್ನು ಹೊತ್ತಿರುವ ಫಲಕದ ಸುತ್ತಲಿರುವ ಬಿರುಕುಗಳು.

ಕ್ರಿ.ಶ. ೧೫೯೫ರಲ್ಲಿ ಈ ಬ್ಯಾರನ್ ದ್ವೀಪವನ್ನು ಗುರುತಿಸಲಾಯಿತು. ಅನಂತರ ೧೭೮೭ರಲ್ಲಿ ಹೊಗೆ ಉಗುಳುತ್ತಿರುವುದನ್ನು ಮೊದಲ ಬಾರಿಗೆ ಲೆ:ಕೋಲಾ ಬ್ರೂಕ್ ನೋಡಿದ್ದರು. ಪೋರ್ಟ್‌ಬ್ಲೇರ್‌ನಿಂದ ೧೩೫ ಕಿ.ಮೀ. ಈಶಾನ್ಯ ದಿಕ್ಕಿನಲ್ಲಿ ೧೦ ಚದರ ಕಿ.ಮೀ. ವಿಸ್ತೀರ್ಣದಲ್ಲಿ ಈ ದ್ವೀಪ ಹರಡಿಕೊಂಡಿದೆ. ಸಮುದ್ರಮಟ್ಟದಿಂದ ೩೫೫ ಮಿ. ಎತ್ತರ ಇದ್ದು ಸಮುದ್ರದ ಒಳಗೆ ಇದು ೨೨೫೦ ಮೀ. ಎತ್ತರದ ಪರ್ವತವಾಗಿದೆ (೧೨.೨೯ ಉತ್ತರ ರೇಖಾಂಶ ೯೩.೮೫ ಪೂರ್ವ ಅಕ್ಷಾಂಶ). ಈ ದ್ವೀಪದಲ್ಲಿ ಯಾವುದೇ ಕಾಲದಲ್ಲೂ ಮನುಷ್ಯರಿದ್ದ ಕುರುಹುಗಳು ಇದುವರೆಗೂ ದೊರಕಿಲ್ಲ.

೧೮೯೧ರಲ್ಲಿ ಒಂದು ಜಾತಿಯ ಮೇಕೆಗಳನ್ನು ಈ ದ್ವೀಪದಲ್ಲಿ ಬಿಟ್ಟು ಅವುಗಳ ಚಲನವಲನಗಳನ್ನು ಗಮನಿಸಲಾಯಿತು. ಕೆಲವು ವರ್ಷಗಳಲ್ಲಿ ಅವುಗಳ ಸಂಖ್ಯೆ ಹೆಚ್ಚಿರುವುದು ಕಂಡುಬಂದಿತು. ಈ ದ್ವೀಪದಲ್ಲಿ ಎಲ್ಲೂ ಸಿಹಿ ನೀರು ದೊರಕದಿದ್ದರೂ ಆ ಮೇಕೆಗಳು ಕೆಲವು ವಿಶೇಷ ಎಲೆಗಳನ್ನು ತಿಂದು ಬಿಸಿ ವಾತಾವರಣದಲ್ಲಿ ಬದುಕಿ ಉಳಿದಿದ್ದವು. ಈ ಮೇಕೆಗಳನ್ನು ಬೇಟೆಯಾಡಲು ಯಾರಿಗೂ ಅವಕಾಶ ಕೊಟ್ಟಿರಲಿಲ್ಲ. ೧೯೭೭ರಲ್ಲಿ ಈ ಪ್ರದೇಶವನ್ನು ಸಂರಕ್ಷಿತ ಕಾಡೆಂದು ಘೋಷಿಸಲಾಯಿತು. ಮೇಕೆಗಳ ಜೊತೆಗೆ ಈ ದೀಪದಲ್ಲಿ ಇಲಿಗಳು, ಹಾರು ತೋಳಗಳು, ಬಾವಲಿ, ನೆಲದ ಮೇಲಿನ ಏಡಿಕಾಯಿಗಳು ಮತ್ತು ಕೆಲವು ಜಾತಿಯ ಪಕ್ಷಿಗಳು ನೆಲೆಯೂರಿವೆ. ಸುತ್ತಲಿನ ಸಮುದ್ರದಲ್ಲಿ ಡಾಲ್ಫಿನ್, ಶಾರ್ಕ್ ಮತ್ತು ಹೇರಳವಾಗಿ ಸಿಗುವ ಹವಳದ ದಿಬ್ಬಗಳಿವೆ.

ಬ್ಯಾರನ್ ದ್ವೀಪದ ಉತ್ತರಕ್ಕೆ ೧೪೦ ಕಿ.ಮೀ. ದೂರದಲ್ಲಿ 'ನಾರ್‌ಕೊಂಡಮ್' ಎಂಬ ಇನ್ನೊಂದು ಸಣ್ಣ ಜ್ವಾಲಾಮುಖಿ ದ್ವೀಪವಿದೆ. ಈ ಜ್ವಾಲಾಮುಖಿ ಕಳೆದ ಮೂರು

ಶತಮಾನಗಳಿಂದ ಸುಪ್ತವಾಗಿದೆ ಎನ್ನಲಾಗಿದೆ. ಬ್ಯಾರನ್ ಮತ್ತು ನಾರ್‌ಕೊಂಡಮ್ ದ್ವೀಪಗಳು ಉತ್ತರದಲ್ಲಿರುವ ಬರ್ಮಾ ದೇಶದ ಪೋಪೊ ಮತ್ತು ಹುಂತೋ ಪರ್ವತಗಳ ಪಟ್ಟಿಯಲ್ಲಿದ್ದು ಈ ಪಟ್ಟಿ ದಕ್ಷಿಣದಲ್ಲಿ ಸುಮಾತ್ರ-ಜಾವಾ-ಬಾಲಿ ದ್ವೀಪಗಳವರೆಗೂ ಚಾಚಿ ನಿಂತಿವೆ. ಉತ್ತರ ಸುಮಾತ್ರದಲ್ಲಿರುವ ಪೋಪೊ ಪರ್ವತದಲ್ಲಿ ೧೯ನೇ ಶತಮಾನದ ಪೂರ್ವದಲ್ಲಿ ಜ್ವಾಲಾಮುಖಿ ಸ್ಫೋಟಗೊಂಡಿತ್ತು. ಇದು ಕಳೆದ ಎರಡು ಮೂರು ಮಿಲಿಯ ವರ್ಷಗಳಲ್ಲಿ ಸ್ಫೋಟಗೊಂಡ ಅತ್ಯಂತ ದೊಡ್ಡ ಜ್ವಾಲಾಮುಖಿ ಸ್ಫೋಟ.

ಇದಕ್ಕೆಲ್ಲ ಕಾರಣ ಇಂಡೋ-ಆಸ್ಟ್ರೇಲಿಯಾ ಭೂಫಲಕ ಮತ್ತು ಇಂಡೋ-ಬರ್ಮಾ-ಅಂಡಮಾನ್-ಸುಮತ್ರಾ ವಲಯಗಳು ಸೇರಿ ಅಂಡಮಾನ್-ಜಾವಾ ಮಧ್ಯಭಾಗದ ಫಲಕದ ಕೆಳಗೆ ನುಸುಳುತ್ತಿರುವುದರಿಂದ ಈ ವಲಯ ಭೂಕಂಪ-ಸುನಾಮಿ-ಜ್ವಾಲಾಮುಖಿಗಳ ಸುಳಿಯಲ್ಲಿ ಸಿಲುಕಿಕೊಂಡಿವೆ. ಬ್ಯಾರನ್ ದ್ವೀಪದ ಸುತ್ತಮುತ್ತಲಿರುವ ಪರ್ವತ ಶ್ರೇಣಿಗಳನ್ನು ಸಂಶೋಧನೆಗೆ ಒಳಪಡಿಸಿದಾಗ ಅವು ೧.೫ ಮಿಲಿಯನ್ ವರ್ಷಗಳ ವಯಸ್ಸನ್ನು ತೋರಿಸುತ್ತಿವೆ. ಅಂದರೆ ಇವು ೧.೫ ಮಿಲಿಯನ್ ವರ್ಷಗಳ ಹಿಂದೆ ಜ್ವಾಲಾಮುಖಿಗಳ ಮೂಲಕ ಸ್ಫೋಟಗೊಂಡ (ಶಿಲಾರಸ) ಪರ್ವತಗಳು.

ಇತ್ತೀಚೆಗೆ ೧೭೮೯, ೧೭೯೫, ೧೮೦೫, ೧೮೩೨ರಲ್ಲಿ ಜ್ವಾಲಾಮುಖಿಗಳು ಸ್ಫೋಟಗೊಂಡ ದಾಖಲೆಗಳಿವೆ. ಬಹಳಷ್ಟು ಸಲ ಬೆಂಕಿಯೊಂದಿಗೆ ಶಿಲಾಪಾಕ ಪಕ್ಕದ ಸಮುದ್ರಕ್ಕೆ ಬಿದ್ದು ತಣ್ಣಗಾಗುತ್ತಿತ್ತು. ಸುತ್ತಲೂ ದಟ್ಟ ಹೊಗೆ ವಾರಗಳಗಟ್ಟಲೆ ಏಳುತ್ತಿದ್ದು ಬೆಟ್ಟವೇ ಉರಿಯುತ್ತಿರುವಂತೆ ಕಾಣಿಸಿಕೊಳ್ಳುತ್ತಿತ್ತು. ಹೀಗೆ ನೂರಾರು ಬಾರಿ ಹೊರಚೆಲ್ಲಿದ ಶಿಲಾಪಾಕ ಈರುಳ್ಳಿಯ ಪೊರೆಗಳಂತೆ ಇಲ್ಲಿನ ದ್ವೀಪಗಳ ಶಿಲೆಗಳನ್ನು ಹತ್ತಿರದಿಂದ ನೋಡಿದಾಗ ಕಾಣಿಸುತ್ತವೆ.

ತೀರ ಇತ್ತೀಚೆಗೆ ಮೇ ೧೧, ೧೯೯೧ರಲ್ಲಿ ಬ್ಯಾರನ್ ದ್ವೀಪ ಹೊಗೆಯನ್ನು ಉಗುಳಲು ಪ್ರಾರಂಭಿಸಿತ್ತು. ಅಂಡಮಾನ್-ನಿಕೋಬಾರ್ ಆಡಳಿತ ಮತ್ತು ಜಿಎಸ್ಐ ಭೂವಿಜ್ಞಾನಿಗಳು ಅಲ್ಲಿಗೆ ಅದೇ ದಿನ ತಲುಪಿದರು. ೧೯೯೦ ಮಾರ್ಚ್‌ನಲ್ಲಿ ಜಿಎಸ್ಐ ಭೂವಿಜ್ಞಾನಿಗಳು ಅಲ್ಲೆಲ್ಲ ಓಡಾಡಿ ಸಂಶೋಧನೆ ನಡೆಸಿ ಹಿಂದಕ್ಕೆ ಬಂದಿದ್ದರು. ಆಗ ಯಾವುದೇ ಜ್ವಾಲಾಮುಖಿ ಸ್ಫೋಟಗೊಳ್ಳುವ ಚಟುವಟಿಕೆಗಳು ಅವರಿಗೆ ಕಾಣಿಸದೆ ಇಡೀ ದ್ವೀಪ ಗಪ್‌ಚಿಪ್ ಆಗಿ ಕುಳಿತಿತ್ತು. ೨ ಏಪ್ರಿಲ್ ೧೯೯೧ರಂದು ಅದೇ ಜ್ವಾಲಾಮುಖಿಗಳ ಪಟ್ಟಿಯಲ್ಲಿರುವ ಫಿಲಿಪ್ಪೈನ್ಸ್‌ನ ಪಿಂಟೊಬೊ ಪರ್ವತದಲ್ಲಿ ಜ್ವಾಲಾಮುಖಿಯೊಂದು ಹೊಗೆ ಕಾರಲು ಪ್ರಾರಂಭಿಸಿತ್ತು. ಈ ಪರ್ವತ ಕಳೆದ ೬೦೦ ವರ್ಷಗಳಿಂದ ತುಟಿ ಬಿಚ್ಚದೆ ಸುಪ್ತವಾಗಿ ಅಡಗಿ ಕುಳಿತುಕೊಂಡಿತ್ತು.

ಕಳೆದ ೪೦೦ ವರ್ಷಗಳಲ್ಲಿ ಪ್ರಪಂಚದಾದ್ಯಂತ ೪೦೦ ಕ್ಕಿಂತ ಹೆಚ್ಚು ಕ್ರಿಯಾಶೀಲ ಜ್ವಾಲಾಮುಖಿಗಳ ಬೆಂಕಿಯಲ್ಲಿ ೨೦ ಲಕ್ಷ ಜನರು ಬೆಂದು ಹೋಗಿದ್ದಾರೆ. ೨೪, ಆಗಸ್ಟ್

೧೯೭೯ರಂದು ಸ್ಫೋಟಗೊಂಡ ಇಟಲಿಯ ವೆಸುವಿಯಸ್ ಜ್ವಾಲಾಮುಖಿಯಲ್ಲಿ ೧೬,೦೦೦ ಜನರು ಸತ್ತು ಇಡೀ ಪೊಂಪೈ ನಗರವೇ ಬೆಂಕಿಯಲ್ಲಿ ಬೆಂದುಹೋಗಿ ೫ ರಿಂದ ೧೦ ಮೀಟರ್ ಶಿಲಾಪಾಕ ಮತ್ತು ಹೊಗೆಯಿಂದ ತುಂಬಿಹೋಗಿತ್ತು. ಇನ್ನೂ ಅಘಾತಕಾರಿ ಜ್ವಾಲಾಮುಖಿ ಸ್ಫೋಟವೆಂದರೆ ೧೮೮೫ರಲ್ಲಾದ ಇಂಡೋನೇಷ್ಯಾದ ತಂಬೋರಾ ಪರ್ವತದಲ್ಲಾದ ಜ್ವಾಲಾಮುಖಿ. ಇಲ್ಲಿ ೧೨,೦೦೦ ಜನರು ಸಜೀವ ಧಹನವಾದರು. ೮೦,೦೦೦ ಸಂಖ್ಯೆಯಷ್ಟು ಪ್ರಾಣಿಗಳು ಬೆಂಕಿಯಲ್ಲಿ ಧಹಿಸಿಹೋದವು. ಇದರಿಂದ ಹಬ್ಬಿದ ದಟ್ಟವಾದ ಹೊಗೆಯಿಂದ ದೂರದ ಅಮೆರಿಕಾದಲ್ಲಿ ಆ ವರ್ಷ ಬೇಸಿಗೆ ಕಾಲ ಬರಲೇ ಇಲ್ಲ.

೧೯೦೨ರಲ್ಲಿ ಬಾರಬಡಾಸ್‌ನ ಉತ್ತರ ಉತ್ತಂಬ ಪಿಲಿ ದ್ವೀಪದಲ್ಲಾದ ಜ್ವಾಲಾಮುಖಿ ಸ್ಫೋಟದಿಂದ ೩೦,೦೦೦ ಜನರು ಅಸುನೀಗಿದರು. ೨೦, ಮೇ ೧೮೮೩ ರಂದು ಜಾವಾದಿಂದ ೫೦ ಕಿ.ಮೀ. ಪಶ್ಚಿಮಕ್ಕೆ ಸುಂಡ್ರಾ ವಲಯದಲ್ಲಾದ ಸ್ಫೋಟ ಇನ್ನೂ ಭೀಕರವಾಗಿತ್ತು. ಈ ಸ್ಫೋಟ ಎಷ್ಟು ಭೀಕರವಾದುದೆಂದರೆ ೫೦೦೦ ಕಿ.ಮೀ. ದೂರದವರೆಗೂ ಕೇಳಿಬಂದಿತು. ಸಮುದ್ರದಲ್ಲಿ ೬೦ ಮೀಟರ್‌ಗಳಿಗಿಂತ ಎತ್ತರದ ಸುನಾಮಿ ಅಲೆಗಳು ಉದ್ಭವಿಸಿದವು. ಸಮುದ್ರ ದಡಗಳಲ್ಲಿದ್ದ ೩೦೦ ಹಳ್ಳಿಗಳನ್ನು ಸುನಾಮಿ ಅಲೆಗಳು ಒಮ್ಮೆಲೆ ಗುಡಿಸಿಕೊಂಡು ಹೋದವು. ಆ ಹಳ್ಳಿಗಳ ಜೊತೆಗೆ ೩೬,೦೦೦ ಜನರು ಸಮುದ್ರ ಪಾಲಾಗಿದ್ದರು. ಇವೆಲ್ಲ ಈ ರಿಂಗ್ ಆಫ್ ಫೈರ್ ವಲಯದಲ್ಲಿ ಘಟಿಸಿದ ಭೂಕಂಪ-ಜ್ವಾಲಾಮುಖಿ-ಸುನಾಮಿಗಳು. ಇದಕ್ಕೆಲ್ಲ ಕಾರಣ ಇಲಲಿನ ಭೂಫಕಲಗಳ ನಡುವೆ (ಭೂಮಿಯ ಕೆಳಗೆ) ನಿರಂತರವಾಗಿ ನಡೆಯುತ್ತಿರುವ ಹೋರಾಟ. ಭೂಕಂಪ-ಜ್ವಾಲಾಮುಖಿ-ಸುನಾಮಿ ಇತ್ಯಾದಿ ನೈಸರ್ಗಿಕ ಅನಾಹುತಗಳು ಭೂಮಿ ಇರುವವರೆಗೂ ನಡೆಯುತ್ತಲೇ ಇರುತ್ತವೆ.



ಡಾ॥ ಮೊನ್ ಇಲ್ಲಿ ಸಂಶೋಧನೆ ನಡೆಸಿ ಹೀಗೆ ದಾಖಲಿಸಿದ್ದಾರೆ. ದ್ವೀಪದ ಇಳಿಜಾರುಗಳಲ್ಲಿ ಬೆಳೆದಿರುವ ಸಸ್ಯ ತೀರ ಇತ್ತೀಚಿನದು. ೧೮೬೧ರಲ್ಲಿ ಇಲ್ಲಿಗೆ ತಲುಪಿದ ಮಿಸ್ಟರ್ ಪರೀಷ್ ಇಲ್ಲಿನ ಸುಂದರವಾದ ಹೂಗಿಡಗಳನ್ನು ನೋಡಿ ಇವು ಲಾವಾ ಮೇಲೆ ಮಾತ್ರ ಬೆಳೆದಿರಬಹುದಾದ ಗಿಡಗಳೆಂಬ ಸಂಶಯದಿಂದ ದಾಖಲಿಸಿದ್ದರು. ಈ ಗಿಡಗಳು ಇತ್ತೀಚೆಗೆ ಬೆಳೆದಿರಬಹುದಾದರೆ ಇದು ಸಾಮಾನ್ಯವಾದ ಸಂಶೋಧನೆಯಲ್ಲ ಎಂದಿದ್ದರು. ಅದಕ್ಕೂ ಮುಂಚೆ ೧೮೩೧ರಲ್ಲಿ ಇಲ್ಲಿಗೆ ತಲುಪಿದ ಮಿ.ಆಡಮ್ಸ್ ಈಶಾನ್ಯ ದಿಕ್ಕಿನ ಇಳಿಜಾರಿನ ಭಾಗ ಪೂರ್ಣವಾಗಿ ನುಣುಪಾಗಿದ್ದು ಬೂದಿಯಿಂದ ಆವರಿಸಿದೆ. ಆಗ್ನೇಯದ ಕೆಲವು ಭಾಗಗಳು ಬೂದಿಯಿಂದ ಆವರಿಸಿದ್ದು ಮೇಲೆ ಸಣ್ಣಪುಣ್ಣ ಗಿಡಗಂಟೆಗಳ ಜೊತೆ ಹುಲ್ಲು ಬೆಳೆದಿತ್ತು. ಇಲ್ಲಿನ ಲಾವಾದಲ್ಲಿ ಹೆಚ್ಚಾಗಿ ರಂಜಕ ಇರುವುದು ಕಂಡುಬಂದಿತು. ಜೊತೆಗೆ ಬುರುಜು ಶಿಲಾರಸದ ಪದರುಗಳನ್ನು

ನೋಡಬಹುದು. ಒಂದು ಸ್ಥಳದಿಂದ ಮಾತ್ರ ನಿರಂತರವಾಗಿ ಎರಡು ಮೂರು ವರ್ಷಗಳಿಗೊಮ್ಮೆ ರಂಜಕಕಾರಿಕೊಂಡಿರುವುದು ದಾಖಲಾಗಿತ್ತು.

**ಯಾವ್‌ಲಾಕ್ ದ್ವೀಪ :**

ಈ ವಿಶಾಲ ಭೂಮಿಯನ್ನು ಸುತ್ತುವರಿದಿರುವ ನೀರನ್ನು ೫ ಸಮುದ್ರಗಳಾಗಿ ವಿಭಾಗಿಸಲಾಗಿದೆ. ಪೆಸಿಫಿಕ್, ಇಂಡಿಯನ್, ಆರ್ಕ್‌ಟಿಕ್ ಮತ್ತು ದಕ್ಷಿಣ ಸಮುದ್ರ. ಕೊನೆ ಎರಡನ್ನು ಮೊದಲಿನ ಮೂರು ಸಮುದ್ರಗಳ ಜೊತೆಗೆ ಸೇರಿಸಲಾಗಿದೆ. ಉಪ್ಪಿನಿಂದ ಕೂಡಿದ ಈ ಸಮುದ್ರಗಳನ್ನು ನೀರುಗೋಳ ಎಂದು ಕರೆಯಲಾಗುತ್ತದೆ. ಭೂಮಿಯ ಶೇಕಡ ೭೧% ಭಾಗವನ್ನು ಆವರಿಸಿರುವ ಸಮುದ್ರ (3.6 X 10 X 108 ಚದರ ಕಿ.ಮೀ.) ಹಲವು ವಿಶಾಲ ಮತ್ತು ಸಣ್ಣ ಭಾಗಗಳಿಂದ ಕೂಡಿವೆ.

ಸಮುದ್ರದ ಸರಾಸರಿ ಅರ್ಧಭಾಗ ೩೦೦೦ ಮೀಟರುಗಳಿಗಿಂತ ಆಳ. ಸಮುದ್ರದ ಸರಾಸರಿ ಉಪ್ಪಿನಾಂಶ ೩.೫% ಇದ್ದು ಪ್ರಸ್ತುತ ಒಂದು ಲೆಕ್ಕಾಚಾರದಂತೆ ಸಮುದ್ರದಲ್ಲಿ ೨,೩೦,೦೦೦ ಸಂಖ್ಯೆಯಷ್ಟು ಪ್ರಾಣಿ ಸಂಕುಲ ಇದೆ ಎನ್ನಲಾಗಿದೆ. ಈ ಸಂಖ್ಯೆಗಿಂತ ಇದುವರೆಗೂ ಯಾರಿಗೂ ಕಾಣದಿರುವ ಇನ್ನೂ ೧೦ ಪಟ್ಟು ಜಾಸ್ತಿ ಪ್ರಾಣಿ ಸಂಕುಲ ಸಮುದ್ರದ ಒಳಗೆ ಇರಬಹುದೆಂದು ಊಹಿಸಲಾಗಿದೆ.

**ಪೆಸಿಫಿಕ್ ಸಮುದ್ರ** : ಏಷ್ಯಾ, ಆಸ್ಟ್ರೇಲಿಯಾ ಮತ್ತು ಅಮೆರಿಕಾ ಖಂಡಗಳನ್ನು ಪ್ರತ್ಯೇಕಿಸುತ್ತದೆ. ಇಂಡಿಯನ್ ಸಮುದ್ರ ದಕ್ಷಿಣ ಏಷ್ಯಾ ಭಾಗಗಳನ್ನು ತೊಳೆಯುತ್ತ ಆಫ್ರಿಕಾ ಮತ್ತು ಆಸ್ಟ್ರೇಲಿಯಾಗಳನ್ನು ಬೇರ್ಪಡಿಸಿದೆ.

**ಅಂಟಾರ್ಕಟಿಕ್** : ಪೆಸಿಪಿಕ್, ಅಂಟ್ಲಾಂಟಿಕ್ ಮತ್ತು ಇಂಡಿಯನ್ ಸಮುದ್ರಗಳ ಮುಂದುವರಿದ ಭಾಗ ಎಂದು ಹೇಳಲಾಗುತ್ತದೆ. ಇದು ಅಂಟಾರ್ಕ್‌ಟಿಕ ಖಂಡವನ್ನು ಸುತ್ತುವರಿದ ಸಮುದ್ರ.

**ಆರ್ಕ್‌ಟಿಕ್** : ಇದನ್ನು ಹಿಂದೆ ಅಟ್ಲಾಂಟಿಕ್ ಸಮುದ್ರ ಎಂದೇ ತಿಳಿಯಲಾಗಿತ್ತು. ಇದು ಆರ್ಕ್‌ಟಿಕ್ ಭಾಗವನ್ನು ಆವರಿಸಿಕೊಂಡಿದ್ದು ಉತ್ತರ ಅಮೆರಿಕಾ ಮತ್ತು ಯೂರೇಷ್ಯಾ ಖಂಡಗಳನ್ನು ತೊಳೆಯುತ್ತದೆ. ಪೆಸಿಫಿಕ್ ಮತ್ತು ಅಟ್ಲಾಂಟಿಕ್ ಸಮುದ್ರಗಳನ್ನು ಸಮಭಾಜಕ ವೃತ್ತ ಉತ್ತರ ದಕ್ಷಿಣ ಭಾಗಗಳಾಗಿ ಪ್ರತ್ಯೇಕಿಸಿದೆ. ಸಮುದ್ರದ ಇತರೆ ಸಣ್ಣ ಭಾಗಗಳನ್ನು ಕೊಲ್ಲಿ, ಕೊಳ್ಳ ಇತ್ಯಾದಿಯಾಗಿ ಕರೆಯಲಾಗುತ್ತದೆ.

ಭೌಗೋಳಿಕವಾಗಿ ಸಮುದ್ರಗಳು ಕೆಳಗಿನ ಭೂಫಲಕಗಳ ಮೇಲೆ ನಿಂತಿವೆ. ಈ ಫಲಕಗಳು ತೆಳುವಾಗಿದ್ದು, ಇವು ಜ್ವಾಲಾಮುಖಿಗಳ ಶಿಲಾರಸ ಪಾಕದಿಂದ ರೂಪುಗೊಂಡ ಗಟ್ಟಿ

ಭಾಗಗಳಾಗಿವೆ. ಸಮುದ್ರ ಜೀವಗೋಳದ ಮೇಲೆ ಭಾರಿ ಪ್ರಭಾವ ಬೀರುತ್ತದೆ. ಸಮುದ್ರದ ನೀರು ಆವಿಯಾಗಿ, ಮೋಡಗಳಾಗಿ ಮೇಲಕ್ಕೆ ಹಾರಿ ಮಳೆ ಸುರಿಸುತ್ತದೆ. ಹಾಗೆ ಸಮುದ್ರದ ಉಷ್ಣತೆಯ ವಾತಾವರಣ ಮತ್ತು ಬೀಸುವ ಗಾಳಿಯನ್ನು ನಿಯಂತ್ರಿಸುತ್ತದೆ. ಇದರಿಂದ ಭೂಮಿಯ ಮೇಲಿರುವ ಮನುಷ್ಯ ಮತ್ತು ಪ್ರಾಣಿ ಸಂಕುಲದ ಮೇಲೆ ಪ್ರತಿಕೂಲ ಪ್ರಭಾವ ಬೀರುತ್ತದೆ. ಭೂಮಿಯ ಮೇಲೆ ಜೀವಿಗಳು ಕಾಣಿಸಿಕೊಳ್ಳುವುದಕ್ಕಿಂತ ೩೦೦ ಕೋಟಿ ವರ್ಷಗಳ ಮುಂಚೆಯೇ ಸಮುದ್ರಗಳಲ್ಲಿ ಆದಿಜೀವಿಗಳು ಕಾಣಿಸಿಕೊಂಡಿದ್ದವು.

ಆಕಾಶ ನೀಲಿ ಬಣ್ಣ ಇರುವುದರಿಂದ ಸಮುದ್ರ ಕೂಡ ನೀಲಿಯಾಗಿ ಕಾಣಿಸುತ್ತದೆ ಎಂದು ಮೊದಲಿಗೆ ತಿಳಿಯಲಾಗಿತ್ತು. ದೂರದಿಂದ ಹೆಚ್ಚಿನ ನೀರನ್ನು ನೋಡಿದಾಗ ನೀರಿನ ಬಣ್ಣ ತೆಳು ನೀಲಿಯಾಗಿ ಕಾಣಿಸುತ್ತದೆ. ಆಕಾಶದ ಪ್ರತಿಬಿಂಬ ಸ್ವಲ್ಪ ಮಟ್ಟಿಗೆ ನೀರು ನೀಲಿಯಾಗಿ ಕಾಣಿಸಲು ಕಾರಣವಾಗಿದೆ. ಆದರೆ ಇದು ನಿಜವಲ್ಲ. ನೀರು ನೀಲಿಯಾಗಿ ಕಾಣಲು ಮುಖ್ಯ ಕಾರಣ ಬೆಳಕಿನ ಕಿರಣಗಳಲ್ಲಿರುವ ಕೆಂಪು ಪ್ರೋಟಾನುಗಳನ್ನು ನೀರಿನ ಕಣಗಳು ಸೆಳೆದುಕೊಳ್ಳುವುದು. ಹಡಗುಗಳಲ್ಲಿ ಪ್ರಯಾಣಿಸುವವರು ಹೇಳುವುದೇನೆಂದರೆ ಸಮುದ್ರ ಬೆಳಕಿನ ಪ್ರತಿಬಿಂಬವನ್ನು ಪ್ರಜ್ವಲಿಸುತ್ತದೆ ಎಂದು. ಅದೂ ಕೂಡ ರಾತ್ರಿಯ ವೇಳೆಯಲ್ಲಿ ಹತ್ತಾರು ಕಿ.ಮೀ. ದೂರದವರೆಗೂ ಅದು ಕಾಣಿಸುತ್ತದೆ.

**ವೈಪರ್ ದ್ವೀಪ :**

ಈ ವೈಪರ್ ದ್ವೀಪವನ್ನು **'ಚೈನ್‌ಕಳ್ಳರ ದ್ವೀಪ'**ವೆಂದು ಕರೆಯಲಾಗುತ್ತದೆ. ಮೊದಮೊದಲಿಗೆ ಕಳ್ಳರನ್ನು ಇಲ್ಲಿಗೆ ಕರೆದು ತಂದ ಬ್ರಿಟಿಷರು ರಾತ್ರಿಯ ವೇಳೆ ಎಲ್ಲರಿಗೂ ಉದ್ದವಾದ ಒಂದೇ ಚೈನ್‌ನ್ನು ತೊಡಿಸುತ್ತಿದ್ದರಂತೆ. ದ್ವೀಪದ ಸುತ್ತಲೂ ದೊಡ್ಡದಾದ ಗೋಡೆ ಮಾತ್ರ ಇದ್ದು ಮಳೆ ಗಾಳಿಯಲ್ಲೇ ಅವರನ್ನು ಇಡಲಾಗಿತ್ತು. ದಿನದಲ್ಲೂ ಕೈ ಕಾಲುಗಳಿಗೆ ಸರಪಳಿ ಹಾಕಿಕೊಂಡೇ ಕೆಲಸ ಮಾಡಬೇಕಾಗಿತ್ತು. ಮಳೆ ಗಾಳಿಯಲ್ಲೇ ಅವರು ಬಹಳ ವರ್ಷಗಳ ಕಾಲ ಜೀವನ ನಡೆಸಿದ್ದರು. ಬೇರೆ ದ್ವೀಪಗಳಲ್ಲಿದ್ದ ಕಳ್ಳರು ಮತ್ತು ಆಂದೋಲನಕಾರರಿಗೆ ಗಲ್ಲು ಶಿಕ್ಷೆಯಾದರೆ ಅವರನ್ನು ಇಲ್ಲಿಗೆ ತಂದು ಗಲ್ಲಿಗೆ ಏರಿಸುತ್ತಿದ್ದರು ಹಾಗಾಗಿ ಈ ಪುಟ್ಟ ದ್ವೀಪ ಹಲವು ಜನರ ಪ್ರಾಣಗಳನ್ನು ತೆಗೆದಿದ್ದಕ್ಕೆ ಸಾಕ್ಷಿಯಾಗಿ ನಿಂತಿದೆ.

**ಈ) ಸಾಮಾಜಿ ನೆಲೆ:– ಭಿನ್ನ ಬುಡಕಟ್ಟು ಸಮುದಾಯಗಳು :**

ಇಂದಿಗೂ ಅಂಡಮಾನ್–ನಿಕೋಬಾರ್ ದ್ವೀಪಗಳು ಇಲ್ಲಿನ ಮೂಲ ನಿವಾಸಿಗಳಿಂದ ಪ್ರಖ್ಯಾತಿ ಪಡೆದಿವೆ. ಅಂಡಮಾನ್ ದ್ವೀಪಗಳಲ್ಲಿರುವ ಆದಿವಾಸಿಗಳು ಮುಖ್ಯವಾಗಿ ನಾಲ್ಕು ಗುಂಪುಗಳಿಗೆ ಸೇರಿದ್ದಾರೆ. ನೀಗ್ರೊ ಬುಡಕಟ್ಟುಗಳು: ಇವರನ್ನು ಬಹುಶಃ ನೀಗ್ರೋ

ಮೂಲನಿವಾಸಿಗಳ ಕೊನೆಯ ಕೊಂಡಿ ಎನ್ನಬಹುದು. ಕಾರಣ ಆಧುನಿಕತೆಯಿಂದ ತಾಂತ್ರಿಕ-ಆರ್ಥಿಕತೆಯ ಹಿನ್ನೆಲೆಯಿಂದ ಇವರ ಬದುಕು ಆದಿಮಾನವರ ಕುರುಹುಗಳನ್ನು ಕಳೆದುಕೊಳ್ಳುತ್ತಾ ಹೋಗುತ್ತಿರುವುದು. ಅವರ ಒಟ್ಟು ಸಂಖ್ಯೆ ಒಂದು ಸಾವಿರಕ್ಕಿಂತ ಕಡಿಮೆಯಾಗಿದೆ. ಈ ದ್ವೀಪಗಳ ಮೂಲನಿವಾಸಿಗಳು ಮೂಲವಾಗಿ **ನೀಗ್ರೋ** ಮತ್ತು **ಮಂಗೋಲಾಯ್ಡ್** ಗುಂಪುಗಳಿಗೆ ಸೇರಿದವರು.

**(ಅ) ನೀಗ್ರೋ ಮೂಲ**

೧. ಗ್ರೇಟ್ ಅಂಡಮಾನೀಸ್

೨. ಜರವಾಸ್

೩. ಓಂಗೀಸ್ ಮತ್ತು

೪. ಸೆಂಟಿನೆಲೀಸ್ (ಎಲ್ಲರೂ ಅಂಡಮಾನ್ ದ್ವೀಪಗಳ ನಿವಾಸಿಗಳು)

**(ಆ) ಮಂಗೋಲಾಯ್ಡ್ ಮೂಲ**

೧. ಶೊಂಪೇನ್ಸ್ (ಗ್ರೇಟ್ ನಿಕೋಬಾರ್ ದ್ವೀಪಗಳು)

೨. ನಿಕೋಬಾರಿಗಳು (ನಿಕೋಬಾರ್ ದ್ವೀಪಗಳು)

**೧) ಗ್ರೇಟ್ ಅಂಡಮಾನೀಸ್ :**

ಒಂದು ಕಾಲದಲ್ಲಿ ದಕ್ಷಿಣ ಭಾಗದ ಅಂಡಮಾನ್ ದ್ವೀಪಗಳಲ್ಲೆಲ್ಲ ಹರಡಿದ್ದ ಇವರು ಪ್ರಸ್ತುತ ಸ್ಟ್ರೈಯಟ್ ದ್ವೀಪದಲ್ಲಿ ಮಾತ್ರ ಉಳಿದುಕೊಂಡಿದ್ದಾರೆ. ಒಂದು ಕಾಲಕ್ಕೆ ೫೦೦೦ಕ್ಕಿಂತ ಹೆಚ್ಚಿದ್ದ ಇವರ ಜನಸಂಖ್ಯೆ ಕೇವಲ ೩೨ಕ್ಕೆ ಇಳಿದಿದೆ. ೧೮೫೯ರಲ್ಲಿ ಬ್ರಿಟಿಷರೊಂದಿಗೆ ನಡೆದ ಯುದ್ಧದಲ್ಲಿ ಅನೇಕರು ಪ್ರಾಣ ಕಳೆದುಕೊಂಡಿದ್ದರು. ಜೊತೆಗೆ ಹೊರಗಿನ ಜನರ ಸಂಪರ್ಕ ಬಂದ ಮೇಲೆ ಹಲವು ರೀತಿಯ ರೋಗಗಳಿಗೆ ತುತ್ತಾಗಿ ಅವರ ಸಂಖ್ಯೆ ತೀರಾ ಕಡಿಮೆಯಾಯಿತು. ೧೮೫೮ರವರೆಗೂ ನಗ್ನರಾಗಿದ್ದ ಇವರು ಅನಂತರ ಬಟ್ಟೆ ತೊಡಲು ಪ್ರಾರಂಭಿಸಿದರು. ಅವರು ಧರಿಸುತ್ತಿದ್ದ ನೈಸರ್ಗಿಕ ಅಲಂಕಾರ ವಸ್ತುಗಳಲ್ಲಿ ಔಷಧೀಯ ಗುಣಗಳು, ತಾಂತ್ರಿಕ / ಕಪ್ಪು ವಿದ್ಯೆ-ಪದ್ಧತಿಗಳೊಂದಿಗೆ ಬೆಸೆದಿತ್ತು ಎಂದು ತಿಳಿದುಬರುತ್ತದೆ.

**೨) ಓಂಗೀಸ್ :**

ಸಣ್ಣ ಆಕಾರದ ನೀಗ್ರೋ ಮೂಲಕ್ಕೆ ಸೇರಿದ ಇವರು ಲಿಟ್ಲ್ ಅಂಡಮಾನ್‌ನ ಮಧ್ಯದ ದ್ವೀಪಗಳಲ್ಲಿ ವಾಸಿಸುತ್ತಿದ್ದಾರೆ. ಇವರ ಬಗ್ಗೆ ಇಂದಿಗೂ ಸರಿಯಾದ ಮಾಹಿತಿಯನ್ನು ಕಲೆಹಾಕಲು ಸಾಧ್ಯವಾಗಿಲ್ಲ. ೧೮೨೫ರಲ್ಲಿ ಮೊದಲ ಬಾರಿಗೆ ಒಬ್ಬ ಇಂಗ್ಲಿಷ್ ನೌಕಾ ಅಧಿಕಾರಿ ಇವರನ್ನು ಸಂಪರ್ಕಿಸುವ ಪ್ರಯತ್ನ ಮಾಡಿದ. ಆದರೆ ಅದು ರಕ್ತದೋಕುಳಿಯಿಂದ ಮುಕ್ತಾಯವಾಗಿತ್ತು.

ಅನಂತರ ಅನೇಕ ಪ್ರಯತ್ನಗಳಾದ ಮೇಲೆ ಕೊನೆಗೆ ಇವರೊಂದಿಗೆ ಸಂಪರ್ಕ ಏರ್ಪಟ್ಟಿತ್ತು. ಹೊರಜಗತ್ತಿನ ಜೊತೆಗೆ ಇವರೊಂದಿಗೆ ದೈಹಿಕ ಸಂಪರ್ಕ ಏರ್ಪಟ್ಟ ಮೇಲೆ ಅನೇಕರು ಹಲವು ರೋಗಗಳಿಗೆ ತುತ್ತಾಗಿ ಪ್ರಾಣ ಕಳೆದುಕೊಂಡರು. ಪ್ರಸ್ತುತ ಅವರ ಸಂಖ್ಯೆ ಕೇವಲ ೯೯ ಎಂದು ತಿಳಿದುಬರುತ್ತದೆ.

**೩) ಸೆಂಟಿನೆಲೀಸ್ :**

ಇವರನ್ನು ಅಂಡಮಾನ್ **'ನೀಗ್ರೋಗಳ ಕೊನೆಯ ಕೊಂಡಿ'** ಎನ್ನಲಾಗುತ್ತಿದೆ. ಪ್ರಸ್ತುತ ಪೋರ್ಟ್‌ಬ್ಲೇರ್‌ನಿಂದ ಪಶ್ಚಿಮಕ್ಕಿರುವ ಉತ್ತರ ಸೆಂಟಿನೆಲ್ ಹೆಸರಿನ ದ್ವೀಪದಲ್ಲಿ ಇವರು ಉಳಿದುಕೊಂಡಿದ್ದಾರೆ. ಭೂಮಿಯ ಮೇಲೆ ತಮ್ಮ ಬದುಕಿನೊಂದಿಗೆ ಮೂಲ ಪದ್ಧತಿಗಳನ್ನು ಉಳಿಸಿಕೊಂಡಿರುವ ಕೊನೆಯ ಬುಡಕಟ್ಟು ಜನಾಂಗ ಇದು ಎಂದು ಹೇಳಲಾಗುತ್ತಿದೆ. ಹಿಂದೆ ಹಲವಾರು ಸಲ ಇವರನ್ನು ಸಂಪರ್ಕಿಸಲು ಮಾಡಿದ ಪ್ರಯತ್ನಗಳು ಯಾವುದೂ ಫಲಿಸಿರಲಿಲ್ಲ. ಆದರೆ ೧೯೯೧ರಲ್ಲಿ ಸ್ಥಳೀಯ ಆಡಳಿತದ ಅಧಿಕಾರಿಗಳು ಸಂಪರ್ಕವನ್ನು ಬೆಳೆಸಿ ಅವರಿಗೆ ಅನೇಕ ರೀತಿಯ ಕೊಡುಗೆಗಳನ್ನು ನೀಡಿ ಒಲಿಸಿಕೊಳ್ಳಲಾಯಿತು. ಆದರೆ ಇಂದಿಗೂ ಅವರ ಜೊತೆ ಪೂರ್ಣ ಸೌಹಾರ್ದತೆಯನ್ನು ಬೆಳೆಸಲು ಸಾಧ್ಯವಾಗಲಿಲ್ಲ. ಇವರ ಸಂಖ್ಯೆ ಕೇವಲ ೧೨೦ಕ್ಕೆ ಇಳಿದಿದೆ ಎಂದು ತಿಳಿದುಬರುತ್ತದೆ.

**೧) ಶೊಂಪೇನ್ಸ್ :**

ಗ್ರೇಟ್ ಮಂಗೋಲಾಯ್ಡ್ ಮೂಲಕ್ಕೆ ಸೇರಿದ ಇವರು ನಿಕೋಬಾರ್ ದ್ವೀಪಗಳ ಮಧ್ಯಭಾಗದಲ್ಲಿ ವಾಸಿಸುತ್ತಿದ್ದಾರೆ. ಇಂದಿಗೂ ಇವರು ಅರೆನಗ್ನರಾಗಿ ಬದುಕು ನಡೆಸುತ್ತಿದ್ದು ಇವರ ಸಂಖ್ಯೆ ೨೦೦ ಮಾತ್ರ ಎಂದು ತಿಳಿದುಬರುತ್ತದೆ.

**೨) ನಿಕೋಬಾರ್ :**

ಇವರು ಮಂಗೋಲಾಯ್ಡ್ ಮೂಲಕ್ಕೆ ಸೇರಿದ್ದು, ನಿಕೋಬಾರ್ ಗುಂಪಿನ ಹತ್ತಾರು ದ್ವೀಪಗಳಲ್ಲಿ ವಾಸಿಸುತ್ತಿದ್ದಾರೆ. ಸಾಕಷ್ಟು ಆಧುನಿಕತೆ ಇವರನ್ನು ಆವರಿಸಿಕೊಂಡಿದೆ. ಇವರ ಸಂಖ್ಯೆ ಸುಮಾರು ೩೦,೦೦೦ ಇವರು ಅತೀ ಪ್ರಾಚೀನ ಕಾಲದಿಂದಲೂ ಇಲ್ಲಿದ್ದಾರೆ ಎನ್ನಲಾಗಿದೆ. ನಿಕೋಬಾರ್ ಪದ ಇಲ್ಲಿನ ಮೂಲದಿಂದಲೇ ಬಂದಿರುವುದಾಗಿ ನಿಕೋಬಾರ್ ಜನ ಸಮುದಾಯದ ಶ್ರೇಯಸ್ಸಿಗೆ ತಮ್ಮ ಬದುಕನ್ನೇ ಸವೆಸಿದ ಬಿಷಪ್ ಜಾನ್ ರಿಚರ್ಡ್‌ಸನ್ ಹೇಳುತ್ತಾರೆ. ಮೊದಲಿಗೆ ಇವರನ್ನು ಕಾರ್ ನಿಕೋಬಾರೀಸ್ ಎಂದು ಕರೆದವರು ಇವರೇ. ನಿಕಿ ಎಡ್ವಿನ್ ಮೋಸಸ್ ಮತ್ತು ಹೆನ್ರಿ ಲಾವರೆನ್ಸ್ ಕೂಡ ನಿಕೋಬಾರ್ ಸಮಾಜದ ಏಳಿಗೆಗೆ ದುಡಿದವರು. ಒಟ್ಟು ಹನ್ನೆರಡು ದ್ವೀಪಗಳಲ್ಲಿ ಇವರು ವಾಸಿಸುತ್ತಿದ್ದಾರೆ ಎಂದು ತಿಳಿದುಬರುತ್ತದೆ.

೩) ಬರ್ಮಾಕರೆನ್ಸ್ :

ಅಂಡಮಾನ್-ನಿಕೋಬಾರ್ ದ್ವೀಪಗಳಲ್ಲಿರುವ ಕರೆನ್ಸ್ ಮೂಲನಿವಾಸಿಗಳು ಮೂಲವಾಗಿ ಬರ್ಮಾ ಕಡೆಯ ಮೂಲಸ್ಥರು. ಮಂಗೋಲಾಯ್ಡ್ ಮೂಲದ ಬುಡಕಟ್ಟು ಜನರಲ್ಲಿ ಮುಖ್ಯವಾಗಿ ಮೂರು ಗುಂಪುಗಳಿದ್ದು ಅವುಗಳಲ್ಲಿ ಕರೆನ್ಸ್ ಒಂದು ಗುಂಪು. ಇವರಲ್ಲಿ ಮತ್ತೆ ಹನ್ನೊಂದು ಕರೆನ್ಸ್ ಉಪಬುಡಕಟ್ಟು ಜನಾಂಗಗಳು ಇರುವುದಾಗಿ ತಿಳಿದುಬರುತ್ತದೆ. ಇವರು ಶತ್ರುಗಳ ರುಂಡಗಳನ್ನು ಬೇಟೆಯಾಡುವ ಹವ್ಯಾಸದಲ್ಲಿ ಇತ್ತೀಚಿನವರೆಗೂ ತೊಡಗಿಕೊಂಡಿದ್ದರು ಎಂದು ತಿಳಿದುಬರುತ್ತದೆ.

ಸುಮಾರು ೧೯೫೦ರವರೆಗೂ ಈಶಾನ್ಯ ಭಾರತದ ಬರ್ಮಾ-ನಾಗಾಲ್ಯಾಂಡಿನ ಹಳ್ಳಿಗಳಲ್ಲಿ ಶತ್ರುಗಳ ರುಂಡಗಳನ್ನು ಬೇಟೆಯಾಡುವ ಹವ್ಯಾಸ ನಡೆಯುತ್ತಲೇ ಇತ್ತು. ಮಾನವನ ಹುಟ್ಟು ಕ್ರೂರ ಎನ್ನುವಷ್ಟು ಮೊದಲಿನಿಂದಲೂ ಈ ಬೇಟೆ ನಡೆಯುತ್ತಿದೆ. ಪ್ರಪಂಚದ ಮೂಲೆ ಮೂಲೆಗಳಲ್ಲಿ ಅದರಲ್ಲೂ ಆದಿವಾಸಿಗಳಲ್ಲಿ ತಲೆಗಳ ಬೇಟೆ ಬಳಕೆಯಲ್ಲಿದೆ. ಆಫ್ರಿಕಾ, ಅಮೆರಿಕಾ, ಇಂಡೋನೇಷ್ಯಾ (ನಾಗಾ ಮೂಲದವರು) ರಿಜಿಸ್ಥಾನ (ಈಗ ಪಾಕಿಸ್ಥಾನದಲ್ಲಿದೆ)ದಲ್ಲೂ ಈ ಬೇಟೆ ಕದ್ದುಮುಚ್ಚಿ ಬಳಕೆಯಲ್ಲಿದೆ ಎಂದು ಹೇಳಲಾಗುತ್ತದೆ. ನಾಗಾಲ್ಯಾಂಡಿನ ಮೋನ್, ಮೊಖಕ್‌ಚುಂಗ್ ಜಿಲ್ಲೆಗಳ ಹಲವು ಬುಡಕಟ್ಟು ನಾಗಾಗಳು ಇದನ್ನು ೧೯೫೦ರವರೆಗೂ ನಡೆಸಿಕೊಂಡು ಬಂದಿದ್ದರು. ಎರಡನೇ ವಿಶ್ವ ಮಹಾಯುದ್ಧ ನಡೆಯುವವರೆಗೂ ಸರಿಯಾದ ಒಂದು ರಸ್ತೆ ಕೂಡ ಇಲ್ಲದೆ, ನಾಗರಿಕತೆಯ ಗಾಳಿಯೂ ಸೋಂಕದಿದ್ದ ಇವರು ಕಾಡಿನಲ್ಲಿ ಪ್ರಾಣಿಗಳಂತೆ ಸ್ವಚ್ಛಂದವಾಗಿ ತಮ್ಮ ಜೀವನ ನಡೆಸಿದ್ದರು. ಇವರ ಮೂಢನಂಬಿಕೆಗಳ ಗೂಡು ಕೆದಕಿದಷ್ಟೂ ನಿಗೂಢ. ಈ ಬಗ್ಗೆ ಚರಿತ್ರೆ ಕೂಡ ತನ್ನ ತುಟಿಗಳನ್ನು ಅಷ್ಟು ಸಲೀಸಾಗಿ ಬಿಚ್ಚುವುದಿಲ್ಲ. ನಾಗರಿಕತೆ ಬೆಳೆದಷ್ಟು ಮೂಢನಂಬಿಕೆಗಳು ಮಾಯವಾಗುತ್ತವೆ. ಆದರೆ ನಾಗಾಗಳಲ್ಲಿ ಹಾಗಾಗಲಿಲ್ಲ. ಕಾಡುಗಳಲ್ಲೇ ಜೀವನ ನಡೆಸುತ್ತಿದ್ದ ಈ ಇಂಡೋ-ಮಂಗೋಲಾಯ್ಡ್ ಆದಿವಾಸಿ ಪಂಗಡಗಳು ತೀರ ಇತ್ತೀಚಿನವರೆಗೂ ನಾಗರಿಕತೆಯಿಂದ ದೂರವಾಗಿಯೇ ಉಳಿದಿದ್ದವು.

"ಮನುಷ್ಯನ ಆತ್ಮ ಹಣೆಯ ಕೆಳಗೆ ತಲೆಯಲ್ಲಿರುತ್ತದೆ. ಮನುಷ್ಯನ ಎಲ್ಲ ಶಕ್ತಿ ಯುಕ್ತಿ ತಲೆಯಲ್ಲಿ ಅಡಗಿರುತ್ತದೆ. ಜೊತೆಗೆ ಅದು ಒಬ್ಬರಿಂದ ಇನ್ನೊಬ್ಬರಿಗೆ ಸೇರಿಕೊಳ್ಳುತ್ತದೆ. ಇದೇ ಆತ್ಮ ದೇಹದ ಎಲ್ಲಾ ಕೆಲಸಗಳನ್ನು ದಂಡಿಸುತ್ತದೆ." ಇದು ಕರೆನ್ಸ್ ನಾಗಾಗಳ ನಂಬಿಕೆ. ಒಂದು ಜನಾಂಗದ ಇಡೀ ಮೊತ್ತದ ಆತ್ಮಶಕ್ತಿ ಆ ಪಂಗಡದ ಅಭಿವೃದ್ಧಿಯಾಗುತ್ತದೆ. ಪ್ರಕೃತಿ ವಿಕೋಪಗಳಾದ ಭೂಕಂಪ, ನೆರೆ, ಗುಡುಗು-ಸಿಡಿಲು, ಬೆಂಕಿ, ಸಾಂಕ್ರಾಮಿಕ ರೋಗಗಳಿಂದ ಬೆಳೆ ನಾಶವಾದರೆ ತಮ್ಮ ಆತ್ಮಶಕ್ತಿ ಕಡಿಮೆಯಾಗಿದೆ ಎಂದೇ ಅವರ ನಂಬಿಕೆ. ಇದನ್ನು ಸರಿದೂಗಿಸಿಕೊಳ್ಳಬೇಕಾದರೆ ಬೇರೆ ಬುಡಕಟ್ಟಿನ ಜನ ತಮ್ಮ ಜನಾಂಗದವರಲ್ಲದ ತಲೆಗಳನ್ನು ಕಡಿದು ತರಬೇಕು.

ಕೆಲವು ಶತಮಾನಗಳ ಹಿಂದೆ ಈ ಆದಿವಾಸಿ ಪಂಗಡಗಳು ತಲೆಗಳನ್ನು ಬೇಟೆಯಾಡುವುದರ ಜೊತೆಗೆ ಮನುಷ್ಯರನ್ನು ಭಕ್ಷಿಸುತ್ತಿದ್ದರು. ತಮ್ಮ ವಂಶದ ಅಭಿವೃದ್ಧಿಗಾಗಿ ಮತ್ತು ಆರೋಗ್ಯವುಳ್ಳ ದಷ್ಟಪುಷ್ಟ ಮಕ್ಕಳನ್ನು ಪಡೆಯುವುದಕ್ಕಾಗಿ ಶತ್ರುಗಳ ಮಾಂಸ ಮತ್ತು ರಕ್ತವನ್ನು ತಮ್ಮಲ್ಲಿ ಸೇರಿಸಿಕೊಂಡರೆ ಆ ಶತ್ರುಗಳ ಶಕ್ತಿಯೂ ತಮ್ಮೊಂದಿಗೆ ಸೇರಿಕೊಳ್ಳುತ್ತದೆ ಎಂದು ನಂಬಿದ್ದರು. ಕರೆನ್ಸ್ ಬರ್ಮಾ ನಾಗಾಗಳು ನಂಬಿದಂತೆ ಮನುಷ್ಯರ ತಲೆಯಲ್ಲಿ ಶಕ್ತಿಯುತ ದ್ರವವೊಂದಿದ್ದು ಅದನ್ನು ನೆಲದಲ್ಲಿ ಚುಮುಕಿಸಿದರೆ ಮಣ್ಣು ಫಲವತ್ತಾಗಿ, ಬೆಳೆ ಹೆಚ್ಚಾಗಿ ಬೆಳೆಯುತ್ತದೆ. ಅಂತಹ ಬೆಳೆ ತಿಂದ ಪ್ರಾಣಿಗಳು ದಷ್ಟ ಪುಷ್ಟವಾಗುತ್ತವೆ. ಇಂತಹ ಬೆಳೆ ಮತ್ತು ಪ್ರಾಣಿಗಳನ್ನು ತಿನ್ನುವ ಮನುಷ್ಯರ ವಂಶಾಭಿವೃದ್ಧಿ, ಸಾಮರ್ಥ್ಯ ಹೆಚ್ಚುತ್ತದೆಯೆಂದು ನಂಬಿದ್ದರು. ಅದರಲ್ಲೂ ಯುವತಿಯರ ರಕ್ತ ಮಾಂಸ ಎಂದರೆ ಅಚ್ಚುಮೆಚ್ಚು. ಇವರಿಂದಲೇ ತಾನೇ ವಂಶ ಅಭಿವೃದ್ಧಿಯಾಗುವುದು. 'ದೆವ್ವಗಳೆಂದರೆ ಪ್ರಾಣಬಿಡುವ ಈ ಆದಿವಾಸಿ ಪಂಗಡಗಳು ಸತ್ತವನು ಸಾಯಿಸಿದವನ ಸೇವಕನಾಗಿ ಬರುತ್ತಾನೆಂದು ನಂಬುತ್ತಾರೆ. ಆದುದರಿಂದ ಕನಿಷ್ಠ ಒಬ್ಬ ಮನುಷ್ಯ ಒಬ್ಬ ಮನುಷ್ಯನನ್ನಾದರೂ ಸಾಯಿಸಿದರೆ, ಸತ್ತ ಮೇಲೆ ಒಳ್ಳೆ ಸೇವೆ ಮಾಡಲು ಸೇವಕ ದೊರಕುತ್ತಾನೆಂಬುದು ಅವರ ಪ್ರತೀತಿ' ಅವರಲ್ಲಿ ಜಾರಿಯಲ್ಲಿದೆ

ತಲೆ ಬೇಟೆಯಾಡಲು ಇನ್ನೂ ಕೆಲವು ಕಾರಣಗಳಿವೆ. ಕೆಲವೊಂದು ಸಲ ಎರಡು ಹಳ್ಳಿಗಳು ಶಾಂತಿ ಕೋರಿದ್ದೆಯಾದರೆ; ಯಾವ ಹಳ್ಳಿ ಎಷ್ಟು ಜಾಸ್ತಿ ತಲೆಗಳನ್ನು ತೆಗೆದಿರುತ್ತೊ ಅಷ್ಟು ತಲೆಗಳನ್ನು ಸೇವಕರ ಮೂಲಕ ಇನ್ನೊಂದು ಹಳ್ಳಿ ಕೊಡುತ್ತದೆ. ಕೊಟ್ಟ ಸೇವಕರನ್ನು ತಲೆಗಳ ಬೇಟೆ ನಡೆದ ಸ್ಥಳದಲ್ಲೆ ಸಾಯಿಸಿ ಹಳ್ಳಿಗೆ ವಿಜಯದಿಂದ ಮರಳುತ್ತಾರೆ. ಸಾಂಕ್ರಾಮಿಕ ರೋಗಗಳು ಬಂದಾಗ ತಲೆಗಳನ್ನು ಊರಿಗೆ ತಂದರೆ ರೋಗ ನಿವಾರಣೆಯಾಗುತ್ತದೆಯೆಂದು ಬೇಟೆಯಾಡುತ್ತಾರೆ. ಬಿತ್ತನೆ ಮುನ್ನ ಸೇವಕರನ್ನು ಬಲಿಕೊಡುತ್ತಾರೆ. ಹಳ್ಳಿಯ ಮುಖ್ಯಸ್ಥನ ಮಗನಿಗೆ ಅಧಿಕಾರ ವಹಿಸಿಕೊಡುವ ಸಮಯದಲ್ಲೂ ಸೇವಕರನ್ನು ತಂದು ಕಟ್ಟಿ ಹಾಕಿ ಯುವ ಮುಖ್ಯಸ್ಥನ ಕೈಯಲ್ಲಿ ಕಡಿಸಿ, ಸಣ್ಣಸಣ್ಣ ತುಂಡುಗಳನ್ನು ಮಾಡಿ ನೆರೆದ ಎಲ್ಲರಿಗೂ ಹಂಚುವ ಪದ್ಧತಿಯೂ ಉಂಟು.

ಮಂಗೋಲಿಯ ಮೂಲಸ್ಥರಾದ ಇವರು ಮೊದಲಿಗೆ ಸುಮಾರು ಕ್ರಿ.ಪೂ. ೨೦೧೭ರ ಸುಮಾರಿಗೆ ಪೂರ್ವ ತುರ್ಕಿಸ್ಥಾನ ಮತ್ತು ಚೀನಾ ತುರ್ಕಿಸ್ಥಾನದ ಕಡೆಗೆ ಬಂದರು. ಇಲ್ಲಿನ ಚೀನಾ ರಾಜನಾದ ಶ ಹಿಸಸ್ ಇವರನ್ನು ನಿಕೃಷ್ಟವಾಗಿ ನಡೆಸಿಕೊಂಡು ಆಳುಗಳಾಗಿ ದುಡಿಸಿಕೊಂಡಿದ್ದ ಕಾರಣ ಅಲ್ಲಿಂದ ಪಾರಾಗಲು ಕರೆನ್ಸ್ ಜನರು ಕ್ರಿ.ಪೂ. ೧೨೨೮ರ ಸುಮಾರಿಗೆ ಬರ್ಮಾ ಕಡೆ ವಲಸೆ ಬಂದರು. ಅಲ್ಲಿಂದ ನಿಧಾನವಾಗಿ ಪೂರ್ವ ಬರ್ಮಾ ನದಿ ಮುಖಜದಲ್ಲಿ ಇವರು ನೆಲೆ ನಿಂತು ಸ್ಥಳೀಯರಿಂದಲೂ ಪ್ರತ್ಯೇಕವಾಗಿ ಉಳಿದುಕೊಂಡರು.

೧೯೫೨ರ ಸುಮಾರಿಗೆ ಅಂಡಮಾನ್ ಕಾಡುಗಳಲ್ಲಿ ವ್ಯವಸಾಯ ಕೆಲಸ ಮಾಡಲು ಬಂದ ಬರ್ಮಾದ ಕರೆನ್ಸ್ ಕುಟುಂಬಗಳು ಇಲ್ಲಿ ನೆಲೆ ನಿಂತವು. ಆಗ ಬರ್ಮಾದಲ್ಲಿ ಬ್ರಿಟಿಷರ ಆಡಳಿತ ಇದ್ದು ಇವರನ್ನು ಕರೆತರಲಾಯಿತು. ಪ್ರಸ್ತುತ ಸುಮಾರು ೨೦೦೦ ಜನರು ಅಂಡಮಾನ್‌ನ ದ್ವೀಪಗಳಲ್ಲಿ ನೆಲೆಸಿದ್ದಾರೆ. ಮುಖ್ಯವಾಗಿ ಭತ್ತ ಬೆಳೆಯುವ ಇವರು ಸಮುದ್ರದಲ್ಲಿ ಮೀನು ಹಿಡಿಯುತ್ತ ಕಾಡಿನಲ್ಲಿ 'ಜೇನಹನಿ' ಸಂಗ್ರಹಿಸುತ್ತಾರೆ. ಇವರು ಈ ಪ್ರದೇಶಗಳಿಗೆ ಬಂದು ಎಂಬತ್ತೈದು ವರ್ಷಗಳಾದರೂ ಆಧುನಿಕ ತಂತ್ರಜ್ಞಾನ, ವಿದ್ಯೆ ಅವರನ್ನು ಮುಟ್ಟಲಿಲ್ಲ. ತಮ್ಮ ಹಳೆ ಪದ್ಧತಿಗಳೊಂದಿಗೆ ಬುಡಕಟ್ಟು ವಾದ್ಯಗಳ ನೃತ್ಯ, ಆಚಾರ-ವಿಚಾರಗಳನ್ನು ಹಾಗೇ ಉಳಿಸಿಕೊಂಡು ಬಂದಿದ್ದಾರೆ ಎಂದು ತಿಳಿದುಬರುತ್ತದೆ.

**ಈ) ಸಾಮಾಜಿಕ ನೆಲೆ:**

ಆರಂಭದಲ್ಲಿ ಈ ದ್ವೀಪವನ್ನು ಪಾಶ್ಚಿಮಾತ್ಯರು ತಮ್ಮ ನೆಲೆಯಾಗಿಸಿಕೊಂಡಿದ್ದರು. ಇಲ್ಲಿ ೧೩ನೇ ಶತಮಾನದಲ್ಲಿ ಕೆಲವು ಪ್ರವಾಸಿಗಳು ಈ ಪ್ರದೇಶಕ್ಕೆ ಭೇಟಿಕೊಟ್ಟಿದ್ದರು ಎಂದ ವಿಚಾರ ಹಾಗೂ ಇಲ್ಲಿನ ಬೆಲೆಬಾಳುವ ವಸ್ತುಗಳನ್ನು ಕೊಂಡುಕೊಳ್ಳದೆ ವ್ಯಾಪಾರಿ ಮನೋಭಾವನ್ನು ಹೊಂದಿದ. ಪೋರ್ಚುಗೀಸರು, ಡೇಸರು ಈ ಪ್ರದೇಶದೊಂದಿಗೆ ವ್ಯಾಪಾರ ಸಂಬಂಧವನ್ನು ಇರಿಸಿಕೊಂಡಿದ್ದರು. ಆದರೆ ಇವರೊಂದಿಗೆ ಯಾರ ರಾಜಮನೆತನಗಳು ವ್ಯಾಪಾರ ಸಂಬಂಧವನ್ನು ಹೊಂದಿದ್ದರು ಎಂಬುದರ ಬಗ್ಗೆ ಯಾವುದೇ ಬಗೆಯ ಸ್ಪಷ್ಟ ಹಾಗೂ ನಿಖರವಾದ ಮಾಹಿತಿ ದುರ್ಲಭವಾಗಿದೆ. ೧೯ನೇ ಶತಮಾನದಲ್ಲಿ ಬ್ರಿಟಿಷರ ವಶವಾದ ಈ ಪ್ರದೇಶವು ಇಲ್ಲಿನ ಮೂಲನಿವಾಸಿಗಳಿಂದ ಹಲವು ಬಗೆಯ ವಿರೋಧವನ್ನು ಇವರು ಸಮುದಾಯ ಜನರನ್ನು ಮೈಲಿಗೆ ದೃಷ್ಟಿಯಿಂದ ಹಾಗೂ ಇವರ ಜೊತೆ ಸೇರಿದರೆ ತಮ್ಮ ಆಚಾರ ವಿಚಾರ, ಸಂಸ್ಕೃತಿಗೆ ಪೆಟ್ಟು ಹಾಗೂ ತಮ್ಮ ಜೀವಕ್ಕೆ ಪೆಟ್ಟು ಎಂಬ ಆತಂಕ ಇವರಲ್ಲಿ ಜೊತೆಗೆ ಸ್ವತಂತ್ರತೆಯ ಸಿದ್ಧಾಂತವು ಇಲ್ಲಿ ಮುಖ್ಯವಾಗುತ್ತದೆ. ೧೮೯೬ರಲ್ಲಿ ಸೆಲ್ಯೂಲಾರ್ ಜೈಲು ನಿರ್ಮಾಣ. ೨ನೇ ಮಹಾಯುದ್ಧದ ಸಂದರ್ಭದಲ್ಲಿ ಜಪಾನಿಯರು ಈ ಪ್ರದೇಶವನ್ನು ಆಕ್ರಮಿಸಿ ತಮ್ಮ ಪ್ರಭುತ್ವವನ್ನು ಈ ಪ್ರದೇಶದ ಮೇಲೆ ಹೊಂದಿದ್ದರು. ಅಂದರೆ ಬೇರೆ ದೇಶಗಳ ಆಕ್ರಮಣವು ಕಾಲದಿಂದ ಕಾಲಕ್ಕೆ ಈ ಪ್ರದೇಶದ ಮೇಲೆ ಆಗುತ್ತಾ ಇಲ್ಲಿನ ಮೂಲ ನಿವಾಸಿಗಳಿಗೆ ಪೆಟ್ಟು ಬಿದ್ದು ಅವರ ಸಾಂಸ್ಕೃತಿಕ ನೆಲೆಗಳೇ ಪಲ್ಲಟಗೊಳ್ಳುತ್ತಿವೆ.

ಅಂಡಮಾನ್ ಜನರಲ್ಲಿ ಮುಖ್ಯವಾಗಿ ೨ ರೀತಿಯ ಸಂಸ್ಕೃತಿಗಳಿವೆ. ನೆಗ್ರಿಟೋ ಸಂಸ್ಕೃತಿ ಮತ್ತು ಮಂಗೋಲಾಯ್ಡ್ ನಿಕೋಬಾರಿಗಳು ಮತ್ತು ಶೋಪೆನರು ಸಂಸ್ಕೃತಿ. ಈ ಎಲ್ಲಾ ಸಮುದಾಯವರು ತಮ್ಮದೇ ಆದ ರೀತಿ, ನೀತಿ, ರೂಢಿ ಸಂಪ್ರದಾಯ, ಆಚರಣೆಗಳನ್ನು ಪ್ರತ್ಯೇಕವಾಗಿ ಹೊಂದಿದ್ದು ತಮ್ಮದೇ ಬುಡಕಟ್ಟಿನ ಭಾಷೆಯನ್ನು ಇವರು ಮಾತನಾಡುತ್ತಾರೆ.

ಅವರ ವಸ್ತ್ರದ ವಿಚಾರದಲ್ಲಿಯು ಸಹ ಯಾವುದೇ ಬದಲಾವಣೆಯು ಕಂಡುಬರುವುದಿಲ್ಲ. ಅವರ ದೇಹಾಕೃತಿಯಲ್ಲಿಯು ಸಹ ಅಷ್ಟೊಂದು ಬದಲಾವಣೆಯೇನು ಇಲ್ಲ.

ಎಲೆ ಅಡಿಕೆ, ಹೊಗೆಸೊಪ್ಪಿನ ರುಚಿಗೂ ಬಿದ್ದಿದ್ದಾರೆ. ಮೊದಲು ಜೇನುಗೂಡಿನಾಕಾರದ ಸಮುದಾಯ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಒಂದು ಗುಂಪಿನ ಎಲ್ಲ ಸದಸ್ಯರೂ ಒಟ್ಟಿಗೆ ಸಾಮೂಹಿಕವಾಗಿ ವಾಸಿಸುತ್ತಿದ್ದರು. ಹೀಗೆ ವಾಸಿಸುವ ಗುಂಪಿನಲ್ಲಿ ತಂದೆ-ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ ಮತ್ತು ಅವರ ಮಕ್ಕಳು. ಓಂಗೆಗಳು ತಮ್ಮ ಗುಂಪಿನೊಳಗೇ ಮದುವೆಯಾಗುತ್ತಾರೆ. ಮದುವೆ ವಯಸ್ಸು ಮುಖ್ಯವಲ್ಲ. ಶಾಂತ್ರಿಪ್ರಿಯರಾಗಿ ಬಾಳುತ್ತಾರೆ. ತಾಯ್ತನದ ತುಡಿತ ಹೆಚ್ಚು. ತುಂಬು ಬಸಿರಿಯರು ಕಾಡಿನೊಳಗೆ ಪ್ರವೇಶಿಸಬಾರದೆಂಮ ಕಟ್ಟಳೆ. ದುಷ್ಟ ಶಕ್ತಿಗಳ ಪ್ರವಾಭಬೀಳದಿರಲೆಂಬುದೇ ಈ ಕಟ್ಟಳೆಯ ಹಿಂದಿನ ಕಾಳಜಿ. ಅವರ ನಂಬಿಕೆಯಂತೆ 'ಓಂಕೋ ಚಾಕ್ವೆ' ಆತ್ಮ ಲಿಟಲ್ ಅಂಡಮಾನಿನ ಆಕಾಶದಲ್ಲಿ ಇರುವುದು. ಹಂದಿಮಾಂಸ ಜೇನು, ಆಮೆ ಇತ್ಯಾದಿ ಆಹಾರ ಪದಾರ್ಥಗಳ ಮೂಲಕ ಬಸಿರಿ ಹೆಂಗಸಿನ ಗರ್ಭ ಸೇರುತ್ತದೆ. ಈ ಆತ್ಮವೇ ಮಗುವಿನ ಆತ್ಮವಾಗುತ್ತದೆ! ಪ್ರಸೂತಿಗೆಂದೇ ನಿರ್ಮಿಸಿ ಕೊರೇಲ್ ಎಂಬ ಗುಡಿಸಲಲ್ಲಿ ಮಗುವಿನ ಜನನವಾಗುತ್ತದೆ. ಬಾಣಂತಿಯ ಗರ್ಭಕೋಶದ ಬಗ್ಗೆ, ಆಹಾರದ ಬಗ್ಗೆ ಬಹಳ ಮುಜುವರ್ಜಿ ವಹಿಸಲಾಗುತ್ತದೆ. ಮದುವೆ, ಸೀಮಂತ, ನಾಮಕರಣ ಇತ್ಯಾದಿ ವಿಧಿಗಳೆಲ್ಲವೂ ಬುಡಕಟ್ಟಿನ ಸಮಾಜದಲ್ಲಿ ಪ್ರಚಲಿತ ಪದ್ಧತಿಯಂತೆಯೇ ನಡೆಯುತ್ತದೆ.

ಇವು ನೆಗ್ರಿಟೋ ಜನಾಂಗದ ಜನಪದೀಯ ವಾದ ಪದ್ಧತಿ ಆಚರಣೆ. ಹಾಗೂ ಅವರ ಕೌಟುಂಬಿಕ ವಿಚಾರಗಳ ಬಗೆಗೆ ಮಾಹಿತಿಯನ್ನು ನೀಡುತ್ತದೆ. ಸೆಂಟಿನೆಲಿಗಳು ಇಲ್ಲಿನ ಮೂಲನಿವಾಸಿಗಳಾಗಿದ್ದು. ಸೆಂಟಿನಲಿ ಭಾಷೆಯನ್ನು ಮಾತನಾಡುವ ಈ ಜನಾಂಗ ಹೊರಜಗತ್ತಿನೊಂದಿಗೆ ಯಾವುದೇ ಸಂಪರ್ಕವನ್ನು ಹೊಂದದೆ. ಇರುವ ಜನಾಂಗವಾಗಿದೆ. ಇವರು ಮರದ ತೊಗಟೆಯಿಂದ ಮಾಡಿದ ಆಭರಣಗಳು ಮತ್ತು ತಲೆಗೆ ಮುಂಡಾಸಿನಂತೆ ಒಂದು ತೊಗಟೆಯ ತುಂಡನ್ನು ಸುತ್ತಿಕೊಂಡಿರುತ್ತಾರೆ. ನಿಗ್ರೋ ಜನಾಂಗದ ಎಲ್ಲ ಲಕ್ಷಣಗಳನ್ನೂ ಹೊಂದಿದ್ದಾರೆ. ಗುಂಗುರು ಗುಂಗುರು ಕೂದಲು. ಕಪ್ಪುಬಣ್ಣದ ಜನ. ಮಧ್ಯಮ ಗಾತ್ರದ ಎತ್ತರ. ಮಾಂಸ, ಕಾಡುಕೋಣ, ಆಮೆ, ಮೀನು, ಸಿಗಡಿ, ತೆಂಗಿನಕಾಯಿ, ಬಾಳೆ ಹಣ್ಣು ಅವರ ಆಹಾರ, ಆಹಾರದ ಹುಡುಕಾಟದಲ್ಲಿ ಅಲೆದಾಡುವ ಜನ. ಬೇರೆ ಬೇರೆ ಬುಡಕಟ್ಟಿನ ಜನಕ್ಕಿಂತ ಹೆಚ್ಚಾಗಿ ಜನಸಂಪರ್ಕದಿಂದ ದೂರವಿರುತ್ತಾರೆ. ಅನ್ಯರ ಜೊತೆ ಬೆರೆಯಲು ದ್ವೇಷಿಸುತ್ತಾರೆ. ಟೊಳ್ಳೆನಿಸಿದ ಮರದ ದಿಮ್ಮಿಗಳಿಂದ ದೋಣಿಗಳನ್ನು ನಿರ್ಮಿಸಿಕೊಂಡು ಮೀನು ಹಿಡಿಯಲು ಹೊರಡುತ್ತಾರೆ. ಹೊರ ಜನಾಂಗಗಳೊಡನೆ ಬೆರೆಯುವುದೇ ಇಲ್ಲ. ಒಂದು ಸಣ್ಣ ಗುಂಪಾಗಿದ್ದೂ ಅಂಡಮಾನನ್ನು ಶತ್ರುಗಳಿಂದ ಉಳಿಸಿಕೊಂಡು ಬಂದಿದ್ದಾರೆ. ಸಮುದ್ರದಲ್ಲಿ ಹೊರಗಿನವರು ಯಾರೇ ಕಾಣಿಸಲಿ

ತಮ್ಮ ತೀಕ್ಷ್ಣವಾದ ವಿಷಪೂರಿತ ಬಾಣಗಳಿಂದ ಹೊಡೆದು ಅಟ್ಟಿಬಿಡುತ್ತಾರೆ. ಇರುವುದರಲ್ಲಿ ಈ ಸೆಂಟಿನಲಿಗಳೇ ಮೂಲನಿವಾಸಿ ಜನಾಂಗದ ಕಟ್ಟ ಕಡೆಯ ಅವಶೇಷ. ಅವರನ್ನು ಅಂಡಮಾನಿನ ಮುಖ್ಯ ಪ್ರವಾಹದೊಳಕ್ಕೆ ಸೆಳೆದುಕೊಳ್ಳುವ ಹಲವು ಪ್ರಯತ್ನಗಳು ನಡೆಯುತ್ತಿರುವೆಯಾದರೂ ಇವರು ಮಾತ್ರ ಸೊಪ್ಪು ಹಾಕಿದಂತಿಲ್ಲ.

ತಮ್ಮ ಸಂಸ್ಕೃತಿಯನ್ನು ಬೇರೆ ಜನಾಂಗದ ಜನರಿಗೆ ತೋರ್ಪಡಿಸಿಕೊಳ್ಳದೇ ಹೊರ ಜನರನ್ನು ಕಂಡರೆ ಅವರನ್ನು ವಿಷಪೂರಿತವಾದ ಬಾಣಗಳಿಂದ ಅವರನ್ನು ಕೊಲ್ಲುವ ಸಂಪ್ರದಾಯವನ್ನು ಹೊಂದಿದ್ದು ನಾಗರೀಕ ಸಮುದಾಯಕ್ಕೆ ತಮ್ಮ ಸೇರ್ಪಡೆಯ ವಿರೋಧವನ್ನು ವ್ಯಕ್ತಪಡಿಸುತ್ತಾ ತಮ್ಮ ಸಂಸ್ಕೃತಿಯ ರಕ್ಷರರಾಗಿ ಹಾಗೂ ತಮ್ಮ ಸ್ವಂತಂತ್ರ್ಯದ ರಕ್ಷಣೆಗೆ ನಿಂತಿರುತ್ತಾರೆ. ಮೊದಲು ಇಲ್ಲಿನ ಬುಡಕಟ್ಟು ಜನಾಂಗದವರ ಆರಾಧ್ಯದೈವ ಪ್ರಕೃತಿಯಾಗಿತ್ತು. ಆದರೆ ಬೇರೆ ಜನರ ಸಂಪರ್ಕದಿಂದಾಗಿ ತಮ್ಮ ಮೂಲದೈವವನ್ನು ಮರೆತು ವೈಷ್ಣವ, ಶೈವ ಮತ್ತು ಬೇರೆ ಬೇರೆ ಧರ್ಮದ ದೇವತೆಗಳನ್ನು ಪೂಜಿಸುವ ಸಂಪ್ರದಾಯವನು ಹೊಂದಿದ್ದಾರೆ. ನಾಗರೀಕ ಸಮುದಾಯದವರ ಸಂಪರ್ಕದಿಂದಾಗಿ ಇವರ ಭಾಷಿಕ ಬದಲಾವಣೆಯು ಸಹ ಆಗಿರುವುದನ್ನು ಕಾಣಬಹುದಾಗಿದೆ. ತೆಲಗು, ಕನ್ನಡ, ತಮಿಳು, ಮಲೆಯಾಳಂ, ಬಂಗಾಲಿ, ಹಿಂದಿ ಮುಂತಾದ ಭಾಷೆಗಳನು ಮಾತನಾಡವ ಅಂಡಮಾನಿಗಳು ಹಿಂದಿ ಭಾಷೆಯನ್ನು ತಮ್ಮ ವ್ಯವಹಾರ ಭಾಷೆಯನ್ನಾಗಿ ಹೊಂದಿದ್ದಾರೆ. ಸಾಂಸ್ಕೃತಿಕವಾದ ಹಲವು ಪಲ್ಲಟಗಳ ಹಾಗೂ ವಸಾಹತುಶಾಹಿ ಸ್ಥಾಪನೆಯಿಂದಾಗಿ ಇಲ್ಲಿ ಯಾವುದೇ ಮತ ಭೇದಗಳಲ್ಲಿದೆ ತಮಲ್ಲಿ ಸೌಹಾರ್ದತೆಯಿಂದ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ವಸಾಹತುಶಾಹಿಯಿಂದ ಈಡೀ ಅಂಡಮಾನಿನ ಮೂಲನಿವಾಸಿಗಳ ಮೇಲೆ ಜೀರಿರುವ ಪರಿಣಾಮ ಅಷ್ಟಿಷ್ಟಲ್ಲ. ಅಂದರೆ ನಾಗರೀಕತೆ ಎಂಬುದು ಮುಗ್ಧವ್ಯಕ್ತಿಗಳನ್ನು ತನ್ನೆಡೆಗೆ ಆಪೋಶನವನ್ನು ತೆಗೆದುಕೊಳ್ಳುತ್ತದೆ. ತಮ್ಮ ಸ್ವಂತಿಕೆಯ ಅಂಶಗಳು ತಮಗೆ ಗುರುತೆ ಸಿಗದ ರೀತಿಯಲ್ಲಿ ಮರೆತು ಮಾಯವಾಗುತ್ತವೆ. ಎಂಬುದರ ನಿದರ್ಶನದೋಪಾದಿಯಲ್ಲಿ ಇಲ್ಲಿನ ಮೂಲನಿವಾಸಿಗಳ ಬದುಕು.

ವಸಾಹತುಶಾಹಿ ಪ್ರಕ್ರಿಯೆ ಆರಂಭವಾಗುವುದಕ್ಕಿಂತ ಮೊದಲು ಇಲ್ಲಿನ ಜನರು ತಮ್ಮ ಜೀವನ ನಡೆಸುವುದಕ್ಕಾಗಿ ಬೇಟೆ ಮತ್ತು ಕಾಡಿನ ಉತ್ಪಾದನೆಗಳನ್ನು ಸಂಗ್ರಹಿಸಿ ಅಲ್ಲಿಯೇ ಕೃಷಿಯಲ್ಲಿ ಕೆಲವರು ತೊಡಗಿದ್ದಾರೆ. ಜೊತೆಗೆ ಸಹಕಾರಿ ಚಳುವಳಿ ಇಲ್ಲಿ ಹೆಚ್ಚು ಜನಪ್ರಿಯತೆಯನ್ನು ಗಳಿಸಿಕೊಂಡಿದೆ. ಹೈನುಗಾರಿಕೆ, ಕುರಿ, ಹಂದಿ, ಸಾಕಣೆ, ಮೀನುಗಾರಿಕೆ ಇಲ್ಲಿನ ಉಳಿದ ಚಟುವಟಿಕೆಗಳಾಗಿದೆ. ಇಲ್ಲಿನ ಪ್ರಮುಖ ಕೈಗಾರಿಕೆ ಎಂದರೆ ಟಿಂಬರ್‌ವರ್ಕ್ಸ್ ಇಲ್ಲಿನ ಶೇಕಡ ೮೬ರಷ್ಟು ಕಾಡು ಈ ಟಿಂಬರ್‌ವರ್ಕ್ಸ್‌ಗೆ ಒಳಪಟ್ಟಿದೆ.

# ಅಧ್ಯಾಯ – ೦೫

## ಗತ ಮತ್ತು ವರ್ತಮಾನದ ಮುಖಾಮುಖಿ

ಗತಕಾಲದ ಮಾನವನ ಜೀವನ ಕ್ರಮಣಿಕೆಯನ್ನು ತಿಳಿಸುವುದೇ ಇತಿಹಾಸ. ಮಾನವ ಜೀವಿಯ ಹುಟ್ಟು, ಬೆಳವಣಿಗೆ, ಆಚಾರ–ವಿಚಾರ, ಸಂಸ್ಕೃತಿ, ನಡಾವಳಿ, ನುಡಾವಳಿ, ಸಂಪ್ರದಾಯ, ನಂಬಿಕೆ, ಆಚರಣೆ ಇವುಗಳೇ ಇತಿಹಾಸದ ಬಿಂಬದಲ್ಲಿ ಕಾಣಸಿಗುವಂತಹವು. ಇವೆಲ್ಲವೂ ಕಾಲಘಟ್ಟವೊಂದರ ಮಾನವನ ಜೀವನಕ್ರಮದ ಸವಿಸ್ತಾರವಾದ ಚಿತ್ರಣವನ್ನು ಕೊಡುವಲ್ಲಿ ಪ್ರಮುಖಪಾತ್ರ ವಹಿಸುತ್ತವೆ. ಇತಿಹಾಸವನ್ನು ಕುರಿತಂತೆ ರಂ. ಶ್ರೀ ಮುಗುಳಿಯವರು **"ಜನಜೀವನದ ಬದುಕಿನ ಗಾಥ ನೆನಪುಗಳೇ ಇತಿಹಾಸ"** ಎಂದಿದ್ದಾರೆ.

ಸಾಹಿತ್ಯ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ನಾಡಿನ ಇತಿಹಾಸದ ಸಂದರ್ಭದಲ್ಲಿ ಸಾಹಿತ್ಯದ ಕೃತಿಗಳು ಒದಗಿಸುವಂತಹ ಪ್ರಮುಖವಾದ ಮಾಹಿತಿಗಳು ಇತಿಹಾಸದ ಕೃತಿಯಲ್ಲಿ ಉಲ್ಲೇಖವಿಲ್ಲದೇ ಇರುವ ಅನೇಕ ವಿಚಾರಗಳನ್ನು ಸಾಹಿತ್ಯ ಕೃತಿಗಳು ತಮ್ಮಲ್ಲಿ ಒಳಗೊಂಡಿರುತ್ತವೆ. ಉದಾ: ಕೃಷ್ಣದೇವರಾಯನ ಹುಟ್ಟಿನ ಬಗ್ಗೆ ಆತನ ಮಗಳಾದ ಮೋಹನಾಂಗಿ ಬರೆದಿರುವ **"ಮಾರೀಚಿ ಪರಿಣಯಂ"** ಕೃತಿಯಲ್ಲಿ ಕೃಷ್ಣದೇವರಾಯನ ಜನ್ಮದಿನವನ್ನು ಸ್ಪಷ್ಟವಾಗಿ ನಮೂದಿಸಿದ್ದಾಳೆ. ಆದರೆ ಇತಿಹಾಸದ ಕೃತಿಗಳಲ್ಲಿ ಯಾವುದೇ ಬಗೆಯ ಉಲ್ಲೇಖಗಳು ನಮಗೆ ದೊರೆಯುವುದು ದುರ್ಲಭ.

ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ರಾಜಮನೆತನದ ಕೊಡುಗೆಯು ಗಣನೀಯವಾದ ಯಾವುದೇ ಕೃತಿಯನ್ನು ನಾವು ಅಧ್ಯಯನಕ್ಕೆ ಒಳಪಡಿಸಿದಾಗ ಇತಿಹಾಸದ ಹೆಜ್ಜೆಗಳು ಆ ಕೃತಿಯಲ್ಲಿ ನೆಲೆಗೊಂಡಿರುತ್ತವೆ. ಇತಿಹಾಸ ಮತ್ತು ಸಾಹಿತ್ಯಕ ಕುರಿತ ಸಂಶೋಧನೆಯಲ್ಲಿ ಅನ್ಯಜ್ಞಾನ ಶಿಸ್ತುಗಳು ಏಕೀಭವಿಸಿ ಒಂದೇ ಬಿಂದುವಿನಲ್ಲಿ ನಿಲ್ಲುವುದು ದುಸ್ತರ. ಏಕೆಂದರೆ ಸಾಹಿತ್ಯ ಕೃತಿಗಳು ರಚಿತವಾಗುವುದು ವಾಸ್ತವಾಂಶಕ್ಕಿಂತಲೂ ಕಲ್ಪನೆಯಾಧಾರದಲ್ಲಿ ಎನ್ನುವಂತಹ ಕಾವ್ಯಮೀಮಾಂಸಕರ ನಿಲುವನ್ನು ಒಪ್ಪಿ ಮುಂದೆ ಸಾಗುವುದಾದರೆ ತೊಡಕುಗಳು ನಂತರದ ಹಂತದಲ್ಲೇ ಎದುರಾಗುತ್ತವೆ. ಅದರ ಬಗ್ಗೆ ಚಿಂತಿಸುವುದಾದರೆ ಇತಿಹಾಸವೆಂಬುದು ಸಾಪೇಕ್ಷ ಆಧಾರಗಳ ಮೇಲೆ ಹಾಗೂ ಸಾಕ್ಷ್ಯಗಳ ಮೇಲೆ ನಿಂತಿರುವಂತಹದ್ದು ಇಂತಹ ದೃಢವಾದ ಮತ್ತು ನೈಜವಾದ ಐತಿಹಾಸಿಕ ಪರಿಕಲ್ಪನೆ ನಮಗೆ ಇಂದಿಗೂ ಸ್ಪಷ್ಟವಾಗಿ ದೊರಕದಿರುವುದು ನಿಜವಾದ ದುರಂತವಾಗಿದೆ ಎಂದರೆ ತಪ್ಪಾಗಲಾರದು. ಏಕೆಂದರೆ ಇತಿಹಾಸವು ಸಂಶೋಧನಾ ಪ್ರಕಾರಗಳ ಮೂಲಕ ಸಾಪೇಕ್ಷ ಸಿದ್ಧಾಂತವನ್ನು ಪ್ರತಿಪಾದಿಸುವಂತದ್ದು ಮತ್ತು ಇಲ್ಲಿಯವರೆಗೂ ಕೂಡ ಸರ್ವಸಮ್ಮತವಾದ ಇತಿಹಾಸವೊಂದನ್ನು ಕಾಣಲು ನಮಗೆ ಸಾಧ್ಯವಾಗಿಲ್ಲ. ಈ ನಿಟ್ಟಿನಲ್ಲಿ

ಇತಿಹಾಸಕ್ಕೆ ಒಂದು ರೂಪಿತವಾದ ಚೌಕಟ್ಟು ಇಲ್ಲದಿರುವುದು ಇಂತಹ ಸಂದರ್ಭದಲ್ಲಿ ಇತಿಹಾಸ ಮತ್ತು ಸಾಹಿತ್ಯವು ಒಂದನ್ನೊಂದು ಪ್ರತಿಪಲಿಸಿದಾಗ ಸಾಹಿತ್ಯ ಸಂಶೋಧಕ ಇತಿಹಾಸಕ್ಕೆ ಮುಖಾಮುಖಿಯಾಗಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಸಾಹಿತ್ಯಕ ಸಂಶೋಧಕನನ್ನು ಕಾಡುವಂತಹ ಐತಿಹಾಸಿಕ ಅಂಶ ಯಾವುದು ? ಎಂಬುದು ಕೂಡ ಬಹುಮುಖ್ಯ ಪ್ರಶ್ನೆಯಾಗುತ್ತದೆ.

ಕೆ.ಟಿ.ಗಟ್ಟಿಯವರ **'ನಿಸರ್ಗ ಕನ್ಯೆ ಅಂಡಮಾನ್'** ಈ ಪ್ರವಾಸ ಕೃತಿಯು ಇತಿಹಾಸದ ಚೌಕಟ್ಟುಗಳಲ್ಲಿ ಅಂಡಮಾನನ್ನು ನಿರೂಪಿಸುತ್ತದೆ. ಗಟ್ಟಿಯವರು ಅಂಡಮಾನ್‌ನ ಇತಿಹಾಸವನ್ನು ಕ್ಷೇತ್ರಕಾರ್ಯದ ಮುಖಾಂತರ ಓದುಗನ ಮುಂದಿಡಲು ಪ್ರಯತ್ನಿಸುತ್ತಾನೆ. ಇಂತಹ ಪ್ರಯತ್ನಗಳು ಅಂಡಮಾನ್‌ನ ಇತಿಹಾಸವನ್ನು ಎಷ್ಟರ ಮಟ್ಟಿಗೆ ಕಟ್ಟಿಕೊಡುವಲ್ಲಿ ಸಫಲವಾಗಿವೆ ಎಂಬುದು ಕೂಡ ಮುಖ್ಯ ಪ್ರಶ್ನೆಯಾಗಿ ಈ ನನ್ನ ಸಂಶೋಧನೆಯಲ್ಲಿ ದಾಖಲಾಗುತ್ತಿದೆ.

**ಅ) ಚಾರಿತ್ರಿಕ ದಾಖಲೆಯಾಗಿ ಅಂಡಮಾನ್: ಇತಿಹಾಸದ ಸ್ವರೂಪ :**

ಅಂದಿನ ಭಾರತದ ಗೌರನರ್ ಜನರಲ್ 'ಲಾರ್ಡ್ ಕಾರ್ನವಾಲೀಸ್' ಅವರಿಗೆ ಈ ದ್ವೀಪಗಳಲ್ಲಿ ಕಾಲೋನಿ ಸ್ಥಾಪಿಸಲು ಬಹಳ ಆಸೆ ಇತ್ತು. ಈಸ್ಟ್ ಇಂಡಿಯಾ ಕಂಪನಿ ಕೂಡ ಕಾಲೋನಿ ಸ್ಥಾಪಿಸಲು ನಿರ್ಧಾರ ಮಾಡಿಕೊಂಡಿತ್ತು. ೧೭೮೮ರಲ್ಲಿ ಈಸ್ಟ್ ಇಂಡಿಯಾ ಕಂಪನಿ ಲೆಫ್ಟಿನೆಂಟ್ ಆರ್.ಚಿ.ಬೋಲ್ಡ್ ಬ್ಲೇರ್‌ರನ್ನು ಸಮೀಕ್ಷೆ ಮಾಡಲು ಕೇಳಿಕೊಂಡಿತು. ೧೮೮೯ರಲ್ಲಿ ಬ್ಲೇರ್ ಹಲವು ಅಧಿಕಾರಿಗಳ ಜೊತೆಗೆ ಈ ಪ್ರದೇಶ ತಲುಪಿದ. ಇಲ್ಲಿನ ಹಡಗುದಾಣವನ್ನು ಕಾರ್ನವಾಲೀಸ್ ಪೋರ್ಟ್ ಎಂದು ಮೊದಲಿಗೆ ನಾಮಕರಣ ಮಾಡಲಾಗಿತ್ತು. ೧೮೯೦ರಲ್ಲಿ ಆಡ್ಮಿರಲ್ ಕಾರ್‌ನ ವಾಲೀಸ್ ಸಹೋದರ ಲಾರ್ಡ್ ಕಾರ್ನವಾಲೀಸ್ ಇಲ್ಲಿ ನೌಕಾ ಕೇಂದ್ರವನ್ನು ಸ್ಥಾಪಿಸಲು ಆಲೋಚಿಸಿದ. ಕ್ಯಾಪ್ಟನ್ ಆರ್.ಚಿ.ಬಾಲ್ಡ್ ಬ್ಲೇರ್ ಕೂಡ ಇದೇ ವಿಷಯದ ಬಗ್ಗೆ ಯೋಚಿಸಿದರು. ಕ್ಯಾಪ್ಟನ್‌ಕಿಡ್‌ರನ್ನು ಸೂಪರಿನ್‌ಡೆಂಟ್ ಆಗಿ ನೇಮಿಸಲಾಯಿತು. ಕಿಡ್ ಕಲ್ಕತ್ತಾದಿಂದ ಹಲವು ಖೈದಿಗಳನ್ನು ಮೊದಲ ಬಾರಿಗೆ ಅಂಡಮಾನ್ ದ್ವೀಪಕ್ಕೆ ಕರೆದುಕೊಂಡು ಬಂದನು.

ಅಂಡಮಾನ್‌ನ ತೇವದ ವಾತಾವರಣ ಮತ್ತು ಸೊಳ್ಳೆಗಳಿಂದ ಮಲೇರಿಯಾ ಕಾಯಿಲೆ ಬಂದು ಅನೇಕ ಖೈದಿಗಳು ಪ್ರಾಣ ಕಳೆದುಕೊಂಡರು. ೧೮೯೬ರಲ್ಲಿ ವಿಧಿ ಇಲ್ಲದೆ ಅಳಿದುಳಿದ ಖೈದಿಗಳು ಇಲ್ಲಿಂದ ಕಾಲು ಕಿತ್ತರು. ಆದರೆ ಈಸ್ಟ್ ಇಂಡಿಯಾ ಕಂಪನಿ ಇಲ್ಲಿ ನೆಲೆಯೂರುವ ಆಸೆಯನ್ನು ಮಾತ್ರ ಕೈಬಿಡಲಿಲ್ಲ. ೧೮೫೭ರಲ್ಲಿ ದೇಶದಲ್ಲಿ ಬ್ರಿಟಿಷರ ವಿರುದ್ಧ ಕಾಣಿಸಿಕೊಂಡ 'ಕ್ವಿಟ್ ಇಂಡಿಯಾ ಆಂದೋಲನ'ದಿಂದ ಬ್ರಿಟಿಷರು ಇಲ್ಲಿ ತಮ್ಮ ನೆಲೆಯನ್ನು ಅಭಿವೃದ್ಧಿ ಪಡಿಸಲು ತೀವ್ರವಾಗಿ ಆಲೋಚಿಸ ತೊಡಗಿದರು. ಬ್ರಿಟಿಷರ ವಿರುದ್ಧ ತಿರುಗಿಬಿದ್ದವರನ್ನು ದೇಶದಿಂದ ಬಹಳ

ದೂರದ ಈ ದ್ವೀಪಗಳಿಗೆ ಸಾಗಿಸತೊಡಗಿದರು. ಸುತ್ತಲೂ ಸಮುದ್ರ ಇದ್ದು ಖೈದಿಗಳು ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲದೆ ಇರುವುದು ಮುಖ್ಯ ಕಾರಣವಾಗಿತ್ತು.

೧೮ನೇ ಶತಮಾನದಲ್ಲಿ ಕ್ಯಾಪ್ಟನ್ ಆರ್.ಚಿ.ಬಾಲ್ಡ್‌ನ ಗಣನೀಯ ಕೆಲಸದಿಂದ ಆ ಹಡಗುದಾಣವನ್ನು ಪೋರ್ಟ್‌ಬ್ಲೇರ್ ಎಂದು ಮರು ನಾಮಕರಣ ಮಾಡಲಾಯಿತು. ೧೮೫೮ರ ಜನವರಿ ೨೨ರಂದು ಬರ್ಮಾದಲ್ಲಿದ್ದ ಕ್ಯಾಪ್ಟನ್ ಹೆನ್ರಿ, ಜೈಲು ಸೂಪರಿನ್ವೆಂಡೆಂಟ್ ಯೂನಿಯನ್ ಬಾರ್ ಆಫ್ ಬ್ರಿಟಿಷ್ ಸಾಮ್ರಾಜ್ಯದ ದಂಡನಾರ್ಹ ನೆಲೆಯನ್ನು ಇಲ್ಲಿ ಉದ್ಘಾಟನೆ ಮಾಡಿದ. ಡಾ॥ ಜೇಮ್ಸ್ ಪೆಟಿಷನ್‌ವಾಕರ್ ಇಲ್ಲಿನ ಮೊದಲ ಜೈಲು ಸೂಪರಿನ್ವೆಂಡೆಂಟ್ ಆಗಿ ಕಾರ್ಯ ನಿರ್ವಹಿಸಿದ. ೧೮೫೮ ಮಾರ್ಚ್ ೪ರಂದು ಕಲ್ಕತ್ತಾ ಬಿಟ್ಟ ಹಡಗು ೨೦೦ ಜನ ಖೈದಿಗಳು, ಒಬ್ಬ ವೈದ್ಯ ಮತ್ತು ೫೦ ಜನ ಸಹಾಯಕರೊಂದಿಗೆ ಮಾರ್ಚ್ ೧೦ರಂದು ಅಂಡಮಾನ್ ತಲುಪಿತು. ಆಗ ಖೈದಿಗಳು ತಂಗಲು ಯಾವುದೇ ಸರಿಯಾದ ವಸತಿ ಮತ್ತು ಊಟದ ವ್ಯವಸ್ಥೆಯೂ ಮಾಡಿರಲಿಲ್ಲ. ಅದೇ ತಿಂಗಳು ೨೦ರಂದು ಸೆಮಿರಾಮಿ ಎಂಬ ಹಡಗಿನಲ್ಲಿ ಆಹಾರ ಮತ್ತು ಇತರ ಸಾಮಾಗ್ರಿಗಳನ್ನು ತರಲಾಯಿತು.

ವಾಕರ್ ಛಾಥಮ್ ದ್ವೀಪದಲ್ಲಿ ಖೈದಿಗಳು ಉಳಿದುಕೊಳ್ಳಲು ಅದನ್ನು ಸ್ವಚ್ಛ ಮಾಡಿಸಿ ಇತರ ಏರ್ಪಾಡುಗಳನ್ನು ಮಾಡಿಸಿದ. ಅದಕ್ಕೆ ಹತ್ತಿರದಲ್ಲೇ ಇದ್ದ ರಾಸ್ ದ್ವೀಪದಲ್ಲಿ ತನ್ನ ಕೇಂದ್ರವನ್ನು ಸ್ಥಾಪಿಸಿಕೊಳ್ಳತೊಡಗಿದ. ರಾಸ್ ದ್ವೀಪದಲ್ಲಿ ಗಿಡಮರಗಳನ್ನು ಕಡಿಸಿ ಕಛೇರಿಗಳನ್ನು ಮತ್ತು ವಸತಿ ಗೃಹಗಳನ್ನು ಕಟ್ಟಿಸತೊಡಗಿದ. ಇಲ್ಲಿನ ಎಲ್ಲಾ ಕೆಲಸಗಳನ್ನು ಖೈದಿಗಳಿಗೆ ವಹಿಸಲಾಯಿತು. ಇವರೆಲ್ಲ ದೇಶದ ದೊಡ್ಡ ದೊಡ್ಡ ಜಮೀನುದಾರರು, ನವಾಬರ ಕುಟುಂಬಗಳಿಗೆ ಸೇರಿದವರಲ್ಲದೆ, ಅವರಲ್ಲಿ ಕೆಲವರು ಪ್ರಖ್ಯಾತ ಕವಿಗಳು ಮತ್ತು ಕಲಾವಿದರು ಇದ್ದರು. ಇವರೆಲ್ಲಾ ತಮ್ಮ ಮನೆಗಳಲ್ಲಿ ಹತ್ತಾರು ಕೆಲಸದ ಆಳುಗಳನ್ನು ಇಟ್ಟುಕೊಂಡಿದ್ದವರು. ಅಂತವರೆಲ್ಲಾ ಇಲ್ಲಿ ಜೌಗು ನೆಲದಲ್ಲಿ ಸೊಳ್ಳೆಗಳಿಂದ ಕಚ್ಚಿಸಿಕೊಂಡು ಕಾಡು ಕಡಿಯುತ್ತಾ, ಮಣ್ಣಿನಲ್ಲಿ ಕೆಲಸ ಮಾಡುತ್ತಾ, ಕಟ್ಟಡಗಳನ್ನು ಕಟ್ಟತೊಡಗಿದ್ದರು. ಸುತ್ತಲೂ ಸಮುದ್ರ, ಅಕ್ಕಪಕ್ಕದ ದ್ವೀಪಗಳಲ್ಲಿ ಕ್ರೂರ ಆದಿಮಾನವರು ಬೇರೆ ವಾಸವಾಗಿದ್ದರು.

೨೩ ಮಾರ್ಚ್, ೧೯೪೨ರಿಂದ ೨೪ ಅಕ್ಟೋಬರ್, ೧೯೪೫ರವರೆಗೂ ಈ ದ್ವೀಪಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದ ಜಪಾನ್ ಸೈನ್ಯ ಎಲ್ಲವನ್ನು ನಾಶ ಮಾಡಿದ ಕಾರಣ ಇಲ್ಲಿದ್ದ ಆಂದೋಲನಕಾರರ ಪೂರ್ಣ ಪಟ್ಟಿ ದೊರಕದೇ ಹೋಯಿತು. ಬ್ರಿಟಿಷರ ಎಲ್ಲಾ ದಾಖಲೆಗಳಿಗೂ ಬೆಂಕಿ ಇಟ್ಟು ಸುಟ್ಟು ಹಾಕಲಾಯಿತು. ಮೊದಲಿಗೆ ೧೮೬೭ರಲ್ಲಿ ವೈಪರ್ ದ್ವೀಪದಲ್ಲಿ ದೊಡ್ಡದಾದ ಜೈಲುಗೋಡೆಯನ್ನು ಕಟ್ಟಿ ಮುಗಿಸಲಾಯಿತು. ಖೈದಿಗಳು ಯಾವುದೇ ರೀತಿಯ ಸಣ್ಣ ಪ್ರಮಾಣದ ಜೈಲು ಕಾನೂನು ಮುರಿದರೂ ಸಾಕು ಅವರ ಕೈಗಳಿಗೆ ಬೇಡಿ ತೊಡಿಸಲಾಗುತ್ತಿತ್ತು. ಈ

ಕಾರಣದಿಂದ ಇದನ್ನು **'ವೈಪರ್ ಚೈನು ಗ್ಯಾಂಗ್ ಜೈಲು'** ಎಂದು ಕರೆಯಲಾಗುತ್ತಿತ್ತು. ೧೮೪೯ರವರೆಗೂ ಇಲ್ಲಿನ ಜೈಲುಗಳು ಬರ್ಮಾ ಚೀಫ್‌ಕಮೀಷನರ್ ಕೆಳಗೆ ಕೆಲಸ ನಿರ್ವಹಿಸುತ್ತಿದ್ದವು. ಅನಂತರ ಭಾರತ ಸರ್ಕಾರದ ಅಧೀನಕ್ಕೆ ಒಳಪಡಿಸಲಾಯಿತು. ರಾಸ್ ದ್ವೀಪ ಮುಖ್ಯ ಆಡಳಿತ ಕೇಂದ್ರವಾಗಿದ್ದ ಕಾರಣ ಅಲ್ಲಿ ಬಂಗಲೆಗಳು, ಕ್ಲಬ್ಬುಗಳು, ಆಟದ ಮೈದಾನಗಳು, ಕಚೇರಿಗಳು, ಚರ್ಚ್‌ಗಳು ಮತ್ತು ಹೂತೋಟಗಳನ್ನು ಅಭಿವೃದ್ಧಿಪಡಿಸಲಾಯಿತು. ಈ ದ್ವೀಪವನ್ನು ಪೂರ್ಣವಾಗಿ ಬ್ರಿಟಿಷ್ ಸೈನಿಕ ಅಧಿಕಾರಿಗಳಿಗೆ ಮಾತ್ರ ಮೀಸಲಿಡಲಾಗಿತ್ತು.

೧೭೯೨ರಲ್ಲಿ ಕೆಲವು ಹಡಗುಗಳು ಕಲ್ಕತ್ತಾದಿಂದ ಅಂಡಮಾನ್ ಕಡೆಗೆ ಹೊರಟವು. ಈ ಹಡಗುಗಳಲ್ಲಿ ೩೬೦ ಸೈನಿಕರು ಇದ್ದರು. ಇವರು ತಮ್ಮ ಕಂಪನಿಯನ್ನು ಅಂಡಮಾನ್ ದ್ವೀಪಗಳಲ್ಲಿ ಸ್ಥಾಪಿಸಲು ಹೊರಟಿದ್ದವರಾಗಿದ್ದರು. ಈ ಹಡಗುಗಳಲ್ಲಿ ಎಲ್ಲರಿಗೂ ೬ ತಿಂಗಳಿಗೆ ಆಗುವಷ್ಟು ಆಹಾರ, ಇನ್ನಿತರ ಸಾಮಾಗ್ರಿಗಳು ಇರಿಸಿಕೊಂಡಿದ್ದರು. ಅನಂತರ ಬ್ಲೇರ್ ಮತ್ತು ಕಾರನ್‌ವಾಲೀಸ್ ಕೂಡ ಅವುಗಳ ಹಿಂದೆ ಬೇರೆ ಹಡಗುಗಳಲ್ಲಿ ಹೊರಟು ಬಂದರು.

೧೮೫೮ರಲ್ಲಿ ಲೆ:ಟಂಪಲ್ ಅವರ ನೌಕಾದಳ ಅಂಡಮಾನ್ ಆದಿವಾಸಿಗಳ ಮೇಲೆ ದಾಳಿ ಮಾಡಿ ಹಲವಾರು ಜನರನ್ನು ಕೊಂದುಹಾಕಿ ಅವರ ಗುಡಿಸಿಲುಗಳನ್ನು ನಾಶ ಮಾಡಿತು. ಆದಿವಾಸಿಗಳು ಇವರ ನೌಕಾದಳದ ಮೇಲೆ ನಾಲ್ಕಾರು ಸಲ ಪ್ರತಿ ದಾಳಿ ಮಾಡಿದರು. ಕ್ಯಾ.ಹಂಗ್ಟನ್ ೧೮೫೯ ನಿಂದ ೧೮೬೭ರವರೆಗೂ ಸ್ಥಳೀಯ ಆದಿವಾಸಿಗಳ ಜೊತೆಗೆ ಗೆಳೆತನ ಬೆಳೆಸಲು ಹಲವು ರೀತಿಯಲ್ಲಿ ಪ್ರಯತ್ನಿಸಿ ನೋಡಿದರು. ಕರ್ಬಿನ್ ಎಂಬ ಅಧಿಕಾರಿಗೆ ಇದರ ಉಸ್ತುವಾರಿ ನೀಡಿ **'ಅಂಡಮಾನ್ ಮನೆ'**ಯನ್ನು ಸ್ಥಾಪಿಸಿ ಸ್ಥಳೀಯರನ್ನು ಇಲ್ಲಿ ನೆಲೆಯೂರಲು ಆಹ್ವಾನಿಸಲಾಯಿತು. ಕರ್ಬಿನ್ ೨೮ ಜನ ಆದಿವಾಸಿಗಳನ್ನು ಈ ಅಂಡಮಾನ್ ಮನೆಗೆ ತರಲು ಯಶಸ್ವಿಯಾಗಿದ್ದ. ಆದರೆ ಇದಕ್ಕೆ ಹಲವರಿಂದ ವಿರೋಧ ಕಾಣಿಸಿಕೊಂಡಿತ್ತು. ವೊನ್ ಈಕ್‌ಪಿಡ್ತ್ ಎಂಬವನು **'ಈ ಅಂಡಮಾನ್ ಮನೆ, ಎನ್ನುವುದು ಆದಿವಾಸಿಗಳ ಅವಸಾನದ ಬಾಗಿಲು'** ಎಂದಿದ್ದಾನೆ.

**ಅ) ಅಂಡಮಾನಿನ ಪ್ರಾಕೃತಿಕ ನೆಲೆ- ಭೌಗೋಳಿಕತೆಯ ಸ್ವರೂಪ :**

ಅಂಡಮಾನ್-ನಿಕೋಬಾರ್‌ನ ೫೭.೨ ದ್ವೀಪಗಳ ಒಟ್ಟು ಭೂವಿಸ್ತೀರ್ಣ ೮,೨೪೯ ಚದರ ಕಿ.ಮೀ. ಈ ಎಲ್ಲಾ ದ್ವೀಪಗಳು ೭೮೦ ಕಿ.ಮೀ. ಉದ್ದವಾಗಿ ಉತ್ತರ-ದಕ್ಷಿಣ ದಿಕ್ಕಿನಲ್ಲಿ ಸ್ವಲ್ಪ (ಓರೆ)ವಕ್ರವಾಗಿ ಹರಡಿಕೊಂಡಿವೆ. "ಸಮುದ್ರದಲ್ಲಿ ತೇಲಾಡುವಂತೆ ತೋರುವ ಈ ದ್ವೀಪ ಸಮೂಹದ ಹೂವಿನ ಹಾರವನ್ನು ಬಂಗಾಳ ಕೊಲ್ಲಿ ತನ್ನ ಕೊರಳಿಗೆ ಸುಂದರವಾಗಿ ಧರಿಸಿರುವಂತೆ ತೋರುತ್ತದೆ". ಉತ್ತರದಲ್ಲಿರುವ ಅಂಡಮಾನ್ ದ್ವೀಪ ಸಮೂಹ ೨೧೯ ಕಿ.ಮೀ. ಉದ್ದದಲ್ಲಿ ಹಾಸಿಕೊಂಡಿದ್ದು, ೫೧ ಕಿ.ಮೀ. ಅಗಲದಲ್ಲಿ ಹರಡಿಕೊಂಡಿದೆ. ಇವುಗಳನ್ನು ಉತ್ತರ,

ಮಧ್ಯ ಮತ್ತು ದಕ್ಷಿಣ ಅಂಡಮಾನ್ ದ್ವೀಪ ಸಮೂಹವೆಂದು ಕರೆಯುತ್ತಾರೆ. ಇವುಗಳನ್ನು **'ಗ್ರೇಟ್ ಅಂಡಮಾನ್ ದ್ವೀಪ'**ಗಳೆಂದೂ ಕರೆಯುತ್ತಾರೆ.

ಅಂಡಮಾನ್-ನಿಕೋಬಾರ್ ದ್ವೀಪಗಳಿಗೆ ಪೋರ್ಟ್‌ಬ್ಲೇರ್ ರಾಜಧಾನಿಯಾಗಿದ್ದು, ೫೭೨ ದ್ವೀಪಗಳಲ್ಲಿ ಕೇವಲ ೩೮ ದ್ವೀಪಗಳಲ್ಲಿ ಮಾತ್ರ ಜನರು ವಾಸಿಸುತ್ತಿದ್ದಾರೆ. ಚೆನ್ನೈ, ಕಲ್ಕತ್ತಾ ಮತ್ತು ವಿಶಾಖಪಟ್ಟಣಂ ನಗರಗಳಿಂದ ಪೋರ್ಟ್‌ಬ್ಲೇರ್ ೧೨೦೦ ರಿಂದ ೧೩೦೦ ಕಿ.ಮೀ. ದೂರದಲ್ಲಿದೆ. ದಕ್ಷಿಣ-ಪೂರ್ವ ದೇಶಗಳಾದ ಜಾವಾ, ಸುಮತ್ರಾ, ಇಂಡೋನೇಷ್ಯಾ ಕೇವಲ ೨೦೦ ಕಿ.ಮೀ.ಗಳಿಗಿಂತ ಹತ್ತಿರದಲ್ಲಿವೆ.

ಉತ್ತರ-ದಕ್ಷಿಣಾಭಿಮುಖವಾಗಿರುವ ಈ ದ್ವೀಪಗಳು ಒಂದು ಕಾಲದಲ್ಲಿ ಯಾವುದೇ ಬ್ರೇಕ್ ಇಲ್ಲದೆ ವಕ್ರಾಕಾರವಾಗಿ ಇಂದಿನ ಸುಮಾತ್ರ ದ್ವೀಪಗಳ ಅಚಿನ್ ಪರ್ವತಗಳಿಂದ ಹಿಡಿದು ಬರ್ಮಾದ ನೆಗಾರಿಸ್ ಪರ್ವತಗಳವರೆಗೂ ಅಂಟಿಕೊಂಡಿದ್ದವು. ನೆಗಾರಿಸ್ ಪರ್ವತ ಶ್ರೇಣಿ ಅರಕನ್ ಪರ್ವತ (ನಾಗಾಲ್ಯಾಂಡ್-ಬರ್ಮಾ) ಶ್ರೇಣಿಗಳ ಕೊಂಡಿಯಾಗಿದ್ದು, ಇವು ಒಂದು ಕಾಲದಲ್ಲಿ ಪೂರ್ವ ಹಿಮಾಲಯಗಳಿಗೆ ಸೇರಿದ ಒಂದು ಟಿಸಿಲು ಪರ್ವತಶ್ರೇಣಿ.

ಸಮುದ್ರದ ಮಧ್ಯೆ ಸಿಕ್ಕಿಕೊಂಡಿರುವ ಈ ಪರ್ವತ ಶ್ರೇಣಿಗಳು, ಆಕಾಶಗೋಡೆಗೆ ಬಣ್ಣ ಹೊಡೆಯುತ್ತಿದ್ದಾಗ ಬ್ರಷ್‌ನಿಂದ ಜಾರಿ ಬಿದ್ದಿರುವ ಬಣ್ಣಗಳಂತೆ ಕಾಣಿಸುತ್ತವೆ. ನೀಲಿ ಮತ್ತು ಹಸಿರು ಮಿಶ್ರಿತ ಎಲ್ಲಾ ಬಣ್ಣಗಳ ದ್ವೀಪಗಳ ಸುತ್ತಲೂ ಹವಳದ ದಿಬ್ಬಗಳು ಸಮುದ್ರದ ಉಯ್ಯಾಲೆಯಲ್ಲಿ ಆಡುತ್ತಿರುವಂತೆ ತೋರುತ್ತವೆ. ಸಮುದ್ರ ಮಟ್ಟದಿಂದ ಕೇವಲ ಕೆಲವು ನೂರು ಮೀಟರುಗಳ ಎತ್ತರವಿರುವ ಈ ದ್ವೀಪಗಳು ಉಷ್ಣ ತಾಪಮಾನದಿಂದ ಕೂಡಿವೆ. ಮೇ ತಿಂಗಳಲ್ಲಿ ಪ್ರಾರಂಭವಾಗುವ ಮುಂಗಾರು ಮಳೆ ಅಕ್ಟೋಬರ್‌ವರೆಗೂ ಬೀಳುತ್ತಲೇ ಇರುತ್ತದೆ. ಇಲ್ಲಿನ ವಾರ್ಷಿಕ ಸರಾಸರಿ ಮಳೆ ೩೧೮೦ ಮಿ.ಮೀ.

ಅಂಡಮಾನ್-ನಿಕೋಬಾರ್ ದ್ವೀಪಗಳಿಗೆ ಬಹಳ **ದೊಡ್ಡ ಚಾರಿತ್ರಿಕ ಹಿನ್ನೆಲೆ** ಇದೆ ಎನ್ನಲಾಗಿದೆ. ಅಂಡಮಾನ್ ಹೆಸರು **ಮಲಯಾ ಭಾಷೆ**ಯಿಂದ ಬಂದಿದ್ದು, ಮಲೆಯನ್ನರು ಮೊದಲಿಗೆ ಈ ದ್ವೀಪಗಳಿಂದ ಸೇವಕರನ್ನು ಪಡೆಯುತ್ತಿದ್ದರು ಎಂದು ಹೇಳಲಾಗುತ್ತದೆ. ಸಮುದ್ರದ ಮೇಲೆ ದೋಣಿಗಳಲ್ಲಿ ಬರುತ್ತಿದ್ದ ಮಲೆಯನ್ನರು ಈ ದ್ವೀಪಗಳಲ್ಲಿ ಆದಿವಾಸಿಗಳನ್ನು ಹಿಡಿದು ಬೇರೆ ಕಡೆಗೆ ಕೊಂಡೊಯ್ದು ಮಾರುತ್ತಿದ್ದರು ಎನ್ನುವ ಉಲ್ಲೇಖಗಳೂ ದೊರಕುತ್ತವೆ. ಅವರು ಈ ದ್ವೀಪಗಳ ಜನರನ್ನು ಅಂಡುಮಾನ್ ದ್ವೀಪಗಳ ಜನರೆಂದು ಕರೆಯುತ್ತಿದ್ದು ರಾಮಾಯಣದಲ್ಲಿ ಹೀಗೆಯೇ ಉಚ್ಚಾರ ಮಾಡಲಾಗಿದೆ ಎಂದು ಹೇಳಲಾಗಿದೆ. ಮುಂದಿನ ದಿನಗಳಲ್ಲಿ ಹಂಡುಮಾನ್ (Handuman) ಅಂಡಮಾನ್ (Andaman) ಆಯಿತಂತೆ.

ರೋಮನ್ ದೇಶದ ಪ್ರಖ್ಯಾತ ಭೌಗೋಳ ಶಾಸ್ತ್ರಜ್ಞ 'ಕ್ಲಾಡಿಯಸ್ ಕೋಲೆಮಿಯಸ್, ಟೋಲೆಮಿ' ಎಂದೇ ಖ್ಯಾತ. ೨ನೇ ಶತಮಾನದಲ್ಲಿ ಅಲೆಕ್ಸಾಂಡ್ರಿಯಾದಲ್ಲಿದ್ದ ಈತ ತನ್ನ ನಕ್ಷೆಯಲ್ಲಿ ಅಂಡಮಾನ್-ನಿಕೋಬಾರ್ ದ್ವೀಪಗಳನ್ನು ಬಿಡಿಸಿದ್ದನು. ಜೊತೆಗೆ 'ಈ ದ್ವೀಪಗಳಲ್ಲಿ ಮನುಷ್ಯರನ್ನೇ ತಿನ್ನುವ ಆದಿಮಾನವರು ಇದ್ದಾರೆ' ಎಂದು ದಾಖಲಿಸಿದ್ದನು. ಕ್ರಿ.ಶ. ೬೭೨ರಲ್ಲಿ 'ಷರ್‌ಷಿಯನ್' ಹಡಗಿನಲ್ಲಿ ಪ್ರಯಾಣಿಸಿ ಬಂದ ಚೀನಾ ಯಾತ್ರಿಕ 'ಟಟ್ಸಂಗ್' ಇದೇ ದ್ವೀಪಗಳ ಬಗ್ಗೆ ತನ್ನ ಬರವಣಿಗೆಯಲ್ಲಿ ದಾಖಲಿಸಿದ್ದಾನೆ. ಈ ದ್ವೀಪಗಳ ಬಗ್ಗೆ ಅಂಡುಬನ್ (Andaban) ಎಂದು ಕರೆಯುತ್ತಾ 'ಇಲ್ಲಿನ ಜನರು ನರಮಾನವರನ್ನು ತಿನ್ನುವವರು' ಎಂದು ಉಲ್ಲೇಖಿಸಿದ್ದಾನೆ. ಕ್ರಿ.ಶ. ೮೭೦ರಲ್ಲಿ ಇಲ್ಲಿಗೆ ಆಗಮಿಸಿದ ಇಬ್ಬರು 'ಅರಬ್ ಯಾತ್ರಿಕರು' ಇಲ್ಲಿನ ಜನರ ಬಗ್ಗೆ ಹೀಗೆ ಉಲ್ಲೇಖಿಸಿದ್ದಾರೆ: "ಈ ದ್ವೀಪಗಳ ಜನರು ನರ ಮನುಷ್ಯರ ಮಾಂಸವನ್ನು ಹಾಗೇ ಭಕ್ಷಿಸುತ್ತಾರೆ. ಕಪ್ಪು ಬಣ್ಣದ ಇವರ ಕೂದಲು ಸರಳಿಸುರಳಿ, ಯಾವಾಗಲೂ ಭೀತಿಯಿಂದ ಕೂಡಿದ ಕಣ್ಣುಗಳು, ಅಗಲವಾದ ಪಾದಗಳು ಮತ್ತು ಪೂರ್ಣ ನಗ್ನವಾಗಿ ಓಡಾಡುತ್ತಿರುತ್ತಾರೆ. ಅವರ ಹತ್ತಿರ ದೋಣಿಗಳು ಇದ್ದಿದ್ದರೆ ಸಮುದ್ರದ ಮೇಲೆ ಬರುತ್ತಿದ್ದ ಎಲ್ಲಾ ಯಾತ್ರಿಕರನ್ನು ಹಿಡಿದು ತಿಂದುಬಿಡುತ್ತಿದ್ದರು".

ಕ್ರಿ.ಶ. ೧೨೬೦ಲ್ಲಿ 'ವೆನೀಸ್‌ನ ಮಾರ್ಕೊಪೋಲೊ' ಈ ದಾರಿಯಲ್ಲಿ ಪ್ರಯಾಣ ಮಾಡಿ ಈ ದ್ವೀಪಗಳು ಮತ್ತು ಇಲ್ಲಿನ ಜನರ ಬಗ್ಗೆ ದಾಖಲಿಸಿದ್ದಾನೆ. ಕ್ರಿ.ಶ. ೧೩೨೨ರಲ್ಲಿ ಇದೇ ದಾರಿಯಲ್ಲಿ ಪ್ರಯಾಣಿಸಿದ ಓಡೊರಿಕ್ 'ಅಂಡಮಾನ್ ಜನರ ಮುಖಗಳು ನಾಯಿ ಮುಖಗಳಂತೆ ಇದ್ದು ನರ ಮನುಷ್ಯರನ್ನು ಭಕ್ಷಿಸುವರೆಂದು' ಹೇಳಿದ್ದಾನೆ. ೧೫ನೇ ಶತಮಾನದ ಪೂರ್ವದಲ್ಲಿ ನಿಕೊಲ್‌ಡ್ರ ಕೊಂಟೆ ಕೂಡ ಇಲ್ಲಿನ ಜನರ ಬಗ್ಗೆ ದಾಖಲಿಸಿದ್ದಾನೆ. ಈತ ರಸ್ತೆ ಮತ್ತು ದೋಣಿಗಳ ಮೂಲಕ ಪೂರ್ವದ ಡೆಮಾಸ್‌ಕಸ್‌ನಿಂದ ಇಂಡೋ-ಚೀನಾ ಮೂಲಕ ೧೪೧೪-೩೯ ಮಧ್ಯೆ ಈ ದಾರಿಯಲ್ಲಿ ಹಾದುಹೋಗಿದ್ದ. 'ಈ ದ್ವೀಪಗಳ ಆದಿವಾಸಿಗಳ ಕೈಗೆ ಜನರು ಸಿಕ್ಕಿದರೆ ಅವರನ್ನು ಸುಲಿದು ಭಕ್ಷಿಸುತ್ತಾರೆ' ಎಂದು ಬರೆದುಕೊಂಡಿದ್ದಾನೆ. ಇದೇ ರೀತಿಯ ಮಿತ್ ೧೬೨೫ರವರೆಗೂ ಮುಂದುವರೆದು ಚರಿತ್ರೆಕಾರರ ಪುಟಗಳಲ್ಲೆಲ್ಲ ದಾಖಲಾಗಿರುವುದನ್ನು ನೋಡಬಹುದು. ೧೮ ವರ್ಷಗಳ ಕಾಲ ಭಾರತದ ಮೂಲೆಮೂಲೆಯನ್ನು ಸುತ್ತಿದ 'ಮಾಸ್ಟರ್ ಸೀಝುರ್ ಫ್ರೆಡ್ರಿಕ್' ಇದೇ ರೀತಿಯ ವಿಷಯಗಳನ್ನು ದಾಖಲಿಸಿದ್ದಾನೆ.

ನಿಕೋಲಿ ಕೊಂಟೆ **'ಅಂಡಮಾನ್ ಎಂದರೆ ಚಿನ್ನದ ದ್ವೀಪ'** ಎಂದಿದ್ದಾನೆ. ತಾಂಜೂರಿನ ದೇವಾಲಯದ ಗೋಡೆಗಳ ಮೇಲೆ ೧೦೫೦ರಲ್ಲಿ ಅಂಡಮಾನ್ ದ್ವೀಪಗಳನ್ನು Timaitture ಎಂದು ಬರೆಯಲಾಗಿದೆ. ಇದೇ ಕೆತ್ತನೆಯಲ್ಲಿ ತಮಿಳಿನಲ್ಲಿ ನಕ್ಕಾವರಂ (ನಗ್ನ) ಜನರು ಎಂದಿದೆ. ಮಾರ್ಕೊಪೋಲೋನ Necuveran (೧೨೯೨), ರಶೀದುದ್ದೀನ್‌ನ Nakawaram (೧೩೦೦)

ಮತ್ತು ಫ್ರಿಯರ್ ಒಡೊರಿಕ್‌ನ Nicoveran (೧೩೨೨) ಪದಗಳೆಲ್ಲ ನರ ಮನುಷ್ಯರನ್ನು ಭಕ್ಷಿಸುವ ಆದಿಮಾನವರಿಂದಲೇ ಬಂದಿರಬೇಕು ಎನ್ನುವ ಊಹೆ ಇದೆ.

ಅಂಡಮಾನ್ ದ್ವೀಪಗಳು ಮತ್ತು ಅಲ್ಲಿನ ಆದಿವಾಸಿಗಳ ಬಗ್ಗೆ ಹಲವಾರು ಉಲ್ಲೇಖಗಳನ್ನು ನೋಡಬಹುದಾಗಿದೆ. ಅಂಡಮಾನ್ ದ್ವೀಪಗಳಿಗೆ ಹೋಲಿಸಿದರೆ 'ನಿಕೋಬಾರ್' ಹೆಸರಿನ ಬಗ್ಗೆ ಹೆಚ್ಚು ಊಹಾಊಹೆಗಳಿಲ್ಲ ಎನ್ನಬಹುದು. ಹಲವು ಶತಮಾನಗಳಿಂದಲೂ ಅನೇಕ ದಾಖಲೆಗಳಲ್ಲಿ **'ನಿಕೋಬಾರ್ ದ್ವೀಪಗಳನ್ನು ನಗ್ನ ಜನರಿರುವ ದ್ವೀಪಗಳು'** ಎಂದು ಹೆಸರಿಸಲಾಗಿದೆ. ಟಟ್ಸಿಂಗ್ ಕೂಡ ಇದೇ ದ್ವೀಪಗಳನ್ನು Lojen Kue ಅಂದರೆ ನಗ್ನ ಜನರು ವಾಸಿಸುವ ದ್ವೀಪಗಳೆಂದಿದ್ದಾನೆ.

ಅರಬ್ ಯಾತ್ರಿಕ Lakhabalus ಅಥವಾ Najabulas ಎಂದು ದಾಖಲಿಸಿದ್ದಾನೆ. ಬಹುಶಃ ಭಾಷಾಂತರದ ಸಮಸ್ಯೆಗಳಿಂದ ಹೀಗಾಗಿರಬಹುದು. ೧೫ ಮತ್ತು ೧೬ನೇ ಶತಮಾನದಲ್ಲಿ ಪೋರ್ಚುಗೀಸರಿಂದ Nacabar ಅನಂತರ ಇಂದಿನ Nicobar ಆಗಿದೆ ಎಂದು ಹೇಳಲಾಗಿದೆ. **ಕೇಪ್ ಆಫ್ ಗುಡ್ ಹೋಪ್** ಘಟಿಸುವುದಕ್ಕೆ ಮುಂಚೆ ಯೂರೋಪಿಯನ್ನರಿಗೆ ನಿಕೋಬಾರ್ ದ್ವೀಪಗಳ ಬಗ್ಗೆ ಅಷ್ಟೇನೂ ಪರಿಚಯ ಇದ್ದಂತೆ ತೋರುವುದಿಲ್ಲ. ಆದರೆ ಪದೇ ಪದೇ ಈ ದಾರಿಯಲ್ಲಿ ಅವರು ಬಂದು ಹೋಗುತ್ತಿದ್ದರು.

ಕ್ಯಾ.ಫ್ರೆಡ್ರಿಕ್ ೧೫೫೬ರಲ್ಲಿ ನಿಕೋಬಾರ್‌ನ ಒಂದು ದ್ವೀಪವನ್ನು ತಲುಪಿದ. ಅನಂತರ ಮೊದಲನೇ ಎಲಿಜಿಬೆತ್ ರಾಣಿಯ ಕಾಲದಲ್ಲಿ (೧೬೦೧) ಸರ್ ಜೇಮ್ಸ್ ಲನ್‌ಕಾಸ್ಟರ್ ಇದೇ ದಾರಿಯಲ್ಲಿ ನಿಕೋಬಾರ್ ದ್ವೀಪಗಳನ್ನು ತಲುಪಿದ. ಸ್ಪ್ಯಾನಿಷ್ ಮಿಷನರಿ ಡಾಮ್ನಿಕ್ ಫೆರ್‌ನಾಂಡೆಸ್ ಮಲಕಾದಿಂದ ಮದ್ರಾಸಿಗೆ ಬರುವ ದಾರಿಯಲ್ಲಿ ಇಲ್ಲಿಗೆ ಬಂದಿದ್ದ. ೧೬೯೫ರಲ್ಲಿ ಇಟಲಿ ದೇಶದ ವೈದ್ಯ ಜಾನ್ ಫ್ರಾನ್ಸಿಸ್ ಗೊಮ್ಮೆಲಿ ಪ್ರಪಂಚ ಪರ್ಯಟನೆ ಮಾಡುತ್ತ ನಿಕೋಬಾರ್ ದ್ವೀಪಗಳನ್ನು ವೀಕ್ಷಿಸಿದ. ಈತ ನಿಕೋಬಾರ್ ದ್ವೀಪಗಳ ಜನರು ಪ್ರತಿ ವರ್ಷ ಇಂತಿಷ್ಟು ತಮ್ಮ ಜನರನ್ನು ಅಂಡಮಾನ್ ದ್ವೀಪಗಳ ಜನರಿಗೆ ಕೊಡುಗೆ (ಬಲಿ ಕೊಡಲು) ನೀಡುತ್ತಿದ್ದರು. ಅಂದರೆ ಅಂಡಮಾನ್ ಜನರು ನಿಕೋಬಾರ್ ಜನರನ್ನು ಧಾನವಾಗಿ ಪಡೆದು ತಿಂದುಕೊಳ್ಳುತ್ತಿದ್ದರು. 'ಅಂಡಮಾನ್ ಜನರು ಯಾರಾದರು ಗಾಯಗೊಂಡ ಜನರನ್ನು ನೋಡಿದ್ದೆಯಾದರೆ ಓಡಿಹೋಗಿ ಅವರ ರಕ್ತ ಕುಡಿಯುತ್ತಾರೆ' ಎಂದೂ ದಾಖಲಿಸಿದ್ದಾನೆ.

ಪ್ರಥಮ ಬಾರಿಗೆ ಫ್ರೆಂಚ್ ದೇಶದ ಪೌವರಿ ಮತ್ತು ಟೇಲ್ಲಂಡರೀಸ್ ಎಂಬ ಇಬ್ಬರು ನಿಕೋಬಾರ್‌ನ ಆದಿಮಾನವರನ್ನು ಪರಿವರ್ತಿಸಲು ಪ್ರಯತ್ನಿಸಿ ಅವರಲ್ಲಿ ಕೆಲಸ ಮಾಡಲು ಬಂದ ಇಬ್ಬರು ಕೂಲಿ ಆಳುಗಳನ್ನು ಮಾತ್ರ ಪರಿವರ್ತಿಸಲು ಸಫಲರಾಗಿದ್ದರು. ಭಾರತಕ್ಕೆ ಸ್ವಾತಂತ್ರ

ದೊರಕುವುದಕ್ಕೆ ಮುಂಚೆ ಹಲವು ಮಿಷನರಿಗಳು ಇಲ್ಲಿನ ಆದಿಮಾನವರನ್ನು ನಾಗರಿಕರನ್ನಾಗಿ ಪರಿವರ್ತಿಸಿದ್ದಾರೆ. ಪ್ರಸ್ತುತ ಶೇಕಡ ೬೦ರಷ್ಟು ನಿಕೋಬಾರ್ ದ್ವೀಪಗಳ ಜನರು ಕ್ರೈಸ್ತ ಮತಕ್ಕೆ ಸೇರಿದವರಾಗಿದ್ದಾರೆ.

ಹಿಂದಿನ ಕಾಲದಲ್ಲಿ ಇಲ್ಲಿನ ಆದಿಮಾನವರು ಹೊರಗಿನ ಜನರನ್ನು ನೋಡಿದ್ದೆ ವಿಷ ಬಾಣಗಳನ್ನು ಎಸೆದು ಅವರ ಮೇಲೆ ದಾಳಿ ನಡೆಸುತ್ತಿದ್ದರು. ಇದನ್ನು ತಡೆಗಟ್ಟಲು ಬ್ರಿಟಿಷರ ಕಾಲದಲ್ಲಿ ಪೊಲೀಸ್ ಪಡೆಯೊಂದನ್ನು ಸ್ಥಾಪಿಸಿ ಅವರನ್ನು 'ಬುಷ್ ಪೊಲೀಸ್' ಎಂದು ಕರೆಯುತ್ತಿದ್ದರು. ಆನೆಗಳನ್ನು ಮರದ ದಿಮ್ಮಿಗಳನ್ನು ಸಾಗಿಸಲು ಉಪಯೋಗಿಸಿಕೊಳ್ಳುತ್ತಿದ್ದರು. ಅದು ಇಂದಿಗೂ ಮುಂದುವರಿದಿದೆ. ಪೋರ್ಟ್‌ಬ್ಲೇರ್‌ನ ಛಾಥಮ್‌ನಲ್ಲಿರುವ ಮರದ ಮಿಲ್ಲು ಏಷ್ಯಾದಲ್ಲೇ ದೊಡ್ಡದು. ದ್ವೀಪಗಳ ಮಧ್ಯೆ ಸಣ್ಣಸಣ್ಣ ಕೊಲ್ಲಿಗಳಿದ್ದು ಇವುಗಳ ಮೂಲಕ ದೋಣಿಗಳಲ್ಲಿ ದ್ವೀಪಗಳಿಗೆ ನಿರಾಯಾಸವಾಗಿ ಸಾಗಬಹುದಾಗಿದೆ. ನೆಲದ ಮೇಲೆ ಅಂದರೆ ದ್ವೀಪಗಳ ಒಳಗೆ ಬಸ್ಸು, ಕಾರುಗಳು ಓಡಾಡುತ್ತವೆ.

ಪೋರ್ಟ್‌ಬ್ಲೇರ್ ಅಂಡಮಾನ್-ನಿಕೋಬಾರ್ ದ್ವೀಪ ಸಮೂಹಗಳ ರಾಜಧಾನಿ. ಚೆನ್ನೈ, ಕಲ್ಕತ್ತಾ ಮತ್ತು ವಿಶಾಖಪಟ್ಟಣಂನಿಂದ ವಿಮಾನ ಮತ್ತು ಹಡಗುಗಳ ಮೂಲಕ ಈ ದ್ವೀಪಗಳಿಗೆ ಹೋಗಿ ಬರಬಹುದು. ಮೂರು ನಗರಗಳಿಂದಲೂ ಹೆಚ್ಚು ಕಡಿಮೆ ಪೋರ್ಟ್‌ಬ್ಲೇರ್ ೧೨೦೦ ರಿಂದ ೧೩೦೦ ಕಿ.ಮೀ. ದೂರದಲ್ಲಿದೆ. ಬಂಗಾಳ ಕೊಲ್ಲಿಯ ಮಧ್ಯದಲ್ಲಿರುವ ಪೋರ್ಟ್‌ಬ್ಲೇರ್ ದ್ವೀಪ ಬಹಳ ಸುರಕ್ಷಿತವಾದ ಹಡಗುದಾಣ ಮತ್ತು ವಿಮಾನ ನಿಲ್ದಾಣವನ್ನು ಹೊಂದಿದೆ. ಸುತ್ತಲೂ ಹಸಿರು ಪರ್ವತಗಳು, ನೀಲಿ ಸಮುದ್ರದ ಮಧ್ಯೆ ಇರುವ ಈ ದ್ವೀಪಗಳು ಉದಕಮಂಡಲದಂತೆ ಕಾಣಿಸುತ್ತವೆ.

ಪೋರ್ಟ್‌ಬ್ಲೇರ್ ದ್ವೀಪದಲ್ಲಿರುವ ಹಲವು ಬಂದರುಗಳಲ್ಲಿ 'ಹಡ್ಡೊ' ಹಡಗುದಾಣ ಮುಖ್ಯವಾದುದು. ಚೆನ್ನೈ, ಕಲ್ಕತ್ತಾ ಮತ್ತು ವಿಶಾಖಪಟ್ಟಣಂನಿಂದ ಭಾರಿ ಗಾತ್ರದ ಹಡಗುಗಳು ಹಡ್ಡೊ ಹಡಗುದಾಣದಲ್ಲಿ ಲಂಗರು ಹಾಕಿ ನಿಲ್ಲುತ್ತವೆ. ಸುತ್ತಮುತ್ತಲಿನ ದ್ವೀಪಗಳ ನಡುವೆ ಓಡಾಡುವ ದೋಣಿಗಳು ಮ್ಯಾರೈನ್ ಮತ್ತು ಫೀನಿಕ್ಸ್ ತಾಣಗಳಲ್ಲಿ ಬಂದು ನಿಲ್ಲುತ್ತವೆ. ಹೊರ ದೇಶಗಳಿಂದಲೂ ಭಾರಿ ದೊಡ್ಡದಾದ ವಿಶೇಷ ಹಡಗುಗಳು ಇಲ್ಲಿಗೆ ಬಂದುಹೋಗುತ್ತವೆ. ಕ್ವೀನ್ ಎಲಿಝಬೆತ್, ಯೂರೋಪ್, ಪೆರಲ್ ಇತ್ಯಾದಿ ಹೆಸರಿನ ಹಡಗುಗಳು ಯೂರೋಪ್ ದೇಶಗಳಿಂದ ಬರುತ್ತವೆ.

**ರಂಗೆಟ್ :**

ಅಂಡಮಾನ್ ದ್ವೀಪಗಳ ಮಧ್ಯೆ ಇರುವ ಈ ದ್ವೀಪ ಪೋರ್ಟ್‌ಬ್ಲೇರ್‌ನಿಂದ ೮೫ ಕಿ.ಮೀ. ದೂರದಲ್ಲಿದೆ. ಪೋರ್ಟ್‌ಬ್ಲೇರ್‌ನಿಂದ ಬಸ್ಸು ಮತ್ತು ದೋಣಿಗಳಲ್ಲಿ ಹೋಗಿ ಬರಬರಲು ವ್ಯವಸ್ಥೆಯಿದೆ. ಈ ದಾರಿಯಲ್ಲಿ ದೋಣಿಗಳನ್ನು ಹಿಮ್ಮೆಟ್ಟಿ ಬರುವ ಡಾಲ್ಫಿನ್‌ಗಳನ್ನು ನೋಡುವುದು ರೋಮಾಂಚನಕಾರಿಯದ ಅನುಭವವಂತೆ. ಎರಡೂ ಕಡೆ ಹಚ್ಚ ಹಸಿರು ದ್ವೀಪಗಳನ್ನು ನೋಡುತ್ತಾ ಹೋಗುವುದೂ ಅಷ್ಟೇ ಸುಂದರವಾದ ಅನುಭವವಾಗಿದೆ.

**ಮಾಯಾಬಂದರು :**

ಈ ದ್ವೀಪ ಪೋರ್ಟ್‌ಬ್ಲೇರ್‌ನಿಂದ ಉತ್ತರಕ್ಕೆ ೧೬೦ ಕಿ.ಮೀ. ದೂರದಲ್ಲಿದೆ. ಇದು ಸಮತಟ್ಟಾದ ಅಪರೂಪದ ದಂಡೆಗಳಿಂದ ಕೂಡಿದೆ. ಮಾಯಾಬಂದರಿನ ಕಾಲಿಘಾಟ್ ಮತ್ತು ದಿಗ್ಗಿಪುರಕ್ಕೆ ಹೋಗುವ ದಾರಿ ಸುಂದರವಾದದ್ದು. ಪೋರ್ಟ್‌ಬ್ಲೇರ್‌ನಿಂದ ಇಲ್ಲಿಗೆ ಹಡಗು ಮತ್ತು ಬಸ್ಸುಗಳಲ್ಲಿ ಹೋಗಬಹುದು. ಬಸ್ಸುಗಳಲ್ಲಿ ಹೋಗುವ ದಾರಿ ಕಾಡು ಕಣಿವೆಗಳ ಮಧ್ಯೆ ಅತಿಸುಂದರ ಮತ್ತು ಉಲ್ಲಾಸಭರಿತವಾಗಿರುವುದು.

**ದಿಗ್ಗಿಪುರ :**

ಪೋರ್ಟ್‌ಬ್ಲೇರ್‌ನಿಂದ ಉತ್ತರಕ್ಕೆ ೧೮೫ ಕಿ.ಮೀ. ದೂರದಲ್ಲಿರುವ ಈ ದ್ವೀಪವನ್ನು ಅಂಡಮಾನ್-ನಿಕೋಬಾರ್‌ನ **'ಭತ್ತದ ಕಣಜ'** ಎನ್ನುತ್ತಾರೆ. ಇದೇ ದ್ವೀಪದ ಪರ್ವತ ಕಣಿವೆಗಳ ಮಾಲೆಯಲ್ಲಿ ೭೩೨ ಮೀ. ಎತ್ತರದ ಶಿಖರವಿದ್ದು ಇದು ಅಂಡಮಾನ್ ದ್ವೀಪಗಳಲ್ಲೇ ಅತಿ ಎತ್ತರವಾದ ಶಿಖರ ಎನ್ನುತ್ತಾರೆ. ಪರ್ವತಾರೋಹಿಗಳಿಗೆ ಇದು ಒಳ್ಳೆಯ ಸ್ಥಳವಾಗಿದ್ದು, ಹಾಗೆಯೇ ಇಡೀ ಅಂಡಮಾನ್ ದ್ವೀಪಗಳಲ್ಲಿರುವ ಒಂದೇ ಒಂದು ನದಿ ಕಲ್‌ಪೊಂಗ್ ಇಲ್ಲಿನ ಕಣಿವೆಗಳನ್ನು ದಾಟಿ ಸಮುದ್ರ ತಲುಪುತ್ತದೆ.

**ನಿಕೋಬಾರ್ :**

ನಿಕೋಬಾರ್ ದ್ವೀಪ ಸಮೂಹದಲ್ಲಿ ಒಟ್ಟು ೨೮ ದ್ವೀಪಗಳಿವೆ. ಇವುಗಳ ಒಟ್ಟು ಭೂ ವಿಸ್ತೀರ್ಣ ೧೮೪೧ ಚದರ ಕಿ.ಮೀ. ಈ ದ್ವೀಪಗಳ ಸಮೂಹ ಅಂಡಮಾನ್ ದ್ವೀಪಗಳಿಂದ ೧೦ ಡಿಗ್ರಿ ಸರಪಳಿ ನೆಟ್‌ನಿಂದ ಪ್ರತ್ಯೇಕಗೊಂಡಿವೆ. ನಿಕೋಬಾರ್ ದ್ವೀಪಗಳಲ್ಲಿ ತಾಳೆ ಮರಗಳು, ತೆಂಗಿನ ಮರಗಳು, ಕ್ಯಾಸುರೈನ್ ಮತ್ತು ಪಂಡುನಾಸ್ ಮರಗಳು ಇವೆ. ಗ್ರೇಟ್‌ಲಿಟ್ಲ್ ನಿಕೋಬಾರ್‌ನಲ್ಲಿ ಸಮುದ್ರ ಏಡಿಕಾಯಿಗಳನ್ನು ತಿನ್ನುವ ಉದ್ದ ಬಾಲದ ಪಕ್ಕು ಕೋತಿಗಳು ಬಹಳವಾಗಿ ವಾಸಿಸುವುದು ಇಲ್ಲಿನ ವಿಶೇಷ. 'ನಿಕೋಬಾರ್' ಎಂಬ ಗಿಳಿಗಳು ಮತ್ತು ಅಪರೂಪವಾದ 'ಮೆಗಾಪೊಡ್' ಹೆಸರಿನ ಪಕ್ಷಿಗಳು ಇಲ್ಲಿ ವಾಸಿಸುತ್ತವೆ.

**ಕಾರ್ ನಿಕೋಬಾರ್ :**

೧೨೭ ಚದರ ಕಿ.ಮೀ. ವಿಸ್ತೀರ್ಣ ಇರುವ ಈ ದ್ವೀಪವನ್ನು **'ಮರ್ಮರ ಆಟದ ದ್ವೀಪ'** ಎಂದು ಕರೆಯುತ್ತಾರೆ. ತೆಂಗಿನ ತೋಪುಗಳ ಈ ದ್ವೀಪ ಸಮತಟ್ಟಾಗಿದೆ. ಗುಂಪು ಗುಂಪು ತೆಂಗಿನ ಮರಗಳ ಮಧ್ಯೆ ಮಧ್ಯೆ ಇರುವ ನಿಕೋಬಾರಿಗಳ ಗುಡಿಸಲುಗಳು ಇಲ್ಲಿನ ವಿಶೇಷ ಆಕರ್ಷಣೆಯಾಗಿವೆ. ಮರಗಾಲುಗಳಲ್ಲಿ ನಿರ್ಮಿಸಿರುವ ಮರದ ಮೆಟ್ಟಿಲು ಏರಿ ಗುಡಿಸಲುಗಳನ್ನು ತಲುಪಬೇಕು. ಮನೆಗಳ ಮುಂದೆ ಭೂತ ದೆವ್ವಗಳ ರೂಪದ ಬೊಂಬೆಗಳನ್ನು ಮಾಡಿ ನೇತು ಹಾಕುವುದು ಅವರ ಸಂಪ್ರದಾಯವಾಗಿದೆ. ಅವುಗಳ ಜೊತೆಗೆ ಭರ್ಜಿಗಳನ್ನು ಕೈಯಲ್ಲಿ ಹಿಡಿದು ನಿಂತಿರುವ ಬೊಂಬೆಗಳನ್ನು ತಮ್ಮ ಸಂಸ್ಕೃತಿಯ ಪ್ರತೀಕವಾಗಿ ಕಾಣುತ್ತಾರೆ.

**ಲಿಟ್ಲ್ ಅಂಡಮಾನ್ :**

ಈ ದ್ವೀಪದಲ್ಲಿ ವಾಸಿಸುತ್ತಿದ್ದ 'ಓಂಗೀಸ್' ಆದಿವಾಸಿಗಳು ಮೊದಲಿಗೆ ಬ್ರಿಟಿಷರ ಜೊತೆಗೆ ಬಿಲ್ಲು ಬಾಣಗಳೊಂದಿಗೆ ಹೋರಾಡಿ ಸೋತು ಹೋದರು. ಅನಂತರ ಅವರ ಸಂಖ್ಯೆ ತೀರಾ ಕಡಿಮೆಯಾಗಿ ಅವರ ವಂಶವೇ ನಶಿಸಿಹೋಗುವ ಹಂತಕ್ಕೆ ತಲುಪಿತು. ಪ್ರಸ್ತುತ ಓಂಗೀಸ್ ಜನರು ಹಟ್‌ಬೇಯಿಂದ ಕೆಲವು ಕಿ.ಮೀ. ದೂರದಲ್ಲಿರುವ 'ಡುಂಗೊಂಗ್' ಎಂಬ ಹೆಸರಿನ ಕೊಲ್ಲಿಯ ಮಧ್ಯದಲ್ಲಿ ವಾಸಿಸುತ್ತಿದ್ದಾರೆ. ಅವರನ್ನು ನೋಡಬೇಕಾದರೆ ಸ್ಥಳೀಯ ಆಡಳಿತದ ಅಪ್ಪಣೆ ಮೇರೆಗೆ ಹೋಗಿ ಅವರ ಆದಿವಾಸಿ ಬದುಕನ್ನು ನೋಡಬಹುದು. ಲಿಟ್ಲ್ ಅಂಡಮಾನ್ ದ್ವೀಪಕ್ಕೆ ಹೋಗುವ ಮುಂಭಾಗವೆ ಹಟ್‌ಬೇ ಹಡಗುದಾಣ. ಇಲ್ಲಿ ಕಟ್ಟಿರುವ ಸಣ್ಣ ಅಣೆಕಟ್ಟು ಅಪರೂಪವಾದುದು. ದ್ವೀಪದ ಮಧ್ಯದಲ್ಲಿರುವ ೨,೪೦೦ ಚದರ ಹೆಕ್ಟೇರಿನ ಕೆಂಪು ಮಣ್ಣಿನ ಪ್ರದೇಶ. ಹಟ್‌ಬೇಯಿಂದ ಕೇವಲ ೫ ಕಿ.ಮೀ. ದೂರದಲ್ಲಿ ನಿಕೋಬಾರಿಗಳು ನೆಲೆಸಿದ್ದಾರೆ.

**ಅಂಡಮಾನ್ ಟ್ರಂಕ್ ರಸ್ತೆ :**

ಪೋರ್ಟ್‌ಬ್ಲೇರ್-ದಿಗ್ಲಿಪುರ ಮಧ್ಯೆ ಸಾಗುವ ರಸ್ತೆ ೩೩೩ ಕಿ.ಮೀ. ಉದ್ದ ಇದ್ದು, ಈ ರಸ್ತೆಯಲ್ಲಿ ಅನೇಕ ಆದಿವಾಸಿಗಳು ವಾಸಿಸುವ ಸ್ಥಳಗಳು ಸಿಕ್ಕುತ್ತವೆ. ಉತ್ತರ, ಮಧ್ಯೆ ಮತ್ತು ದಕ್ಷಿಣ ಅಂಡಮಾನ್ ದ್ವೀಪಗಳ ಮೂಲಕ ಸಾಗುವ ಈ ರಸ್ತೆಯಲ್ಲಿ ದಟ್ಟ ಕಾಡುಗಳು, ಸಾವಿರಾರು ವರ್ಷಗಳ ಪುರಾತನ ಮರಗಳು, ಅನೇಕ ರೀತಿಯ ಕಾಡು ಪ್ರಾಣಿಗಳನ್ನು ನೋಡಬಹುದು. ಮಧ್ಯೆ ಮಧ್ಯೆ ಕೊಲ್ಲಿಗಳ ಮೂಲಕ ಹಾದು ಹೋಗಬೇಕು. ಅಂದರೆ ಬಸ್ಸು ಮತ್ತು ದೋಣಿಗಳಲ್ಲಿ ಬದಲಿಸುತ್ತಾ ಪ್ರಯಾಣಿಸಬೇಕು. ಈ ರಸ್ತೆಯಲ್ಲಿನ ಪ್ರಯಾಣ ಅತಿ ರೋಮಾಂಚನಕಾರಿ ಮತ್ತು ಅಪಾಯಕಾರಿಯಾದ ಅನುಭವಗಳನ್ನು ಪ್ರಯಾಣಿಕರಿಗೆ ನೀಡುತ್ತದೆ.

**ಗ್ರೇಟ್ ನಿಕೋಬಾರ್ :**

ಕ್ಯಾಂಪ್ ಬೆಲ್ ಬೇ ಪೋರ್ಟ್‌ಬ್ಲೇರ್‌ನಿಂದ ೨೯೪ ನಾಟಿಕಲ್ ಮೈಲು (ಒಂದು ನಾಟಿಕಲ್ ಮೈಲು ೧.೨ ಕಿ.ಮೀ) ದೂರವಿದ್ದು ಇದು ಗ್ರೇಟ್ ನಿಕೋಬಾರ್ ದ್ವೀಪಗಳ ಕೇಂದ್ರ ಸ್ಥಳ. ಈ ದ್ವೀಪ ಅತಿ ದೊಡ್ಡದಾದ ದ್ವೀಪವಾಗಿದ್ದು, ಇದರಲ್ಲಿ ಅತಿ ಎತ್ತರದ ಬೆಟ್ಟ ಕಣಿವೆಗಳ ಜೊತೆಗೆ 'ಅಲೆಕ್ಸಾಂಡ್ರಿಯಾ' ಮತ್ತು 'ಗಲಾಥಿಯಾ' ಹೆಸರಿನ ನದಿಗಳೂ ಇವೆ. ಈ ದ್ವೀಪದಲ್ಲಿ ಮೂಲವಾಗಿ ಅತ್ಯಂತ ನಾಚಿಕೆ ಮತ್ತು ಸೌಮ್ಯ ಸ್ವಭಾವದ **'ಶೊಂಪೇನ್ ಆದಿವಾಸಿಗಳು'** ವಾಸಿಸುತ್ತಿದ್ದು, ಪಶ್ಚಿಮ ಭಾಗದಲ್ಲಿ ಕೆಲವು ನಿಕೋಬಾರಿಗಳೂ ಇದ್ದಾರೆ.

ಭಾರತ ಸ್ವಾತಂತ್ರ್ಯ ಪಡೆದ ಮೇಲೆ ೧೯೬೮ರಲ್ಲಿ ಸೈನ್ಯದಿಂದ ನಿವೃತ್ತಿ ಪಡೆದ ಪಂಜಾಬಿ ಕುಟುಂಬಗಳನ್ನು ಇಲ್ಲಿಗೆ ಕಳುಹಿಸಿ ಕೊಡಲಾಯಿತು. ಅವರು ಮೊದಲ ಬೆಳೆ ತೆಗೆಯುವವರೆಗೂ ಸರಕಾರವೇ ಎಲ್ಲವನ್ನೂ ನೋಡಿಕೊಳ್ಳುತ್ತಿತ್ತು. ಮನೆ ಕಟ್ಟಿಕೊಳ್ಳುವುದಕ್ಕೆ, ಟ್ರ್ಯಾಕ್ಟರ್ ಕೊಂಡುಕೊಳ್ಳುವುದಕ್ಕೆ, ಬೀಜ, ಗೊಬ್ಬರ, ಎತ್ತು ಆಕಳುಗಳನ್ನು ಕೊಳ್ಳಲು ಆರ್ಥಿಕ ಸಹಾಯ ಮಾಡಿತ್ತು. ಅನಂತರ ದೇಶದ ಇತರ ನಿವೃತ್ತ ಸೈನಿಕರ ಕುಟುಂಬಗಳನ್ನು ಇಲ್ಲಿನ ದ್ವೀಪಗಳಿಗೆ ಆಹ್ವಾನಿಸಲಾಯಿತು. ಪ್ರಸ್ತುತ ಪಂಜಾಬಿ, ಹರಿಯಾಣ, ಉತ್ತರಪ್ರದೇಶ, ತಮಿಳುನಾಡು, ಕೇರಳ, ಆಂಧ್ರಪ್ರದೇಶ, ಮಹಾರಾಷ್ಟ್ರ ಮತ್ತು ಕರ್ನಾಟಕದವರು ಇದ್ದಾರೆ. ಇಲ್ಲೊಂದು ಮಿನಿ ಭಾರತವೇ ಅತಿ ಸೌಹಾರ್ದತೆಯಿಂದ ಬದುಕು ಕಟ್ಟಿಕೊಂಡಿದೆ.

**ಇಂದಿರಾಪಾಯಿಂಟ್ :**

ಗ್ರೇಟ್ ನಿಕೋಬಾರ್ ದ್ವೀಪಗಳ ದಕ್ಷಿಣದ ಕೊನೆ ದ್ವೀಪವೇ ಇಂದಿರಾ ಪಾಯಿಂಟ್. ಇದು ದೇಶದ ಕೊನೆ ಭಾಗವಾಗಿದ್ದು ಅತಿ ಸುಂದರ ಮತ್ತು ಭಯ ಹುಟ್ಟಿಸುವ ಪ್ರದೇಶವಾಗಿದೆ. 'ಗಲೊಥಿಯಾ' ನದಿ ಇಲ್ಲಿಯವರೆಗೂ ಹರಿದು ಬಂದು ಸಮುದ್ರ ಸೇರುತ್ತದೆ. ಈ ಸ್ಥಳದಲ್ಲಿ ಲೈಟ್ ಹೌಸ್ ಇದ್ದು ಅಂತರಾಷ್ಟ್ರೀಯ ಹಡಗುಗಳಿಗೆ ಇದು ಜಾರಿ ತೋರಿಸುತ್ತದೆ. ಬಹಳ ವಿಶೇಷವಾದ ಕೋತಿಗಳು ಇಲ್ಲಿ ಕಾಣಿಸುತ್ತವೆ. ಪ್ರಪಂಚದಲ್ಲಿಯೇ ಅತಿ ಎತ್ತರ ಮತ್ತು ಪುರಾತನ ಮರಗಳು ಇಲ್ಲಿ ಕುತಬ್ ಮಿನಾರ್‌ನಷ್ಟು ಎತ್ತರವಾಗಿ ಬೆಳೆದುನಿಂತಿವೆಯಂತೆ. ಇಲ್ಲಿಂದ ಅಂದರೆ ಗಲೊಥಿಯಾ ನದಿಯಲ್ಲಿ ದೋಣಿಗಳಲ್ಲಿ ಹೋಗಬಹುದು. ಈ ದಾರಿ ಅತಿ ರಮಣೀಯವಾಗಿದ್ದು ದಟ್ಟ ಕಾಡುಗಳ ಮಧ್ಯೆ ಬದುಕುತ್ತಿರುವ ಆದಿಮಾನವರ ವಾಸಸ್ಥಳಗಳನ್ನು ನೋಡಬಹುದು.

**ಹ್ಯಾರಿಯೆಟ್ ಪರ್ವತ :**

ಹ್ಯಾರಿಯೆಟ್ ಬೆಟ್ಟ ಛಾಥಮ್ ದ್ವೀಪದಿಂದ ಉತ್ತರಕ್ಕೆ ೧೨೦೦ ಅಡಿಗಳ ಎತ್ತರಕ್ಕೆ ಎದ್ದು ಕಾಣಿಸುತ್ತದೆ. ಪೋರ್ಟ್‌ಬ್ಲೇರ್‌ನಿಂದ ೨ ಗಂಟೆ ದಾರಿ ಸವೆದರೆ ಬೆಟ್ಟದ ತುದಿಗೆ ಹೋಗಬಹುದು.

ಪೋರ್ಟ್‌ಬ್ಲೇರ್‌ನ ಮ್ಯಾರೈನ್ ಹಡಗುದಾಣದಿಂದ ೧೦ ನಿಮಿಷ ದೋಣಿಯಲ್ಲಿ ಸಾಗಿ ಹೋಪ್‌ಟೌನ್‌ನಲ್ಲಿ ಇಳಿದು ಅಲ್ಲಿಂದ ೩೦ ನಿಮಿಷ ನಡೆದು ಹೋದರೆ ಬೆಟ್ಟದ ತುತ್ತ ತುದಿಗೆ ಸೇರಬಹುದು. ಇದೊಂದು ರಮಣೀಯ ಪ್ರದೇಶವಾಗಿದ್ದು ಇಲ್ಲಿಂದ ಇಡೀ ಪೋರ್ಟ್‌ಬ್ಲೇರ್, ನೀಲ್ ಮತ್ತು ಹ್ಯಾವ್‌ಲಾಕ್ ದ್ವೀಪಗಳ ವಿಹಂಗಮ ನೋಟ ಕಣ್ಣಿಗೆ ಬಹು ಸುಂದರವಾಗಿ ಕಾಣಿಸುತ್ತದೆ. ಬ್ರಿಟಿಷರ ಕಾಲದಲ್ಲಿ ಚೀಫ್ ಕಮೀಷನರ್ ಬೇಸಿಗೆ ದಿನಗಳಲ್ಲಿ ಇಲ್ಲಿ ಕಾಲ ಕಳೆಯಲು ಈ ಸ್ಥಳವನ್ನು ಉಪಯೋಗಿಸುತ್ತಿದ್ದರಂತೆ.

**ಛಾಥಮ್ :**

ಇಲ್ಲಿ ಬ್ರಿಟಿಷರ ಕಾಲದಲ್ಲಿ ಸ್ಥಾಪಿಸಿದ ಸಾಮಿಲ್ಲು ಏಷ್ಯಾದಲ್ಲೇ ಹಳೆಯ ಮತ್ತು ಅತಿ ದೊಡ್ಡದು. ಈ ಪುಟ್ಟ ಛಾಥಮ್ ದ್ವೀಪದಿಂದ ಪೋರ್ಟ್‌ಬ್ಲೇರ್ ದ್ವೀಪದ ಮಧ್ಯೆ ಸೇತುವೆ ಕಟ್ಟಲಾಗಿದೆ ಈ ದ್ವೀಪಕ್ಕೆ ಒಳ್ಳೆಯ ಬಂದರಿನ ವ್ಯವಸ್ಥೆ ಇದೆ. ಅಂಡಮಾನ್ ದ್ವೀಪಗಳಲ್ಲಿ ಅತಿ ಉತ್ಕೃಷ್ಟವಾದ ಮತ್ತು ಎತ್ತರವಾದ ಮರಗಳು ದೊರಕುತ್ತವೆ. ೧೮೮೩ರಲ್ಲಿ ಸ್ಥಾಪನೆಯಾದ ಈ ಮಿಲ್ಲಿನ ಮೇಲೆ ಎರಡನೇ ವಿಶ್ವ ಮಹಾಯುದ್ಧದಲ್ಲಿ ಬಾಂಬುಗಳು ಬಿದ್ದು ಧ್ವಂಸವಾಯಿತು. ಅನಂತರ ಇದನ್ನು ರಿಪೇರಿ ಮಾಡಲಾಗಿದೆ. ಈಗ ಈ ಮಿಲ್ಲಿನ ವಾರ್ಷಿಕ ಆದಾಯ ೬ ಕೋಟಿಗಳಿಗಿಂತಲೂ ಹೆಚ್ಚು ಎಂದು ತಿಳಿದುಬರುತ್ತದೆ.

ಬಾರಾಟಂಗ್-ಕಡಂತಲ್-ಯರ್ರಟ್‌ಗೆ ಹೋಗುವ ಕೊಲ್ಲಿ ದಾರಿಗಳು ಅತಿ ಸುಂದರವಾದವು. ಮಾಯಾಬಂದರ್-ಕಾಲಾಘಾಟ್‌ಗೆ ಹೋಗುವ ಕೊಲ್ಲಿ ದಾರಿ ಕೂಡ ಅಷ್ಟೇ ಸುಂದರವಾದುದು. ಕೊಲ್ಲಿಗಳ ಎರಡೂ ಕಡೆ ಹಚ್ಚ ಹಸಿರು ದ್ವೀಪಗಳನ್ನು ನೋಡುತ್ತಾ ದೋಣಿಗಳಲ್ಲಿ ಸಾಗುವುದು ಅದ್ಭುತ ಅನುಭವ. ಕೆಲವು ಕಡೆ ದೋಣಿಗಳಲ್ಲಿ ಸಾಗುತ್ತಿರುವಾಗ ಡಾಲ್ಫಿನ್‌ಗಳು ಹಿಂಬಾಲಿಸಿಕೊಂಡು ಬರುತ್ತವೆ. ಮಾಯಬಂದರು ಮತ್ತು ನಿಕೋಬಾರ್‌ಗೆ ಹೋಗುವಾಗಲೂ ಈ ರೀತಿಯ ಅನುಭವಗಳು ದೊರಕುತ್ತವೆ.

**ಇ) ವಿವಿಧ ಸಾಮಾಜಿಕ ಸ್ತರಗಳ ಮುಖಾಂತರ ಕಾಣುವ ಅಂಡಮಾನ್:**

ಕೆ.ಪಿ ಪೂರ್ಣಚಂದ್ರ ತೇಜಸ್ವಿಯವರು ಪ್ರವಾಸವನ್ನು ಕುರಿತಂತೆ "ಯಾರಿಗೆ ತಾವಿರುವಲ್ಲೇ ಸಂತೋಷ, ಉತ್ಸಾಹ, ಕುತೂಹಲಗಳಿರುವುದಿಲ್ಲವೋ ಅವರು ಅದನ್ನು ಹುಡುಕಿಕೊಂಡು ಎಲ್ಲಿಗೇ ಪ್ರವಾಸ ಹೋದರೂ ಅದು ವ್ಯರ್ಥ. ಆದ್ದರಿಂದ ನಾನು ಅಂಡಮಾನಿಗೆ ಹೋದುದ್ದಕ್ಕೂ, ಹೋಗದಿದ್ದದಕ್ಕೂ ಹೆಚ್ಚಿನ ವ್ಯತ್ಯಾಸವನ್ನೇನು ಕಾಣಲಿಲ್ಲ."[*೧] ಎಂದು ಪ್ರವಾಸದ ಬಗ್ಗೆ ತಮ್ಮದೇ ಆದ ನಿರ್ವಚನೆಯನ್ನು ನೀಡಿದ್ದಾರೆ.

---

ಅಡಿಟಿಪ್ಪಣಿ: *೧. ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್: ತೇಜಸ್ವಿ ಪುಟ.೦೨

ಪ್ರವಾಸ ಎನ್ನುವುದು ವ್ಯಕ್ತಿಯೊಬ್ಬ ಸಂತೋಷ, ಉತ್ಸಾಹ, ಇವುಗಳನ್ನು ವ್ಯಕ್ತಿಯೊಬ್ಬ ಅರಸುತ್ತಾ ಹೊರಡುವುದು ಎಂಬುದು ಮೇಲ್ನೋಟಕ್ಕೆ ವೇದ್ಯವಾಗುವ ಸಂಗತಿ. ಹಾಗಾಗಿ ಇದು ಪ್ರವಾಸದ ಮೇಲ್ಚಿತ್ತಿಯ ಪ್ರಶ್ನೆ ಮತ್ತು ವ್ಯಾಖ್ಯಾನವೆಂದು ಹೇಳಬಹುದು. ಆದರೆ ತೇಜಸ್ವಿಯಂಥವರು ಅಂಡಮಾನ್ ಕುರಿತಂತೆ "ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್" ಎಂಬಂಥಹ ಪ್ರವಾಸ ಕಥನವನ್ನು ರಚಿಸಿದ್ದಾರೆ. ಸದಾ ಕಾಲ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಒತ್ತಡಗಳನ್ನು ಮೀರಿ ಬದುಕುವ ತೇಜಸ್ವಿಯಂಥವರು ಈ ಪ್ರವಾಸ ಕೃತಿಯಲ್ಲಿಯೂ ಕೂಡ ಹೊಸ ಹೊಸ ನೋಟಗಳನ್ನು ನೀಡಲೆತ್ನಿಸಿದ್ದಾರೆ. ತೇಜಸ್ವಿಯವರು ತಮ್ಮ ಅಲೆಮಾರಿಯ ಅಂಡಮಾನ್.... ಪ್ರವಾಸಿ ಕಥನದಲ್ಲಿ ಪ್ರವಾಸದ ಕುರಿತಾಗಿ ಶೀರ್ಷಿಕೆಯ ಅನುಸಾರವಾಗಿಯೇ ಅಂಡಮಾನ್‌ನನ್ನು ನೋಡಲೆತ್ನಿಸಿದ್ದಾರೆ. ಈ ಮುಖಾಂತರವಾಗಿಯೂ ಕೂಡ ನಾವು ಈ ಪ್ರವಾಸ ಕಥನಗಳನ್ನು ಪ್ರವೇಶಿಸ ಬಹುದಾಗಿದೆ.

ಇಲ್ಲಿನ ಮೂಲನಿವಾಸಿಗಳು ಆಧುನಿಕತೆಯ ನಾಗರೀಕತೆಗೆ ತಮ್ಮನ್ನು ಸಮರ್ಪಿಸಿಕೊಳ್ಳದೇ ತಮ್ಮ ತನ, ತಮ್ಮ ಸಂಸ್ಕೃತಿ, ಆಚಾರ ನಡೆ, ನುಡಿ, ಭಾಷೆಗಳನ್ನು ಕಾಪಾಡಿಕೊಂಡು ಬರುತ್ತಾ ಇರುವುದು ಬಹಳ ವಿಶೇಷ. ನಾಗರೀಕ ಸಮುದಾಯದವರು ಅಲ್ಲಿನ ಬುಡಕಟ್ಟಿನ ಮೇಲೆ ತಮ್ಮ ಸ್ವಾರ್ಥದ ಕೂಪಕ್ಕೆ ಸೆಳೆಯಲು ವಿಫಲವಾಗುತ್ತಿದ್ದು. ಬುಡಕಟ್ಟುಗಳು ತಮ್ಮ ಆಚಾರವನ್ನು ಬಿಟ್ಟು ಕೊಟ್ಟಿಲ್ಲ. ನಾಗರೀಕ ವ್ಯಕ್ತಿಗಳು ಇವರ ಬಗೆಗಿನ ಅಧ್ಯಯನಕ್ಕೆ ಹೋದಾಗ ಸಾವನ್ನು ಬಹುಮಾನವಾಗಿ ಪಡೆದ ಅಂಶಗಳನ್ನ ನಾವು ಓದಿದ್ದೇವೆ. ನಾಗರೀಕ ಸಂಸ್ಕೃತಿಗೆ ತಮ್ಮನ್ನು ಅರ್ಪಿಸಿಕೊಳ್ಳದೇ ತಮ್ಮ ಸಂಸ್ಕೃತಿ, ಆಚಾರ ಸಂಪ್ರದಾಯಗಳ ಉಳಿವಿಗಾಗಿ ಹೋರಾಟವನ್ನು ನಡೆಸುತ್ತಿದ್ದಾರೆ. ಈ ರೀತಿಯಿಂದ ಬುಡಕಟ್ಟಿನ ಜನರು ಶಿಕ್ಷಿತರಾಗದೆ, ಸಾಂಪ್ರದಾಯಿಲ ನೆಲೆಯಲ್ಲಿಯೇ ಇದ್ದಾರೆ. ಯಾವುದೇ ಸ್ವಾರ್ಥ ಮೋಸಗಳನ್ನು ಕಾಣದ ಜನ ಇವರು. ಇಲ್ಲಿನ ಮೂಲನಿವಾಸಿಗಳ ಪ್ರಮುಖ ಕಾರಣಗಳೆಂದರೆ ಓಂಗೆಗಳು, ಜಾರವಾಗಳು. ಶೋಂಬಿಯನ್ನರು, ಸೆಂಟಿನೆಲ್ಲರು, ನಿಕೋಬಾರಿಯವರು ಬದಲಾಗುತ್ತಿರುವ ಸಂಸ್ಕೃತಿಕ ನಾಗರೀಕತೆಗಳ ಪ್ರಭಾವಕ್ಕೆ ಒಳಗಾಗಿ ಶಿಕ್ಷಣ, ಉದ್ಯೋಗ ಮತ್ತು ಫ್ಯಾಷನ್ನುಗಳಿಗೆ ತೆರೆದುಕೊಂಡಿದ್ದಾರೆಯೇ ಹೊರತು ಮಿಕ್ಕ ಜನ ಜಾತಿಗಳು ಸರಕಾರದ ತಡೆಯಿಲ್ಲದ ಪ್ರಯತ್ನಗಳಿಂದ ವಂಚಿತರಾಗಿ ದಟ್ಟವಾದ ಅರಣ್ಯದಲ್ಲಿಯೇ ತಮ್ಮ ನೆಲೆಯನ್ನು ಕಂಡುಕೊಂಡಿದ್ದಾರೆ. ಇಲ್ಲಿನ ಹೆಚ್ಚಿನ ಜನರು ಬಂಗಾಳದ ನಿವಾಸಿಗಳಾಗಿದ್ದಾರೆ.

ಪ್ರವಾಸ ಸಾಹಿತ್ಯದಿಂದ ಬೇರೆ ಬೇರೆ ದೇಶ ವಿದೇಶಗಳ ಸಂಸ್ಕೃತಿ ಪರಿಚಯ ಮಾಡಿಕೊಳ್ಳುವಾಗ ನಮಗೆ ಅಲ್ಲಿಯ ಇತಿಹಾಸ ಭೂಗೋಳಗಳ ಹಿನ್ನೆಲೆಗಳು ಅತೀ ಮಹತ್ವದ್ದಾಗಿ ಕಾಣುತ್ತವೆ. ಇವುಗಳನ್ನು ತಿಳಿದುಕೊಳ್ಳುವಾಗ ಅಲ್ಲಿಯ ಜನರ ಸಾಮಾಜಿಕ, ರಾಜಕೀಯ

ಧಾರ್ಮಿಕ, ಆರ್ಥಿಕ, ಮುಂತಾದವುಗಳ ಸಂಸ್ಕೃತಿ ಸ್ಪಷ್ಟವಾಗಿ ಕಾಣುತ್ತದೆ. ಅವೆಲ್ಲದರ ಅಭ್ಯಾಸದಿಂದ ಅವುಗಳೊಳಗಿನ ಮಾನವ ಸ್ವಭಾವಗಳು, ಚಲನವಲನಗಳು, ಅವರ ನೂರಾರು ಸಂಸ್ಕೃತಿಗಳನ್ನು ತಿಳಿದುಕೊಳ್ಳುತ್ತೇವೆ. ಉದಾ: ದೇಶದ ಸ್ಥಿತಿಗತಿಗಳು, ಗ್ರಾಮ ಪಟ್ಟಣಗಳು, ಯುದ್ಧ ದಾಳಿಗಳು, ಮಹಾನ್ ವ್ಯಕ್ತಿಗಳು,ರಾಷ್ಟ್ರದ ಘನತೆ ಗಾಂಭೀರ್ಯ, ಸಾಹಿತ್ಯ, ಸಾಹಿತಿಗಳು, ಭಾಷೆ, ಸಂಗೀತ, ನೃತ್ಯ ಚಿತ್ರ ಕರಕುಶಲ ಕಲೆಗಳು, ಚಲನಚಿತ್ರ, ರಂಗಮಂದಿರ, ಕಲಾಕಾರರು, ವಾಸ್ತುಶಿಲ್ಪ, ವಸ್ತು ಸಂಗ್ರಹಾಲಯ, ಉದ್ದಿಮೆಗಳು, ಕಾರ್ಖಾನೆಗಳು, ಮಾರುಕಟ್ಟೆ, ಯೋಜನೆಗಳು ನ್ಯಾಯಾಂಗ, ಕಾನೂನು, ವಿಜ್ಞಾನ ತಂತ್ರಜ್ಞಾನ ಮುಂತಾದವುಗಳನ್ನು ಗುರುತಿಸಿಕೊಳ್ಳುತ್ತೇವೆ. ಈ ಎಲ್ಲ ವಿಷಯಗಳನ್ನು ಓದಲು, ಪರಿಚಯಿಸಿಕೊಳ್ಳಲು, ನಮ್ಮ ಸಂಸ್ಕೃತಿಗಳೊಂದಿಗೆ ಸಮಕಾಲೀನದಲ್ಲಿ ಚರ್ಚಿಸಿಕೊಳ್ಳಲು ಸಹಾಯವಾಗುತ್ತದೆ. ಈ ಎಲ್ಲ ಅನುಭವಗಳಿಂದ ಪ್ರವಾಸ ಸಾಹಿತಿಗಳ ಮತ್ತು ಓದುಗರ ಜ್ಞಾನ ಪ್ರಪಂಚ ಶ್ರೀಮಂತವಾಗುತ್ತದೆ.

ಪ್ರವಾಸ ಸಾಹಿತ್ಯ ಓದುಗರನ್ನು ಜ್ಞಾನ ಪ್ರಪಂಚಕ್ಕೆ ಕರೆದೊಯ್ಯ ಬೇಕಾದರೆ ಮೊದಲು ಪ್ರವಾಸ ಸಾಹಿತಿ ತನ್ನ ಸುತ್ತಲಿನ ವಾತಾವರಣಕ್ಕೆ ಸೂಕ್ಷ್ಮವಾಗಿ ಪ್ರಜ್ಞಾಪೂರ್ವಕವಾಗಿ ಹೊಂದುಕೊಳ್ಳುತ್ತ ಹೋಗಬೇಕಾಗುತ್ತದೆ. ಆಯಾ ಪ್ರದೇಶದ ಎಲ್ಲ ವಿಷಯಗಳ ಬಗೆಗೆ ಮೊದಲೇ ಅಚ್ಚುಕಟ್ಟಾಗಿ ಓದಿ ತಿಳಿದುಕೊಂಡಿದ್ದರಂತೂ ಇನ್ನೂ ಒಳ್ಳೆಯದು. ಸಮಕ್ಷಮದ ಸಂದರ್ಭದಲ್ಲಿ ಅದನ್ನು ಗ್ರಹಿಸಿಕೊಂಡು ತನ್ನ ಮಾತುಗಳ ಮುಖಾಂತರ ಅಭಿವ್ಯಕ್ತಪಡಿಸುತ್ತ ಹೋಗಬಹುದು.

ಆಧುನಿಕತೆಯು ಯಂತ್ರ ಅಂಡಮಾನಿನಲ್ಲಿ ನೆಲೆ ನಿಂತು. ಅಲ್ಲಿ ನಡೆಯುತ್ತಿರುವ ಅನೇಕ ಸಂಶೋಧನೆಗಳು, ಆವಿಷ್ಕಾರಗಳಿಗೇನು ತಾನು ಕಡಿಮೆಯಿಲ್ಲವೆಂಬುವಂತೆ ಸಂಶೋಧನೆಗಳು ನಡೆಯುತ್ತಿವೆ.

ಅಂಡಮಾನಿನಲ್ಲಿ ನಮಗೆ ನೋಡಬೇಕಾಗಿದ್ದವುಗಳೆಂದರೆ ಹಾರ್ಟಿಕಲ್ಚರ್ ವಿಭಾಗ, ಅನಿಮಲ್ ಹಸ್‌ಬೆಂಡರಿ, ಕ್ರಾಪ್ ಇಂಪ್ರೂವ್‌ಮೆಂಟ್ ವಿಭಾಗ, ಚಾತಮ್‌ನ ಮರದ ಕಾರ್ಖಾನೆ ಮಿನಿಜೂ, ಮ್ಯೂಸಿಯಂ ಮುಂತಾದವುಗಳಾಗಿದ್ದವು. ಇವುಗಳಲ್ಲಿ ಒಂದೊಂದು ಒಂದು ಮುಖ್ಯ ಮಾಹಿತಿಯಾಗಿದ್ದವು. ಇನ್ನೊಂದು ಅತಿಮುಖ್ಯವಾದದ್ದೆಂದರೆ ಸಿ.ಎ.ಆರ್.ಐ. (ಸೆಂಟ್ರಲ್ ಅಗ್ರಿಕಲ್ಚರಲ್ ರೀಸರ್ಚ್ ಇನ್ಸ್ಟಿಟ್ಯೂಟ್). ಭತ್ತದ ಬೆಳೆಯನ್ನು ಅಭಿವೃದ್ಧಿ ಪಡಿಸುವ ಮತ್ತು ಪಶುಪಾಲನಾ ಸಂಬಂಧವಾಗಿ ಸಂಶೋಧನೆಗಳು ನಡೆಯುತ್ತಿದ್ದವು. 4800ಹೆಕ್ಟೇರ್ ಪ್ರದೇಶದಲ್ಲಿ, 30,000 ಹೆಕ್ಟೇರ್ ಪ್ರದೇಶದಲ್ಲಿ ತೆಂಗು ಬಾಳೆ, ಪರಂಗಿ ಇತ್ಯಾದಿಗಳನ್ನೇ ಹೆಚ್ಚಾಗಿ ಬೆಳೆಯುತ್ತಿದ್ದಾರೆ. ಇಲ್ಲಿ 32 ಜಾತಿಯ ಬಾಳೆ, 17ಜಾತಿಯ ಪರಂಗಿ ಗಿಡಗಳಿವೆಯಂತೆ. ಹಾಲು ಹೈನುಗಾರಿಕೆಯ ಉತ್ಪತ್ತಿ ಪ್ರಮಾಣ ತೀರಾ ಕಡಿಮೆ. ಇಲ್ಲಿ ಹಸುಗಳಿಗೆ ಉಳಿಗಾಲವೇ ಇಲ್ಲ.

ಒಂದು ವಿಚಿತ್ರ ಪರಿಸ್ಥಿತಿ! ವಾತಾವರಣ 'ವಾಟರ್ ವಾಟರ್ ಎವೆರಿ ವೇರ್, ನಾಟ್ ಎ ಡ್ರಾಪ್ ಟು ಡ್ರಿಂಕ್ ಎನಿವೇರ್' ಎಂಬ ಗಾದೆಯಂತೆ ಎಲ್ಲಿ ನೋಡಿದರೂ ಕಣ್ಣಿಗೆ ಹಬ್ಬಿದಂತೆ ಹಸಿರು. ಸಸ್ಯಶ್ಯಾಮಲತೆ! ಆದರೆ ಹಸುಗಳಿಗೆ ಮೇವಾಗುವುದಿಲ್ಲ. ಯಾವುದೋ ರಾಸಯನಿಕ ಪದಾರ್ಥ, ಸೂಕ್ಷ್ಮ ಜೀವಾಣು ಹಸುಗಳನ್ನು ಕೊಲ್ಲುತ್ತಿದೆ. ಎಲ್ಲಿ ನೋಡಿದರೂ ರೋಗಗ್ರಸ್ತ ಬಡಕಲು ಹಸುಗಳು ಅನಾಥವಾಗಿ ಅಲೆಯುತ್ತಿರುತ್ತವೆ. ರೋಗ ನಿರೋಧಕಗಳನ್ನು ಚುಚ್ಚುಮದ್ದಾಗಿ ನೀಡಿದರೂ ಪರಿಹಾರವೇ ಇಲ್ಲದಂತಿದೆ. ಸಂಶೋಧನಗಳೇನೋ ನಡೆಯುತ್ತಿವೆ....ಅದಕ್ಕೆಂದೇ ಈ ಪ್ರದೇಶದಲ್ಲಿ ಹಾಲಿಗೆ ದುಬಾರಿ ಮತ್ತು ಹಾಲಿನ ಸರಬರಾಜು ಅಷ್ಟಾಗಿ ಇಲ್ಲದ ಕಾರಣ ಕಾಫಿ, ಟೀಗಳು ಧಾರಾಳವಾಗಿ ಸಿಗಲಾರದು.

ಅಂಡಮಾನಿನ ಆಡಳಿತ ಚುಕ್ಕಾಣಿ ಹಿಡಿದ ಬ್ರಿಟಿಷರು ರಾಸ್ ದ್ವೀಪವನ್ನು ತಮ್ಮ ಆಡಳಿತದ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡು ಇಲ್ಲಿದ್ದಲೇ ತಮ್ಮ ಅಧಿಕಾರವನ್ನು ಅಂಡಮಾನಿನ ಮೇಲೆ ಹೇರಿದರು. ರಾಸ್ ದ್ವೀಪವು ಅತ್ಯಂತ ಸುಂದರವು ಆಹ್ಲಾದಕರವಾದ ವಾತಾವರಣವನ್ನು ಹೊಂದಿರುವ ದ್ವೀಪ. ಈ ದ್ವೀಪವು ಬ್ರಿಟಿಷರ ಶ್ರೀಮಂತ ಬದುಕಿನ ಅನಾವರಣ ಮಾಡುತ್ತದೆ. 1942ರ 2ನೇ ಮಹಾಯುದ್ಧದ ಸಂದರ್ಭದಲ್ಲಿ ಜಪಾನೀಯರು ಈ ಭೂಗತವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡನಂತರ ಬ್ರಿಟಿಷರು ಆ ಪ್ರದೇಶವನ್ನು ತೊರೆಯ ಬೇಕಾಯಿತು. ಉಳಿದ ದ್ವೀಪಗಳಾದ ಜಾಲಿಬಾಯ್, ರೆಡ್‌ಸ್ಕಿನ್ ಮತ್ತು ಸಿಂಕ್ ವೈಪರ್ ದ್ವೀಪಗಳು ಪ್ರವಾಸಿಗರನ್ನು ತನ್ನತ್ತ ಸೆಳೆದುಕೊಳ್ಳುವಷ್ಟು ಸೌಂದರ್ಯವನ್ನು ತನ್ನಲ್ಲಿ ಅಡಗಿಸಿಕೊಂಡಿವೆ.

ಯಾವುದೇ ಪ್ರವಾಸ ಕಥನವು ತನ್ನ ಮೌಲ್ಯವನ್ನು ಹೆಚ್ಚಿಸಿಕೊಳ್ಳುವುದು ಅದರೊಳಗಿನ ದಟ್ಟವಾದ ವಿವರಗಳಿಂದ; ಈ ವಿವರಗಳು ರಂಜಕವಾಗಿ ಓದುಗರಿಗೆ ವೇದ್ಯವಾದರೆ ಪ್ರವಾಸಕೃತಿಯು ತನ್ನ ಇರವನ್ನು ಅರ್ಥಪೂರ್ಣವಾಗಿ ಸಾಭೀತುಪಡಿಸುತ್ತದೆ. ಪ್ರವಾಸ ಕಥನಗಳಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುವಂತದ್ದು ಪ್ರವಾಸಿ ವಾಹಕ. ಹಿಂದಿನ ಕಾಲದಲ್ಲಿ ಪ್ರವಾಸವನ್ನು ಕೈಗೊಳ್ಳುತ್ತಿದ್ದವರು ಕಾಲ್ನಡಿಗೆಯ ಮುಖಾಂತರ ಅಥವಾ ಎತ್ತಿನಗಾಡಿಯ ಮುಖಾಂತರ ಕೈಗೊಳ್ಳುತ್ತಿದ್ದರು. ಆದರೆ ಕಾಲ ಬದಲಾದಂತೆ ಸಂಪರ್ಕ ಸಾಧನಗಳು ಹೆಚ್ಚಾಗಿ ಆಧುನಿಕವಾದಂತೆ ಪ್ರವಾಸ ಸ್ವರೂಪವೇ ಬದಲಾಗಿ ಹೋಯಿತು. ಈ ಸಂದರ್ಭದಲ್ಲಿ ನಾವು ನೆನಪಿಸಿಕೊಳ್ಳಬೇಕಾದ ಮತ್ತೊಂದು ಅಂಶವೆಂದರೆ ಜನಪದ ಸಾಹಿತ್ಯ. ಜನಪದ ಸಾಹಿತ್ಯದಲ್ಲಿ ಪ್ರಮುಖವಾಗಿ ಕಂಡುಬರುವಂತಹ ದಿಬ್ಬಣದ ಮೆರವಣಿಗೆ. **'ತೊಟ್ಟೀಲ ಹೊತ್ಕೊಂಡು ತವರ್ಬಣ್ಣ ಹುಟ್ಕೊಂಡು ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತಂಗ್ಯಮ್ಮ ತಿಟ್ಹತ್ತಿ ತಿರುಗಿ ನೋಡ್ಯಾಳ'** ಎಂಬ ಸಾಲುಗಳು ಹೆಣ್ಣುಮಗಳು ತನ್ನ ತವರಿನ ಬಗ್ಗೆ ಹೊಂದಿದಂತಹ ಪ್ರೀತಿ ಹಾಗೂ ವಾತ್ಸಲ್ಯ ಭಾವವನ್ನು ವ್ಯಕ್ತಪಡಿಸುತ್ತದೆ. ಈ ಸಾಲುಗಳ ಮುಖಾಂತರ ನಮಗೆ ವ್ಯಕ್ತವಾಗುವ ಸಂಗತಿ ಎಂದರೆ ಹೆಣ್ಣೊಬ್ಬಳು ತನ್ನ ತವರು

ಮನೆಯಿಂದ ಗಂಡನ ಮನೆಗೆ ನಡೆದು ಸಾಗುತ್ತಿದ್ದಳು. ಆಕೆ ಮತ್ತೆ ತನ್ನ ತವರು ಮನೆಯನ್ನು ದರ್ಶನ ಮಾಡುತ್ತಿದ್ದುದು ಹಲವು ವರ್ಷಗಳ ನಂತರವೇ. ಆ ಕಾಲ ಘಟ್ಟದಲ್ಲಿ ಆ ಹೆಣ್ಣಿಗೆ ತನ್ನ ತವರಿಗೆ ಮೇಲೆ ಇದ್ದಂತಹ ಪ್ರೀತಿ, ವಾತ್ಸಲ್ಯ ಇಂದಿನ ದಿನಗಳಲ್ಲಿ ಕಂಡು ಬರುತ್ತಿಲ್ಲ. ಅದಕ್ಕೆ ಕಾರಣ ಆಧುನಿಕ ಸಂಪರ್ಕ ಸಾಧನಗಳು. ಬಸ್ಸು, ರೈಲು, ವಿಮಾನ ಈ ಸಾಧನಗಳು ಜಗತ್ತನ್ನು ಅತೀ ಚಿಕ್ಕದಾಗಿಸಿವೆ. ನಾವು ಗಂಟೆಗಳಲ್ಲಿ ಖಂಡ ಖಂಡಗಳನ್ನೇ ದಾಟಿ, ಸುತ್ತಿ ಬರಬಹುದು. ಪ್ರಪಂಚವು ಹೆಚ್ಚು ವೇಗವಾದಂತೆಲ್ಲಾ, ಆಧುನಿಕವಾದಂತೆಲ್ಲಾ, ಮನುಷ್ಯ ಮನುಷ್ಯರ ನಡುವೆ ಇರುವಂತಹ ಬಾಂಧವ್ಯ ಕಡಿಮೆಯಾಗುತ್ತಿರುತ್ತದೆ. ಪ್ರೀತಿ, ವಿಶ್ವಾಸಗಳು ನಶಿಸುತ್ತಿವೆ ಎಂದು ಹೇಳಬಹುದು.

ಜಾನಪದ ದಿಬ್ಬಣವು ಈ ಹಿಂದೆ ಒಂದು ಪ್ರಯಾಣದ ಸ್ವರೂಪವನ್ನು ಪಡೆದಿತ್ತು. ಎರಡು ಮೂರು ದಿನಗಳ ಕಾಲ ನಿರಂತರ ಪ್ರಯಾಣ ಮಾಡುತ್ತಿದ್ದಾಗ ಇದ್ದ ಸಡಗರ ಸಂಭ್ರಮ ಎಲ್ಲವೂ ಕೂಡ ಗ್ರಾಮೀಣ ಪರಿಸರದ ಮುಗ್ದತನವನ್ನು ಪ್ರದರ್ಶಿಸುತ್ತಿದ್ದವು. ಆದರೆ ಕಾಲಘಟ್ಟವು ಬದಲಾದಂತೆ ಪ್ರಯಾಣದ ಸ್ವರೂಪವು ಹೇಗೆ ಬದಲಾಯಿತು ಎಂಬುದನ್ನು ಮೇಲಿನ ಸಾಲುಗಳ ಮುಖಾಂತರ ನಾವು ತಿಳಿದುಕೊಳ್ಳಬಹುದು. ಇಲ್ಲಿ ಉಲ್ಲೇಖಿಸಬಹುದಾದ ಮತ್ತೊಂದು ಜನಪದ ಪದ್ಯವೆಂದರೆ **'ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರಿಗೆ'** ಎನ್ನುವಂತಹ ಪದ್ಯವು ತನ್ನ ತವರಿನ ಬಗ್ಗೆ ಹೆಣ್ಣುಮಗಳು ಹೊಂದಿರುವಂತಹ ಪ್ರೀತಿಯ ಭಾವನೆಯನ್ನು ವ್ಯಕ್ತಪಡಿಸುತ್ತಿದೆ. ತನ್ನ ತವರನ್ನು ಕಾಣುವಂತಹ ಹಂಬಲ ಆಕೆಯ ಮನಸ್ಸಿನಲ್ಲಿ ಮನೆ ಮಾಡಿಕೊಂಡಿದ್ದು, ತನ್ನ ಮನೆಗೆ ಬಂದಂತಹ ಬಳೆಗಾರನಿಗೆ ತನ್ನ ತವರಿಗೆ ಭೇಟಿ ನೀಡಿ ಅಲ್ಲಿನ ಸ್ಥಿತಿ–ಗತಿಗಳನ್ನು ವಿಚಾರಿಸಿಕೊಂಡು ಬಾ ಎಂದು ಬಳೆಗಾರನಿಗೆ ಆ ಹೆಣ್ಣುಮಗಳು ಹೇಳುತ್ತಿದ್ದಾಳೆ. ಇಲ್ಲಿ ಆ ಹೆಣ್ಣುಮಗಳು ತನ್ನ ತವರಿನೊಂದಿಗೆ ಹೊಂದಿದಂತಹ ಸಂಬಂಧವನ್ನು ಕುರಿತು ಹೇಳುವುದಾದರೆ ವಾತ್ಸಲ್ಯ, ಮಮತೆ, ಪ್ರೀತಿ, ವಿಶ್ವಾಸ ಇವುಗಳ ಗಣಿಯೇ ಆಗಿ ಹೆಣ್ಣುಮಗಳು ಕಂಡು ಬರುತ್ತಿದ್ದಾಳೆ. ಆದರೆ ಆಧುನಿಕ ಯುಗವು ಈ ಮನಸ್ಥಿತಿಯನ್ನು ಕೂಡ ನಿರೀಕ್ಷಿಸಲು ಸಾಧ್ಯವಾಗದ ಮಟ್ಟಿಗೆ ಎಲ್ಲವನ್ನು ಬದಲಿಸಿ ಬಿಟ್ಟಿದೆ. ಕಾಲಘಟ್ಟವು ಬದಲಾದಂತೆ ಸಂಪರ್ಕ ಸಾಧನಗಳು ಹೆಚ್ಚು ಹೆಚ್ಚು ಬೆಳೆದಂತೆ ವಿಶ್ವವು ಒಂದು ಕೇಂದ್ರ ಬಿಂದುವಿನಲ್ಲಿ ನಿಲ್ಲಲು ಶುರು ಮಾಡಿದಂದಿನಿಂದ ಉಂಟಾಗುವ ಸಂಬಂಧಗಳ, ಮೌಲ್ಯಗಳ ಬಗ್ಗೆ ವಿವೇಚಿಸುವುದು ಕೂಡ ಮುಖ್ಯವೆನಿಸುತ್ತದೆ. ಇಷ್ಟೆಲ್ಲಾ ವಿಚಾರಗಳನ್ನು ನಾನು ಈ ಭಾಗದಲ್ಲಿ ಚರ್ಚಿಸಲು ಕಾರಣ, ಆಧುನಿಕ ಸಂಪರ್ಕ ಮಾಧ್ಯಮಗಳು ಹೇಗೆ ಮನುಷ್ಯನನ್ನು ಪಲ್ಲಟ ಸ್ಥಿತಿಗೆ ಕೊಂಡೊಯ್ದಿವೆ ಮತ್ತು ಅವು ಆತನ ಯೋಚನಾ ಲಹರಿಯನ್ನು ಹೇಗೆ ಬದಲಾಯಿಸಿವೆ ಎಂಬುದನ್ನು ಕುರಿತಂತೆ ಈ ಮೇಲಿನ ವಿವರಣೆಯನ್ನು ನೀಡಿದ್ದೇನೆ. ನನ್ನ ಈ ಸಂಶೋಧನೆಯ ಭಾಗಕ್ಕೆ ಬಂದರೆ ನಾನು ಆಯ್ಕೆ

ಮಾಡಿಕೊಂಡಿರುವಂತಹ ಪ್ರವಾಸ ಕೃತಿಗಳು ೧೨೦೦ ಮೈಲಿಗಳಷ್ಟು ಪ್ರಯಾಣದ ವಿವರಗಳನ್ನು ತನ್ನೊಳಗೆ ಅಡಗಿಸಿಟ್ಟಿಕೊಂಡಿವೆ. ಹೀಗೆ ಪ್ರಯಾಣ ಮಾಡುವಾಗ ಅವರಿಗೆ ಉಂಟಾಗುವ ಅನುಭವಗಳು ಯಾವ ಬಗೆಯವು? ಎಂಬುದನ್ನು ದಾಖಲಿಸುವುದು ಇಲ್ಲಿ ಅನಿವಾರ್ಯವಾಗಿದೆ. ಮೊದಲಿಗೆ ತೇಜಸ್ವಿಯವರು ಅಂಡಮಾನಿಗೆ ಪ್ರಯಾಣ ಬೆಳೆಸಿದ ಬಗೆಯನ್ನು ನಾವು ನೋಡೋಣ.

**'ನಾನ್‌ಕೌರಿ'** ಎಂಬ ಹಡಗಿನಲ್ಲಿ ಪ್ರಯಾಣ ಮಾಡುವಾಗ ಉಂಟಾದ ಅನುಭವಗಳನ್ನು ತಮ್ಮದೇ ರೀತಿಯಲ್ಲಿ ವಿವರಿಸಿದ್ದಾರೆ. "ಬಣ್ಣ ಬಣ್ಣಗಳಲ್ಲಿ ಮಿರುಗುವ ಪುಟ್ಟಪಟ್ಟಣಗಳಂತೆ ಕಾಣುವ ಹಡಗುಗಳನ್ನು ಚಿತ್ರಗಳಲ್ಲಿ ನೋಡಿದ್ದೆವು. ತುಕ್ಕು ಹಿಡಿದು ಗಲೀಜಾಗಿ ಕಾಣುತ್ತಿದ್ದ ಈ ಮುದಿ ಹಡುಗನ್ನು ನೋಡಿ ನಾವು ಗಾಬರಿಯಾದೆವು"*೧ ಎಂದು ತೇಜಸ್ವಿಯವರು ನಾಕ್‌ಕೌರಿ ಎಂಬ ಹಡಗಿನ ಬಗ್ಗೆ ವ್ಯಾಪಕವಾದ ವಿವರಣೆಯನ್ನು ಕೊಡುತ್ತಾರೆ. ಯಾವುದೇ ವ್ಯಕ್ತಿಗೆ ಪ್ರವಾಸಕ್ಕೆ ಹೊರಡುವುದು ಎಂದರೆ ಹಲವಾರು ಕನಸುಗಳು, ಕಲ್ಪನೆಗಳು ಆತನ ಮನಸ್ಸಿನಲ್ಲಿ ಮೂಡಿರುತ್ತವೆ. ಅದೇ ರೀತಿ ತೇಜಸ್ವಿಯವರಿಗೂ ಕೂಡ ಪ್ರವಾಸದ ಬಗ್ಗೆ ತಮ್ಮದೇ ಆದ ಕಲ್ಪನೆಗಳು ಮೂಡಿದ್ದವು. ಆದರೆ ಆ ಹಳೆಯ ಹಡಗನ್ನು ಕಂಡ ಕೂಡಲೇ ಅವರಿಗೆ ಯಾವ ರೀತಿಯ ಭ್ರಮನಿರಸನ ಉಂಟಾಯಿತು ಎಂದು ಈ ಮೇಲಿನ ಸಾಲಿನ ಮುಖಾಂತರ ನಮಗೆ ಅರ್ಥವಾಗುತ್ತದೆ. ಸಮುದ್ರ ಪ್ರವಾಸದ ಬಗ್ಗೆ ಹಲವಾರು ಕಲ್ಪನೆಗಳನ್ನು ಹೊಂದಿದ್ದ ಅವರಿಗೆ ಆಶಾಭಂಗ ಉಂಟಾಗಿ ಪ್ರಯಾಣವು ಅಷ್ಟೇನು ಹಿತಕಾರಿ ಎಂದೆನಿಸುವುದಿಲ್ಲ ಎಂಬುದನ್ನು ಮೇಲಿನ ಸಾಲುಗಳ ಮುಖಾಂತರ ನಾವು ಅರ್ಥಮಾಡಿಕೊಳ್ಳಬಹುದು.

ನಾನ್‌ಕೌರಿ ಎಂಬ ಹಡಗಿನಲ್ಲಿ ಪ್ರಯಾಣ ಮಾಡುವವರಿಗೆ ಪ್ರಮುಖವಾಗಿ ಅಲ್ಲಿ ಗೋಚರವಾಗುವುದು 'ಬಂಕರ್' ಮತ್ತು 'ಕ್ಯಾಬಿನ್' ಎನ್ನುವಂತಹ ಭೇದಭಾವ. ಈ ರೀತಿಯ ಭೇದಭಾವವನ್ನು ನಾವು ನಾಲ್ಕೂ ಪ್ರವಾಸ ಕೃತಿಗಳಲ್ಲೂ ಕೂಡ ಕಾಣಬಹುದಾಗಿದೆ. ಕ್ಯಾಬಿನ್ ಮತ್ತು ಬಂಕರ್ ಎಂದರೆ ಏನು ? ಅದರ ವಿಶೇಷತೆ ಏನು ? ಅದರ ಸ್ವರೂಪ ಏನು ? ಎಂಬುದನ್ನು ಒಂದೆರಡು ಮಾತುಗಳಲ್ಲಿ ತಿಳಿದುಕೊಳ್ಳೋಣ. "ಕ್ಯಾಬಿನ್ ಎಂದರೆ ಹೋಟೆಲ್ ಕಟ್ಟಡದಂತೆ ತೋರುವ ಮೂರು ಅಂತಸ್ತುಗಳ ಮೇಲುಭಾಗ. ಬಂಕ್ ವಿಭಾಗ ಎಂದರೆ ಎರಡು ಅಂತಸ್ತುಗಳು, ಕ್ಯಾಬಿನ್ ವಿಭಾಗಗಳಲ್ಲಿ ಮೇಲಿನಿಂದ ಕೆಳಗೆ, ಪ್ರಥಮ, ದ್ವಿತೀಯ, ತೃತೀಯ ಎಂಬ ಮೂರು ರೀತಿಯ ಕೊಠಡಿಗಳು ಇವೆ. ಈ ಕೊಠಡಿಗಳು ಎಲ್ಲವೂ ಕೂಡ ಹವಾನಿಯಂತ್ರಿತವಾದವುಗಳು. ಹಡಗಿನಲ್ಲಿ ೧೨೦೦ ಮಂದಿ ಪ್ರಯಾಣಿಸುತ್ತಿದ್ದರು. ಅದರಲ್ಲಿನ ಕ್ಯಾಬಿನ್‌ನಲ್ಲಿ ಕೇವಲ ೩೦೦ ಮಂದಿ ಮಾತ್ರ ಪ್ರಯಾಣಿಸುತ್ತಿದ್ದರೇ, ಉಳಿದ ೯೦೦ ಮಂದಿ ಬಂಕರ್‌ನಲ್ಲಿ ಪ್ರಯಾಣಿಸುತ್ತಿದ್ದರು. ಕ್ಯಾಬಿನ್‌ನಲ್ಲಿ ಪ್ರಯಾಣ ಮಾಡುವವರು ಶಕ್ತಿ ಇರುವ



ಅಡಿಟಿಪ್ಪಣಿ: *೧. ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್: ತೇಜಸ್ವಿ, ಪುಟ.೧೬

ಶ್ರೀಮಂತರು, ಆರ್ಥಿಕವಾಗಿ ಸಧೃಡರು. ಇವರು ಯಾರೂ ಕೂಡ ಬಂಕರ್‌ನಲ್ಲಿ ಪ್ರಯಾಣ ಮಾಡಲು ಇಚ್ಛಿಸುವುದಿಲ್ಲ. ಬಂಕರ್‌ನ ಎಲ್ಲಾ ಕಡೆಯಲ್ಲಿಯೂ ಕೆಟ್ಟವಾಸನೆ ಬರುತ್ತಿದ್ದು, ಗಲೀಜು ತುಂಬಿ ತುಡುಕಾಡುತ್ತಿತ್ತು. ಶೌಚಾಲಯಗಳ ಕಡೆಗೆ ಕಣ್ಣೆತ್ತಿ ನೋಡಲೂ ಸಹ ಕಷ್ಟವಾಗುತ್ತಿತ್ತು. ಕಸ, ಕಡ್ಡಿಯಿಂದ ತುಂಬಿದ್ದಂತಹ ತೊಟ್ಟಿಗಳು, ಹೆಂಗಸರು, ಮಕ್ಕಳ ಕಿರುಚಾಟ, ದುರ್ವಾಸನೆಯಿಂದ ಕೂಡಿದ ಇಡೀ ಬಂಕರ್‌ನಲ್ಲಿ ಉಸಿರಾಡಲು ಕೂಡ ಕಷ್ಟವಾಗುತ್ತಿತ್ತು."* ಎಂದು ಕೆ.ಟಿ. ಗಟ್ಟಿಯವರು ತಮ್ಮ ಕೃತಿಯಲ್ಲಿ ಓದುಗರಿಗೆ ಮನಮುಟ್ಟುವಂತೆ ವಿವರಿಸಿದ್ದಾರೆ.

ರಹಮತ್ ತರೀಕೆರೆಯವರ 'ಅಂಡಮಾನ್ ಕನಸು' ಈ ಕೃತಿಯಲ್ಲಿ ಶ್ರೀಯುತರು ಕೂಡ ಪ್ರಯಾಣ ಮಾಡಿದ್ದು ಇದೇ 'ನಾನ್‌ಕೌರಿ' ಎಂಬ ಹಡಗಿನಲ್ಲಿ. ಈ ಹಡಗಿನ ವ್ಯವಸ್ಥೆಯ ಬಗ್ಗೆ ಅವರು ವಿಸ್ತಾರವಾಗಿ ವಿವರಿಸಿರುವುದು ತಮ್ಮ ಮೊದಲನೇ ಅಧ್ಯಾಯವಾದ **'ಬಂಕರ್ ಎಂಬ ನರಕ'** ಈ ಭಾಗದಲ್ಲಿ. ಲೇಖಕರು ಬಂಕರ್‌ನ ಪರಿಸ್ಥಿತಿಯ ಬಗ್ಗೆ ವಿವರಿಸುತ್ತಾ ಈ ಮೇಲ್ಕಂಡ ಪೂರ್ವಗ್ರಹ ಪೀಡಿತವಾದ ತೀರ್ಮಾನಕ್ಕೆ ಬಂದಿದ್ದಾರೆಯೆ? ಎಂಬ ಅನುಮಾನವು ಕೂಡ ಆಗಾಗ ನಮ್ಮನ್ನು ಕಾಡುತ್ತದೆ. ಏಕೆಂದರೆ ತೇಜಸ್ವಿಯವರು ಕೂಡ ಅಂಡಮಾನಿಗೆ ಇದೇ 'ನಾನ್‌ಕೌರಿ' ಹಡಗಿನಲ್ಲಿ ಪ್ರಯಾಣ ಮಾಡಿದ್ದರು. ಆ ಕೃತಿಯನ್ನು ಓದಿದಂತಹ ರಹಮತ್ ತರೀಕೆರೆಯವರು ಈ ಮೇಲಿನಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರಬಹುದು.

ಕೆ.ಟಿ. ಗಟ್ಟಿಯವರು ಬಂಕರ್‌ನ ಬಗ್ಗೆ ಕೊಟ್ಟಿರುವ ವಿವರಗಳನ್ನು ಗಮನಿಸಿದರೆ ರಹಮತ್‌ರವರ ಅಭಿಪ್ರಾಯಕ್ಕೆ ಸಾಕ್ಷಿಗಳು ದೊರೆಯುತ್ತವೆ. ರಹಮತ್ ಈ 'ನಾನ್‌ಕೌರಿ' ಹಡಗಿನಲ್ಲಿ ಪ್ರಯಾಣ ಮಾಡುವಾಗ ಪಟ್ಟಂತಹ ಕಷ್ಟಗಳನ್ನು ತಮ್ಮ ಕೃತಿಯಲ್ಲಿ ಓದುಗರಿಗೆ ಮನಮುಟ್ಟುವಂತೆ ವಿವರಿಸಿದ್ದಾರೆ. ಈ ಕೃತಿಯನ್ನು ಓದುವ ಯಾವುದೇ ಓದುಗನಿಗೆ ಅಲ್ಲಿನ ಕಷ್ಟಗಳ ಪರಿಚಯ ಆಗದೇ ಇರದು. ಈ ಕಷ್ಟಗಳು ಓದುಗರಿಗೆ ಮೊದಲ ನೋಟದಲ್ಲಿಯೇ ಅರ್ಥವಾಗುತ್ತದೆ. ಈ ವಿವರಗಳನ್ನು ಲೇಖಕರ ಮಾತುಗಳಲ್ಲಿಯೇ ನಾವು ನೋಡಬಹುದಾಗಿದೆ. ಮದರಾಸಿನ ಹಡಗುಕಟ್ಟೆಯಲ್ಲಿಯೇ ಕಷ್ಟವನ್ನು ಎದುರಿಸಿ ಟಿಕೇಟು ಸಿಗದೆ ಪರದಾಡುತ್ತಿರುವಾಗ ಲೇಖಕರು ಮತ್ತು ಅವರ ಸ್ನೇಹಿತರು ಎಲ್ಲರೂ ಕೂಡ ಸಾಹಸ ಮಾಡಿ ಟಿಕೇಟು ಪಡೆದಂತಹ ಸಂದರ್ಭ ಅತ್ಯಂತ ರೋಚಕವಾದುದು.

ನಾನ್‌ಕೌರಿ ಹಡಗಿನ ಬಗ್ಗೆ ಅತ್ಯದ್ಭುತವಾಗಿ ವಿವರಿಸಿರುವಂತಹ ಲೇಖಕರ ವರ್ಣನಾ ಪ್ರಜ್ಞೆ ಮೆಚ್ಚುವಂತಹುದು. "ಒಂದು ದೊಡ್ಡ ಕಟ್ಟಡವನ್ನು ಕತ್ತರಿಸಿ ತಂದು ನೀರಿನಲ್ಲಿ ನಿಲ್ಲಿಸಿರುವಂತೆ ಅದು ಬಂದರು ಕಟ್ಟೆಯಲ್ಲಿ ನಿಂತಿತ್ತು. ೧೨೦೦ ಕಿ.ಮೀ. ಕಡಲ ಮೇಲೆ ಸಾವಿರಾರು ಜನರನ್ನು ಹಾಗೂ ಸಾವಿರಾರು ಟನ್ ಲಗೇಜ್‌ನ್ನು ಹೊತ್ತುಕೊಂಡು ಹೋಗಲಿರುವ ನಾನ್‌ಕೌರಿ ಧೀರೋದತ್ತವಾಗಿತ್ತು. ಅದರ ಸುತ್ತ ಜಿರಾಫೆ ಕುತ್ತಿಗೆಗಳಂತೆ ಕ್ರೇನುಗಳು ಸರಕನ್ನು ಎತ್ತುವ,



ಅಡಿಟಿಪ್ಪಣಿ: ನಿಸರ್ಗ ಕನ್ಯೆ ಅಂಡಮಾನ್; ಕೆ.ಟಿ.ಗಟ್ಟಿ. ಪುಟ.೨೦

ತುಂಬುವ ಕೆಲಸ ಮಾಡುತ್ತಿದ್ದವು. ಕಾಡಾನೆಯನ್ನು ಕಟ್ಟಿದಂತೆ ದಪ್ಪ ಹಗ್ಗಗಳಲ್ಲಿ ಹಡಗನ್ನು ಬಂದರಿನ ಕಲ್ಲು ಗೂಟಗಳಿಗೆ ಬಿಗಿದಿದ್ದರು. ಅದರ ಮೇಲೆ ಕುತ್ತಿಗೆಯಿಂದ ಪಾದಗಳವರೆಗೆ ಏಕವಾಗಿರುವ ಬಣ್ಣ ಬಣ್ಣಗಳ ಯೂನಿಫಾರಂ ಹಾಕಿಕೊಂಡು ಕೆಲಸಗಾರರು ಓಡಾಡುತ್ತಿದ್ದರು. ಅವರು ಆನೆ ಮೇಲೆ ಹರಿದಾಡುವ ಇರುವೆಗಳಂತೆ ಗೋಚರಿಸುತ್ತಿದ್ದರು."[೧] ಎಂದು ರಹಮತ್‌ರವರು ವರ್ಣಿಸುವ ಪರಿಯು ಓದುಗರಿಗೆ ನಾನ್‌ಕೌರಿ ಹಡಗಿನ ಚಿತ್ರವನ್ನು ಕಣ್ಣಮುಂದೆಯೇ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿ ಹೊರ ಹೊಮ್ಮುತ್ತದೆ.

ತೇಜಸ್ವಿಯವರು ಕೂಡ ಇದೇ ನಾನ್‌ಕೌರಿ ಹಡಗಿನಲ್ಲಿ ಪ್ರಯಾಣಿಸಿದ್ದರು. ಅವರ ಅನುಭವ ವಿಶೇಷವು ಕೂಡ ಇಲ್ಲಿ ಉಲ್ಲೇಖಾರ್ಹವಾದ್ದು. ತೇಜಸ್ವಿಯವರು ಒಮ್ಮೆ ಅಲ್ಲಿ ನಿಂತಿದ್ದ ಹಡಗಿನ ವಿವರಗಳನ್ನು ತಿಳಿಯಲು ಸರ್ಕಾರಿ ಅಧಿಕಾರಿಯನ್ನು ಭೇಟಿ ಮಾಡುತ್ತಾರೆ. ಅವರು ಕಾರ್‌ನಿಕೋಬಾರ್‌ನಲ್ಲಿ ಕಾರ್ಯನಿರ್ವಹಿಸಲು ನಿಯೋಜಕರಾದವರು. ಅವರ ಮಾತಿನ ಪ್ರಕಾರ 'ಆ ಹಡಗು ಗುಜರಿ ಮಾಲಾಗಿದೆ' ಎಂಬ ಮಾತು ಆ ಹಡಗನ್ನು ನೋಡಿದರೆ ಸರ್ವತಃ ಸತ್ಯವೆನಿಸುತ್ತಿತ್ತು. ಇನ್ನು ಕೆಲವು ದಿನ ಇದನ್ನು ಓಡಿಸಿ 'ಕಂಡೆಮ್' ಮಾಡಲಾಗುತ್ತದೆ. ೨೦ ವರ್ಷಗಳ ಹಿಂದೆ ಬ್ರಿಟನ್‌ನಲ್ಲಿ ಕಂಡೆಮ್ ಮಾಡಲಾದ ಹಡಗನ್ನು ಇನ್ನೂ ೨ ವರ್ಷಗಳವರೆಗೆ ಓಡಿಸಲು ಭಾರತಕ್ಕೆ ತಂದು ರಿಪೇರಿ ಮಾಡಿದರಂತೆ ಇದನ್ನು ಓಡಿಸಲು ಉದ್ದೇಶಿಸಿದ ಎರಡು ವರ್ಷ ೨೦ ವರ್ಷದವರೆಗೆ ವಿಸ್ತರಿಸಿಕೊಂಡಿತು. ಈಗ ಇದು ಓಡಿಸಲಾಗದ ಪರಿಸ್ಥಿತಿಗೆ ಬಂದಿದೆ. ಉಗಿ ಯಂತ್ರದ ಸಹಾಯದಿಂದ ಚಲಿಸುವ ಹಡಗು ಇದಾಗಿದ್ದು ಭಾರತದಲ್ಲಿ ಉಳಿದಿರುವುದು ಇದೊಂದೇ. ಇದರ ಇಂಧನ ವೆಚ್ಚ ತುಂಬಾ ಹೆಚ್ಚು. ವಾಸ್ತವವಾಗಿ ಸರ್ಕಾರ ಮೂರು ಲಕ್ಷ ರೂಪಾಯಿಗಳ ಭಾರಿ ನಷ್ಟವನ್ನು ಪ್ರತೀ ಟ್ರಿಪ್ಪಿಗೂ ಭರಿಸುತ್ತಿದೆ".[೨] ಎಂದು ಸರ್ಕಾರಿ ಅಧಿಕಾರಿ ಹೇಳಿದ. ಅವನು ಹೇಳಿದ ನಾನ್‌ಕೌರಿ ಹಡಗಿನ ಸ್ಥಿತಿ-ಗತಿಗಳನ್ನು ಕೇಳಿ ತೇಜಸ್ವಿಯವರು ಮತ್ತಷ್ಟು ಭಯ ಆತಂಕಕ್ಕೆ ಒಳಗಾದರು.

**ತೇಜಸ್ವಿಯವರ ವೈನೋಧಿಕ ಪ್ರಜ್ಞೆ:**

ತೇಜಸ್ವಿಯವರು ಸಾಮಾನು ಸರಂಜಾಮುಗಳನ್ನು ಹಿಡಿದುಕೊಂಡು ನೂರಾರು ಪ್ರಯಾಣಿಕರೊಡನೆ ಕಾಯುತ್ತಾ ನಿಂತಿದ್ದಾಗ, ಈ ಹಡಗನ್ನು ಯಾವ ಕಡೆಯಿಂದ ಹತ್ತುವುದೆಂಬ ಸಂದೇಹ ಕಾಡಿತ್ತು. ಎಲ್ಲೋ ಅಂತರಿಕ್ಷದಲ್ಲಿ ಹಡಗಿನ ಡೆಕ್ ಕಾಣಿಸುತ್ತಿತ್ತು. ಕ್ರೇನ್ ಮುಖಾಂತರ ಹಡಗಿಗೆ ಸಾಮಾನುಗಳನ್ನು ಎತ್ತಿ ಎತ್ತಿ ಇಳಿಸುವ ಪ್ರಕ್ರಿಯೆ ನಡೆಯುತ್ತಿತ್ತು. ಪ್ರಯಾಣಿಕರನ್ನೂ ಕ್ರೇನ್‌ನಲ್ಲಿಯೇ ಎತ್ತಿ ಒಳಗೆ ಇಳಿಸುತ್ತಾರೆಯೇ? ಅಥವಾ ತೂಕ ಹಾಕಿ ನಂತರ ಅದರ ಭಾರಕ್ಕೆ ಹಡಗಿನ ಕೆಳಭಾಗ ಡೆಕ್ ನಮ್ಮ ಭಾಗಕ್ಕೆ ಬರುತ್ತದೆಯೇ ? ಹಡಗಿನ ಕೆಳಭಾಗದಲ್ಲಿ ಕಾಣುತ್ತಿರುವ ಕಿಂಡಿಗಳಿಂದ ಒಳಕ್ಕೆ ತೂರಿಕೊಳ್ಳಬೇಕೇ? ಎನ್ನುವ ತೇಜಸ್ವಿಯವರ ಸಂದೇಹಪೂರಿತವಾದ

೧. ಅಂಡಮಾನ್ ಕನಸು-ರಹಮತ್ ತರೀಕೆರೆ, ಪುಟ: ೦೯

ಪ್ರಶ್ನೆಗಳು ಓದುಗರಲ್ಲಿ ನಗೆಯ ಅಲೆಯನ್ನು ಚಿಮ್ಮಿಸುತ್ತವೆ. ತೇಜಸ್ವಿಯವರು ಎಂತಹ ಗಾಢವಿಚಾರವನ್ನಾದರೂ ವೈನೋಧಿಕ ಶೈಲಿಯಲ್ಲಿ ನಿರೂಪಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ಈ ಶೈಲಿಯು ಓದುಗರಿಗೆ ಕೃತಿಯೊಡನೆ ಹೆಚ್ಚಿನ ಆಪ್ತತೆಯನ್ನು ಉಂಟು ಮಾಡುತ್ತದೆ.

ರಹಮತ್ ತರೀಕೆರೆಯವರು 'ಬಂಕರ್ ಮತ್ತು ಕ್ಯಾಬಿನ್' ಇವುಗಳನ್ನು ವಿಭಾಗಿಸುವ ಕ್ರಮವು ನಮ್ಮನ್ನು ಬಹುಮುಖವಾದ ಚರ್ಚೆಗೆ ಒಳಗು ಮಾಡುತ್ತದೆ. ಅವರ ಮಾತಿನಲ್ಲಿಯೇ ಅರ್ಥೈಸಿಕೊಳ್ಳುವುದಾದರೆ, "ಕ್ಯಾಬಿನ್' ಮತ್ತು 'ಬಂಕರ್' ಎಂಬ ಎರಡು ಶಬ್ದಗಳು ಹಡಗಿನ ಲೋಕದಲ್ಲಿ 'ಸ್ವರ್ಗ-ನರಕ'ಗಳ ಅರ್ಥ ವ್ಯತ್ಯಾಸವನ್ನು ಹೊಂದಿರುತ್ತದೆ. ತಮ್ಮ ಕೋಣೆ, ಶೌಚಾಲಯ, ಡೈನಿಂಗ್ ಹಾಲ್‌ಗಳನ್ನು ಯಾವುದೇ ಕಾರಣಕ್ಕೂ ಬಂಕರಿನವರಿಗೆ ಬಿಟ್ಟುಕೊಡಬಾರದು' ಎಂದು ಎಚ್ಚರಿಸುವ ಬರಹಗಳನ್ನು ಕ್ಯಾಬಿನ್ ಕ್ಲಾಸುಗಳಲ್ಲಿ ಪ್ರದರ್ಶಿಸಲಾಗಿತ್ತು. ಆಗಾಗ ಮೈಕಿನಲ್ಲಿ ತಮಿಳು, ಹಿಂದಿ, ಇಂಗ್ಲೀಷ್‌ನಲ್ಲಿ ಎಚ್ಚರಿಕೆಯ ವಿನಂತಿಗಳನ್ನು ಸಂದೇಶಗಳಂತೆ ಪ್ರಸಾರ ಮಾಡಲಾಗುತ್ತಿತ್ತು. ಬಂಕರಿನವರು ಎಂದರೆ 'ಕ್ಯಾಬಿನ್‌ರವರ ನೆಮ್ಮದಿಯನ್ನು ಹಾಳು ಮಾಡುವ ಪೀಡೆಗಳು' ಎಂದು ಭಾವಿಸಲಾಗುತ್ತಿತ್ತು.*" ಅಂದರೆ ಇಲ್ಲಿ ಮಾನವೀಯತೆಗಿಂತಲೂ ಹೆಚ್ಚಾಗಿ ಸ್ಥಿತಿವಂತರಿಗೆ, ಹಣವಂತರಿಗೆ ಮನ್ನಣೆಯನ್ನು ನೀಡುವ ಪದ್ಧತಿ ಜಾರಿಯಲ್ಲಿತ್ತು ಎಂದು ನಾವು ಕಲ್ಪಿಸಿಕೊಳ್ಳಬಹುದು. ಈ ರೀತಿಯ ತರತಮದ ಭಾವನೆಗಳು ಬ್ರಿಟೀಷರ ಬಳುವಳಿಗಳಾಗಿ ಇರಬಹುದು ಅಥವಾ ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿಯ ಕಾಣಿಕೆಯೂ ಕೂಡ ಇರಬಹುದು. ಆದ್ದರಿಂದ ಇಷ್ಟೊಂದು ಕಟುವಾಗಿ ಕಟ್ಟುನಿಟ್ಟಾಗಿ ಜಾತಿ-ಭೇದ, ವರ್ಣಭೇದ ಇವುಗಳನ್ನು ಆಚರಿಸುವ ಪರದೇಶಗಳ ಸಂಸ್ಕೃತಿಗಳನ್ನು ನಾವು ಅನುಸರಿಸುವುದು, ಅನುಕರಿಸುವುದು ಮಾನವೀಯತೆಯ ಮೂಲ ನೆಲೆಗೆ ದಕ್ಕೆಯನ್ನುಂಟು ಮಾಡುತ್ತದೆ. ಇಲ್ಲಿ ನೆನಪಾಗುವ ಮತ್ತೊಂದು ಸನ್ನಿವೇಶವೇನೆಂದರೆ, ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿ ರೈಲು ಸಂಚಾರ ಮಾಡುತ್ತಿದ್ದಾಗ ನಡೆದಂತಹ ಘಟನೆಯನ್ನು ನಾವಿಲ್ಲಿ ಉದಾಹರಿಸಬಹುದಾಗಿದೆ.

ಅಲ್ಪ ಸಂಖ್ಯಾತರಾದ ಕ್ಯಾಬಿನ್ ಪ್ರಯಾಣಿಕರಿಗೂ ಬಹುಸಂಖ್ಯಾತರಾದ ಬಂಕರ್ ಪ್ರಯಾಣಿಕರಿಗೂ ಒದಗಿಸಲಾಗುತ್ತಿದ್ದ ಸೌಲಭ್ಯಗಳಲ್ಲಿ ಅಜಗಜಾಂತರ ವ್ಯತ್ಯಾಸವನ್ನು ರಹಮತ್ ತರೀಕೆರೆಯವರು ತಮ್ಮ ಕೃತಿಯಲ್ಲಿ ಅನಾವರಣಗೊಳಿಸಿದ್ದಾರೆ. ಈ ಎರಡು ವರ್ಗದ ಪ್ರಯಾಣಿಕರಿಗೆ ಒದಗಿಸಲಾದ ಊಟದ ಕೊಠಡಿ, ಶೌಚಾಲಯ, ಮನರಂಜನೆ ಮುಂತಾದ ಸೌಲಭ್ಯಗಳೆಲ್ಲಾ ಭೇದಬಾವ ಮಾಡಿರುವುದು ಓದುಗರಿಗೆ ಇಲ್ಲಿ ದೃಗ್ಗೋಚರ. "ಸಾವಿರಾರು ಸಂಖ್ಯೆಯ ಬಂಕರ್ ಪ್ರಯಾಣಿಕರಿಗೆ ಕೆಲವೇ ಫ್ಯಾನುಗಳು; ತಮ್ಮ ಸೀಟುಗಳನ್ನು ಬಿಟ್ಟು ಹೊರಗೆ

ಅಡಿಟಪ್ಪಣಿ: * .ಅಲೆಮಾರಿಯ ಅಂಡಮಾನ್- ಕೆ.ಪಿ.ಪೂರ್ಣ ಚಂದ್ರ ತೇಜಸ್ವಿ, ಪುಟ: ೧೭

ಬಂದು ಸಮುದ್ರ ನೋಡಲು ಗಾಳಿಸೇವನೆ ಮಾಡಲು ಒಂದು ಇಕ್ಕಟ್ಟಾದ ಜಾಗ ಆದರೆ ತುಂಬಾ ಕಡಿಮೆ ಸಂಖ್ಯೆಯಲ್ಲಿದ್ದ ಕ್ಯಾಬಿನ್ ಪ್ರಯಾಣಿಕರಿಗೆ ವಿಶಾಲವಾದ 'ಏರಿಂಗ್ ಸ್ಪೇಸ್' ಸಮುದ್ರ ನೋಡುತ್ತಾ ಕುಳಿತುಕೊಳ್ಳಲು ಸುಖಾಸೀನಗಳು, ಈಜುಕೊಳ. ಊಟದ ಚೆಂದ ನೋಡಬೇಕೆನ್ನುವವರಿಗೆ ವಿಶಾಲವಾದ ಡೈನಿಂಗ್ ಹಾಲ್" ಹೀಗೆ ಹಡಗಿನಲ್ಲಿ ಬಂಕರ್‌ರವರಿಗೂ, ಕ್ಯಾಬಿನ್‌ನವರಿಗೂ ಇದ್ದಂತಹ ಮೂಲಭೂತ ವ್ಯತ್ಯಾಸಗಳನ್ನು ಗುರುತಿಸುವಲ್ಲಿ ರಹಮತ್‌ರವರ ಮಾನವೀಯತೆಯ ಸಮಾಜವಾದ, ಸಮಾನತೆಯ ಚಿಂತನೆಗಳು ಹೀಗೆ ಅಭಿವ್ಯಕ್ತಿಗೊಂಡಿರುವುದನ್ನು ನಾವಿಲ್ಲಿ ಕಾಣಬಹುದಾಗಿದೆ. ಈ ಲೇಖಕರು ಪ್ರವಾಸಕ್ಕೆ ಮನರಂಜನೆಯ ಉದ್ದೇಶವನ್ನು ಮೂಲಭೂತವಾಗಿಟ್ಟುಕೊಂಡು ಪ್ರವಾಸಕ್ಕೆ ಹೊರಟಿದ್ದರೂ ಕೂಡ 'ಲೇಖಕರನ್ನು ರೂಪಿಸಿರುವಂತಹ ಪ್ರಜ್ಞೆಗಳು; ಸದಾ ಕಾಲ ಮಾನವೀಯತೆಯ ಭಿತ್ತಿಯ ಮೂಲಕ ಸದಾ ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ನಾವಿಲ್ಲಿ ಕಾಣಬಹುದು'. ಇದೇ ದೃಶ್ಯವು ಸಾಮಾನ್ಯ ಪ್ರಯಾಣಿಕರ ದೃಷ್ಟಿಗೆ ಬಿದ್ದಿದ್ದರೆ ಸಾಮಾನ್ಯವಾಗಿಯೇ ಗ್ರಹಿಸಿ ಅಲ್ಲೇ ಮರೆತುಬಿಡುತ್ತಿದ್ದರು. ಆದರೆ ಸಮಾನತೆಯ ಮಂತ್ರವನ್ನು ಪಠಿಸುವ, ಮಾನವೀಯತೆ ಭೀಜಾಕ್ಷರವನ್ನು ನುಡಿಯುವ, ವಿಮರ್ಶಕರಾಗಿದ್ದರೂ ಕೂಡ ಹೆಂಗರುಳಿನಿಂದ ಪರಿಸ್ಥಿತಿಯ ವಿಸ್ತಾರತೆಯನ್ನು ಗ್ರಹಿಸುವ ಈ ಲೇಖಕರ ದೃಷ್ಟಿಕೋನವು ಓದುಗರನ್ನು ಮತ್ತೊಂದು ಆಯಾಮದ ಚರ್ಚೆಗೆ ಒಳಗು ಮಾಡುವುದರಲ್ಲಿ ಯಾವುದೇ ಸಂದೇಹವಿಲ್ಲ. ಇಲ್ಲಿ ಲೇಖಕರು ಕೊಡುವಂತಹ ಮತ್ತೊಂದು ಉದಾಹರಣೆ ಕಡ್ಡಾಯವಾಗಿ ಗಮನಿಸಲೇಬೇಕು. ಲೇಖಕರು ಒಂದು ಸಲ ಬಂಕರಿನಲ್ಲಿ ಸಿನಿಮಾ ಪ್ರದರ್ಶನವಾಗುತ್ತಿದಲ್ಲಿಗೆ ಹೋದಾಗ ಎಂತಹದೋ ತಮಿಳು ಸಿನಿಮಾ, ಸಂಭಾಷಣೆ ಯಾರಿಗೂ ಕೇಳಿಸಬಾರದೆಂದು ದೃಢಸಂಕಲ್ಪ ಮಾಡಿದಂತೆ ಪ್ರೇಕ್ಷಕರು ಮಾತುಕತೆಯಲ್ಲಿ ತೊಡಗಿದ್ದರು. ಅರೆಕತ್ತಲು, ಅಸಾಧ್ಯ ರಶ್ಮು, ಬೀಡಿ ಸೇದುವವರು ಮೋಡ ಮೋಡವಾಗಿ ಹೊಗೆಯನ್ನು ಬಿಡುತ್ತಿದ್ದರು. ಹೆಚ್ಚಿನ ಜನ ನಿದ್ದೆ ಮಾಡುತ್ತಿದ್ದರು. ಇನ್ನೊಮ್ಮೆ ಕ್ಯಾಬಿನ್ ಕ್ಲಾಸಿನ ಸಿನೆಮಾ ಮಂದಿರಕ್ಕೆ ಹೋದಾಗ ಯಾವುದೋ ಇಂಗ್ಲೀಷ್ ಸಿನೆಮಾ 'ಕಾಂಬೋಡಿಯಾದ ಗೆರಿಲ್ಲಾ ಹೋರಾಟಗಾರರನ್ನು ಕೇಡಿಗಳಂತೆ ಚಿತ್ರಿಸಿರುವ ಅಮೇರಿಕನ್ನರ ಸಿನೆಮಾ' ನಡೆಯುತ್ತಿತ್ತು. ಈ ಎರಡೂ ಪ್ರಸಂಗಗಳನ್ನು ಲೇಖಕರು ಕಂಡಿರುವಂತಹ ದೃಷ್ಟಿಕೋನವು ಮುಖ್ಯವಾದದ್ದು. ಬಂಕರ್ ಕ್ಲಾಸಿನವರನ್ನು ತುಂಬಾ ತುಚ್ಛವಾಗಿ ಕಂಡು ಅವರ ಮನಃಸ್ಥಿತಿಯನ್ನು ತಪ್ಪಾಗಿ ಅರ್ಥೈಸಿಕೊಂಡು ಆ ಸಿನೆಮಾವನ್ನು ಪ್ರದರ್ಶಿಸಲಾಗುತ್ತಿತ್ತು. ಕ್ಯಾಬಿನ್ ಕ್ಲಾಸಿನಲ್ಲಿ ಪ್ರಸಾರವಾಗುತ್ತಿದ್ದ ಸಿನೆಮಾದಲ್ಲಿ ಹೋರಾಟಗಾರರನ್ನು ಕೇಡಿಗಳಂತೆ ಚಿತ್ರಿಸಿರುವ ಔಚಿತ್ಯವೇನು? ಎಂಬಂತಹ ಪ್ರಶ್ನೆಯನ್ನು ಲೇಖಕರು ಇಲ್ಲಿ ಎತ್ತಿದ್ದಾರೆ. ಇಲ್ಲಿ ಲೇಖಕರ ನಿಲುವು ಹೋರಾಟಗಾರರ ಪರ ಇದೆ ಎಂಬುದು ನಮಗೆ ಅವರ ನಿರೂಪಣೆಯಿಂದ ವ್ಯಕ್ತವಾಗುತ್ತದೆ. ಸ್ವತಃ ಹೋರಾಟಗಾರರಾಗಿರುವ ಲೇಖಕರು, ಹೋರಾಟ ಮತ್ತು ಚಳುವಳಿಗಳ ಸ್ವರೂಪವನ್ನು ಗ್ರಹಿಸಿ

ಅವುಗಳ ಹಿಂದಿರುವ ಅಜೆಂಡಾಗಳನ್ನು ಸರಿಯಾಗಿ ಪರಿಭಾವಿಸಿ ಈ ಮಾತುಗಳನ್ನು ಹೇಳುತ್ತಿರಬಹುದು. ಒಟ್ಟಾರೆಯಾಗಿ ಲೇಖಕರು ಪ್ರವಾಸಕ್ಕೆ 'ಮನರಂಜನಾ ದೃಷ್ಟಿಯಿಂದ ಅಥವಾ ಅಂಡಮಾನ್‌ನ್ನು ದರ್ಶಿಸುವ' ಉದ್ದೇಶದಿಂದ ಹೊರಟಿದ್ದರೂ ಕೂಡ ಈ ಪ್ರವಾಸ ಕೃತಿಯಲ್ಲಿ ವ್ಯಕ್ತವಾಗಿರುವ ಮಾನವೀಯ ಮೌಲ್ಯಗಳು ಮತ್ತು ತರತಮ ಭೇದಭಾವಗಳನ್ನು ನಯವಾಗಿಯೇ, ಮೃದುವಾಗಿಯೇ ಖಂಡಿಸುವ ಲೇಖಕರ ಮನೋಭಾವ ಇಲ್ಲಿ ಉಲ್ಲೇಖನೀಯ.

ಇಲ್ಲಿ ಲೇಖಕರು ಕನ್ನಡ ಕಥೆಗಾರರಾದ ಪೂರ್ಣಚಂದ್ರ ತೇಜಸ್ವಿಯವರು ಹೇಳಿದಂತಹ ಮಾತುಗಳನ್ನು ಉಲ್ಲೇಖಿಸುತ್ತಾ 'ನಾನ್‌ಕೌರಿ' ಹಡಗನ್ನು ಅವರು 'ಲಟಾರಿ ಬಸ್ಸಿ'ನಂತೆ ವರ್ಣಿಸಿದ್ದರು. ಅದರಲ್ಲೂ "ಬಂಕರ್ ಕ್ಲಾಸ್‌ನ್ನು ಕುಡುಕರು, ಕೊಳಕರು ತುಂಬಿರುವಂತಹ ನರಕ" ಎಂದು ವರ್ಣಿಸಿದ್ದರು. ಹಾಗಿದ್ದರೆ 'ಖಂಡಿತವಾಗಿಯೂ ಅದು ದನದ ಕೊಟ್ಟಿಗೆಯಂತಿರಬೇಕು' ಎಂಬ ಕಲ್ಪನೆಯಲ್ಲಿ ಹೋದ ನಮಗೆ ಬಂಕರ್ ಕ್ಲಾಸ್ ಕಂಡು ಸಮಾಧಾನವಾಯಿತು. ಅದೊಂದು ಎರಡು ಅಂತಸ್ತಿನ ಡಾರ್ಮಿಟರಿ. ಬೆಡ್ಡುಗಳು ರೈಲಿನ ಸ್ಲೀಪರ್ ಕ್ಲಾಸಿನ ಮಂಚದಂತಿದ್ದವು. ನಮಗೆ ಸಂತೋಷ ಕೊಟ್ಟಿದ್ದು ಮಂಚಗಳ ಹತ್ತಿರವೇ ಇದ್ದ ಹಡಗಿನ ಕಿಟಕಿಗಳು ದಪ್ಪ ಗಾಜಿನ ಈ ಕಿಟಕಿಗಳಿಂದ ಕಡಲು ಎರೆಬಯಲಿನಂತೆ ಕಾಣುತ್ತಿತ್ತು. ನಾನ್‌ಕೌರಿಯನ್ನು 'ಗುಜರಿ' ಎಂದು ಹೇಳಲು ಮನಸ್ಸು ಒಪ್ಪಲಿಲ್ಲ. ದೀಪಗಳಿಂದ ಜಗಜಗಿಸುತ್ತಿದ್ದ ದ್ವೀಪದ ಅರಮನೆಯಂತಿತ್ತು. ಅಂದು ತೇಜಸ್ವಿ ಹೋಗಿದ್ದು ಉಗಿ ಇಂಜಿನ್‌ನ ಹಳೆಯ ಹಡಗಿರಬೇಕು. ನಮ್ಮದು 'ಮೋಟಾರ್ ವೆಸಲ್' ಆಗಿತ್ತು.* ಇಲ್ಲಿ ರಹಮತ್‌ರು ಅಂಡಮಾನಿಗೆ ಪ್ರವಾಸಕ್ಕೆ ಹೋಗುವ ಮುನ್ನ ತೇಜಸ್ವಿಯವರ ಕೃತಿಯಾದ 'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್' ಎಂಬ ಕೃತಿಯನ್ನು ಅಧ್ಯಯನ ಮಾಡಿದ್ದರು ಎಂದು ತಿಳಿದು ಬರುತ್ತದೆ. ಯಾವುದೇ ಒಂದು ಸ್ಥಳಕ್ಕೆ ಪ್ರವಾಸಕ್ಕೆ ಹೋಗುವ ಮುನ್ನ ಆ ಸ್ಥಳದ ಪೂರ್ವ ಪರಿಚಯವಿದ್ದರೆ ಆ ಸ್ಥಳದ ವಿಧಿನಿಷೇಧಗಳು, ಪ್ರಾದೇಶಿಕ ಮಹತ್ವ, ಭೌಗೋಳಿಕ ಎಲ್ಲೆಗಳು, ಸಂಸ್ಕೃತಿ ವಿಚಾರಗಳು ಇವುಗಳ ಬಗ್ಗೆ ಕಿಂಚಿತ್ತಾದರೂ ಪೂರ್ವ ಮಾಹಿತಿ ಇದ್ದರೆ ಆ ಸ್ಥಳವು ಬೇರೆಯದೇ ರೀತಿಯಲ್ಲಿ ದೃಷ್ಟಿಗೋಚರವಾಗುತ್ತದೆ. ಇಲ್ಲಿ ರಹಮತ್‌ರವರು ತೇಜಸ್ವಿಯವರ ಕೃತಿಯನ್ನು ಅಂಡಮಾನ ಸ್ಥಳದ ಪರಿಚಯಕ್ಕೆ ಮಾತ್ರ ಬಳಸಿಕೊಳ್ಳದೆ ಅಲ್ಲಿರುವ ಸೂಕ್ಷ್ಮ ದೃಷ್ಟಿಕೋನಗಳನ್ನು ಕೂಡ ಅವಲೋಕಿಸಿದ್ದಾರೆ. ಕನ್ನಡದ ಮಹಾನ್ ಕಥೆಗಾರರಾದ ತೇಜಸ್ವಿಯವರು ನಾನ್‌ಕೌರಿಯವರ ಬಗ್ಗೆ ವಿವರಿಸುವುದಕ್ಕೂ, ವಿಮರ್ಶಕರಾದ ರಹಮತ್‌ರವರು ಹಡಗನ್ನು ವ್ಯಾಖ್ಯಾನಿಸಿರುವ ಬಗೆಗೂ ವ್ಯತ್ಯಾಸಗಳು ಕಂಡು ಬರುತ್ತವೆ. ಈ ಹಿನ್ನಲೆಯಲ್ಲಿ ಇಬ್ಬರ ಕೃತಿಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಿದ್ದಲ್ಲಿ ಪ್ರವಾಸ ಸಾಹಿತ್ಯದ ದೃಷ್ಟಿಯಿಂದ ಈ ಲೇಖಕರನ್ನು ರೂಪಿಸಿರುವ ಪ್ರಜ್ಞೆಗಳು ಯಾವುವು ? ನಮ್ಮನ್ನು ತುಂಬಾ ದೂರಕ್ಕೆ ಈ ಅಧ್ಯಯನ ಕೊಂಡೊಯ್ಯುತ್ತದೆ.

---

ಅಡಿಟಿಪ್ಪಣಿ: ಅಂಡಮಾನ್ ಕನಸು, ರಹಮತ್ ತರೀಕೆರೆ; ಪುಟ. ೧೧

ಪ್ರವಾಸ ಕಥನಗಳ ಸಂಶೋಧನೆಗಳು ಈ ನಿಟ್ಟಿನಲ್ಲಿ ಸಾಗಿದರೆ ಕನ್ನಡ ಸಂಶೋಧನೆಗೆ ಹೊಸಹೊಸ ಹೊಳಹುಗಳು ಪ್ರಾಪ್ತವಾಗುತ್ತವೆ. ಹಾಗಾಗಿ ಈ ನೆಲೆಗಟ್ಟಿನ ಅಧ್ಯಯನಗಳು ನಮ್ಮ ಪ್ರವಾಸ ಸಾಹಿತ್ಯಕ್ಕೆ ಸಂಶೋಧನೆಗೆ ಕಡ್ಡಾಯವಾಗಿ ಅಗತ್ಯವಿದೆಯೆಂದು ನಾವು ಮನಗಾಣಬಹುದು. ತೇಜಸ್ವಿಯವರು ಒಮ್ಮೆ ಎತ್ತಲೋ ಪ್ರವಾಸಕ್ಕೆ ಹೊರಟಿದ್ದ ಗೆಳೆಯರೊಂದಿಗೆ ಗೆಳೆಯನೊಬ್ಬನಿಗೆ ಕೇಳಿದರಂತೆ ಅಂಡಮಾನಿಗೆ ಏಕೆ ಪ್ರವಾಸ ಹೋಗಬಾರದು ? ಅದಕ್ಕೆ ಆತ 'ಅಲ್ಲೇನಿದೆ ಬರೇ ಕಾಡು, ಸಮುದ್ರ ಎಲ್ಲಿಂದಲೋ ಬಂದು ಉಳಿದುಕೊಳ್ಳಲು ಒಂದು ಒಳ್ಳೆಯ ಹೋಟೆಲ್ ಇಲ್ಲ, ತುಂಬಾ ಹಿಂದುಳಿದ ಪ್ರದೇಶ' ಎಂದು ಹೇಳಿದನಂತೆ. ಅಲ್ಲಿ ಕೆಲಸ ಮಾಡುತ್ತಿದ್ದ ಅವನ ಗೆಳೆಯ ಇವನಿಗೆ ಅಂಡಮಾನ್ ಕುರಿತ ಈ ವಿಷಯ ತಿಳಿಸಿದನಂತೆ. ಅದಕ್ಕೋಸ್ಕರವೇ ತೇಜಸ್ವಿ ಬರೆಯುತ್ತಾರೆ 'ಹಾಗಾದರೆ ಈ ಪುಣ್ಯಕ್ಷೇತ್ರಗಳು, ದೇವಸ್ಥಾನಗಳು ಯಾವುದೂ ಇಲ್ಲದ ಜಾಗ ಅಂಡಮಾನ್ ಆಗಿದ್ದರೆ ನನ್ನಂತಹ ಅಲೆಮಾರಿಗೆ ಅದೇ ಸರಿ ಎನಿಸುತ್ತಿತ್ತು'. ಇದು ತೇಜಸ್ವಿ ವೈಶಿಷ್ಟ್ಯ ಎಂದು ಟಿ.ಪಿ. ಅಶೋಕ್‌ರವರು ಉಲ್ಲೇಖ ನೀಡುತ್ತಾರೆ.

ಅಂದರೆ ಇಲ್ಲಿ ತೇಜಸ್ವಿಯವರು ಪ್ರವಾಸವನ್ನು ಪರಿಭಾವಿಸುವ ಕ್ರಮ ಯಾವುದು ? ಎಂಬುದು ಮುಖ್ಯವಾಗುತ್ತದೆ. ಅವರ ಈ ಕ್ರಮವು 'ಜಂಗಮ' ಪರಿಕಲ್ಪನೆಯನ್ನು ವ್ಯಕ್ತಪಡಿಸುತ್ತದೆ. ತೇಜಸ್ವಿಯವರು ನವ್ಯ ಸಾಹಿತ್ಯದ ಉಚ್ಛ್ರಾಯ ಕಾಲದಲ್ಲಿ ಮೈಸೂರು ತೊರೆದು ಮೂಡಿಗೆರೆಗೆ ಹೋಗಿ ಪ್ರಕೃತಿಯ ಸಿರಿಯ ನಡುವೆ ನೆಲೆಸುತ್ತಾರೆ. ಅವರು ಮೈಸೂರನ್ನು ತೊರೆಯಲು ಕೊಡುವ ಕಾರಣ 'ನೀವು ಮುಟ್ಟು ಒಬ್ಬಟ್ಟುಗಳ ಬಗ್ಗೆಯೇ ಬರೆದುಕೊಂಡಿರಿ ನಾನು ಅನುಭವಗಳ ಬೆನ್ನಲ್ಲೇ ಹೋಗುತ್ತೇನೆ' ಎಂದು ತಮ್ಮ ಸ್ನೇಹಿತರಿಗೆ ಹೇಳಿ ತೆರಳುತ್ತಾರೆ. ಸದಾಕಾಲ ಸ್ಥಾಪಿತ ನಿಯಮಗಳನ್ನು ಮೀರುವಂತಹ ತೇಜಸ್ವಿಯವರು ಹೊಸದಿಗಂತಗಳ ಶೋಧಕ. ಅವರು ನವ್ಯಸಾಹಿತ್ಯವನ್ನು ತಿರಸ್ಕರಿಸಲು ಕೊಡುವ ಕಾರಣ ತುಂಬಾ ಮುಖ್ಯವಾದದ್ದು. ಅದರಲ್ಲಿ ಬರೀ ಅಧ್ಯಾಪಕರುಗಳಿಂದಲೇ ಕೂಡಿದ ನವ್ಯ ಸಾಹಿತ್ಯ ಪಂಥ ಹಾಗೂ ಸಾಹಿತ್ಯಕ್ಕೆ ಮೀಸಲಾದ ಕ್ರಾಂತಿಕಾರಿ ಮನೋಭಾವ ಮುಂತಾದ ಕಾರಣಗಳನ್ನು ನೀಡುತ್ತಾರೆ. ಹೀಗೆ ಸದಾಕಾಲ 'ಹೊಸ ದಿಗಂತಗಳ ಶೋಧಕ'ರಾದ ತೇಜಸ್ವಿಯವರ ಸಾಹಿತ್ಯದಲ್ಲಿ ಭಿನ್ನ ಅಂಶಗಳೇ ಕಂಡುಬರುತ್ತವೆ. ಅವರ ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಕರ್ವಾಲೋ ಈ ಕೃತಿಗಳು ಕನ್ನಡ ಸಾಹಿತ್ಯದ ಮಟ್ಟಿಗೆ ತಮ್ಮ ಹೊಸ ಬಗೆಯ ಛಾಪನ್ನು ಮೂಡಿಸಿದೆ. ಈ ರೀತಿಯಾಗಿ ಸಾಹಿತ್ಯದಲ್ಲಿ ಪ್ರಯೋಗಾತ್ಮಕ ಚಿಂತನೆಗಳನ್ನು ಅಳವಡಿಸಿಕೊಂಡ ತೇಜಸ್ವಿಯವರು ಪ್ರವಾಸಿ ಕಥನಗಳ ಕುರಿತಂತೆಯೂ ಕೂಡ ಹೊಸದಿಗಂತಗಳನ್ನು ಶೋಧಿಸುವ ಕಡೆಗೆ ತಮ್ಮ ಚಿತ್ತವನ್ನು ನೆಟ್ಟಿರುವುದನ್ನು ಕಾಣಬಹುದಾಗಿದೆ.

ತೇಜಸ್ವಿಯವರು ಪ್ರವಾಸದ ಕುರಿತಂತೆ ನೀಡಿರುವ ವ್ಯಾಖ್ಯಾನವನ್ನು ಮುಂದಿನ ಸಾಲುಗಳಲ್ಲಿ ಕಾಣಬಹುದು. "ಕ್ಯಾಲೆಂಡರುಗಳಲ್ಲಿ, ಸಿನೆಮಾಗಳಲ್ಲಿ ಆಗಲೇ ಪ್ರಕಾಶನಗೊಂಡು ಕ್ಲೀಶೆಗಳಾಗಿರುವ ಪ್ರವಾಸಿ ಪ್ರಸಿದ್ಧ ಕ್ಷೇತ್ರಗಳನ್ನು ನೋಡಲು ನನಗೆ ಕೊಂಚವೂ ಉತ್ಸಾಹವಿಲ್ಲ. ಹಾಗಾಗಿ ತಾಜ್‌ಮಹಲ್, ಕುತುಬ್‌ಮಿನಾರ್, ಆಗ್ರಾ, ಇಲ್ಲಿಗೆಲ್ಲಾ ಹೋದಾಗ ಬೇಸರದಿಂದ ನಾನು ಗೆಳೆಯರಿಗೆ ದಯವಿಟ್ಟು ಒಳಗೆ ಹೋಗಿ ಬನ್ನಿ. ನಾನು ಹೊರಗೆ ಕುಳಿತಿರುತ್ತೇನೆ"*೧

"ಯಾರಿಗೆ ತಾವಿರುವಲ್ಲಿ ಸಂತೋಷ, ಉತ್ಸಾಹ ಕುತೂಹಲಗಳಿರುವುದಿಲ್ಲವೋ ಅವರು ಅದನ್ನು ಹುಡುಕಿಕೊಂಡು ಎಲ್ಲಿಗೇ ಪ್ರವಾಸ ಹೋದರೂ ವ್ಯರ್ಥ". ಆದ್ದರಿಂದ ನಾನು ಅಂಡಮಾನಿಗೆ ಹೋಗಿದ್ದಕ್ಕೂ, ಹೋಗದಿದ್ದಕ್ಕೂ ಹೆಚ್ಚು ವ್ಯತ್ಯಾಸ ಕಾಣಲಿಲ್ಲ.*೨ ಅಂದರೆ ತೇಜಸ್ವಿಯವರು ಪ್ರವಾಸದ ಬಗ್ಗೆ ಕೊಡುವಂತಹ ಭಿನ್ನ ವ್ಯಾಖ್ಯಾನವು ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರವಾಸ ಸಾಹಿತ್ಯವನ್ನು ಪರಿಭಾವಿಸುವಂತಹ ತಿರುಗುದಾರಿಗೆ ನಮ್ಮನ್ನು ಕೊಂಡೊಯ್ಯುತ್ತದೆ. ಕನ್ನಡದ ನವೋದಯ ಕಾಲಘಟ್ಟದಲ್ಲಿ ಪ್ರವಾಸ ಸಾಹಿತ್ಯ ಕೃತಿಗಳು ರಚಿತಗೊಂಡಿವೆ. ಅದರಲ್ಲಿ ಪ್ರಮುಖವಾಗಿ ನಾವು ಇತ್ತೀಚೆಗೆ 'ರಾಷ್ಟ್ರಕವಿ' ಎಂಬ ಕೀರ್ತಿಗೆ ಭಾಜನರಾದ ಜಿ.ಎಸ್. ಶಿವರುದ್ರಪ್ಪನವರ 'ಗಂಗೆಯೆ ಶಿಖರಗಳಲ್ಲಿ' ಎಂಬ ಪ್ರವಾಸ ಕಥನ ಉಲ್ಲೇಖನೀಯ ಕೃತಿ. ಏಕೆ ನಾನು ಈ ಉಲ್ಲೇಖವನ್ನು ಇಲ್ಲಿ ವ್ಯಕ್ತಪಡಿಸುತ್ತಿದ್ದೇನೆಂದರೆ ನವೋದಯದ ಮನಸ್ಸು ಪ್ರವಾಸವನ್ನು ಪರಿಭಾವಿಸುವ ಕ್ರಮಕ್ಕೂ; ಪಂಥಾತೀತವಾದಂತಹ ತೇಜಸ್ವಿಯವರ ಮನಸ್ಸಿನ ದೃಷ್ಟಿಕೋನಗಳು ಪ್ರವಾಸವನ್ನು ಗ್ರಹಿಸಿರುವ ಕ್ರಮಕ್ಕೂ ಇರುವಂತಹ ವ್ಯತ್ಯಾಸಗಳು ಇಲ್ಲಿ ಒಡೆದು ಎದ್ದು ಕಾಣುತ್ತವೆ. ಜಿ.ಎಸ್.ಎಸ್.ರವರು 'ಇಡೀ ಪ್ರವಾಸ ನನ್ನೊಬ್ಬನ ಸುತ್ತ ಎಣೆದುಕೊಂಡಿದೆ ನನ್ನ ಜೊತೆಗೆ ಇದ್ದ ನಮ್ಮ ಮನೆಯವರು ಮತ್ತು ಇನ್ನಿಬ್ಬರು ಸಹಯಾತ್ರಿಗಳು ಸುಮ್ಮನೆ ನನ್ನೊಂದಿಗೆ ಇದ್ದಾರೆ ಅಷ್ಟೇ, ಈಗಾಗಿ ಈ ಕಥನ ವೈಯಕ್ತಿಕವಾದ ಯಾವ ವ್ಯವಹಾರವನ್ನು ದಾಖಲಿಸಿದೆ ಕೇವಲ ನನಗೆ ಹಾಗೂ ನಾನು ಕಂಡ ನೋಟಗಳಿಗೆ ನಾನು ತೋರಿಸಿದ ಪ್ರತಿಕ್ರಿಯೆಗಳಿಗೆ ಮಾತ್ರ ಸೀಮಿತವಾಗಿದೆ. ಇದು ಈ ಪ್ರವಾಸಕಥನದ ಗುಣವೋ, ದೋಷವೋ ಅದನ್ನು ನಾನು ಹೇಳಲಾರೆ'

ಒಂದು ಪ್ರವಾಸ ಕಥನವನ್ನು ಹೀಗೆಯೇ ಓದಬೇಕು, ಇದೇ ಕ್ರಮದಲ್ಲಿ ಪರಿಭಾವಿಸಬೇಕು ಎನ್ನುವಂತಹ ಹಣೆಪಟ್ಟಿಗಳನ್ನು ಕಟ್ಟುವಂತಹದ್ದು ಕೂಡ ಎಷ್ಟರ ಮಟ್ಟಿಗೆ ಸರಿ? ಎನ್ನುವ ಪ್ರಶ್ನೆ ಎದುರಾಗುತ್ತದೆ. ನವೋದಯ ಕಾಲಘಟ್ಟದ ಪಂಥಾತೀತ ನಿಲುವನ್ನು ಅನುಸರಿಸುವಂತಹ ತೇಜಸ್ವಿಯವರ ಕಾಲಘಟ್ಟದ ನಡುವೆ ಇರುವ ಅಂತರವನ್ನು ಪರಿಭಾವಿಸಿದರೆ ತೇಜಸ್ವಿಯವರು ಪ್ರವಾಸವನ್ನು ಏಕೆ ಭಿನ್ನವಾಗಿ ಗ್ರಹಿಸಿದರು ಎಂಬುದಕ್ಕೆ ಉತ್ತರ ದೊರೆಯುತ್ತದೆ. ಅದೇ ರೀತಿಯಾಗಿ ರಹಮತ್ ತರೀಕೆರೆಯವರು ಪ್ರಸಿದ್ಧ ಸಂಸ್ಕೃತಿ ಚಿಂತಕರು. ಅವರ ಮಾತಿನಂತೆ ಸಂಸ್ಕೃತಿಯ ನೆಲೆಗಳನ್ನು ಕೂಲಂಕಶವಾಗಿ ಅಧ್ಯಯನ ಮಾಡುವುದಾದರೆ ಮೂರು ರೀತಿಯ



ಅಡಿಟಿಪ್ಪಣಿ: *೧. ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್: ತೇಜಸ್ವಿ ಪುಟ.೦೧

ಅಡಿಟಿಪ್ಪಣಿ: *೨. ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್: ತೇಜಸ್ವಿ ಪುಟ.೦೨

ವಿಭಾಗ ಕ್ರಮಗಳು ನಮ್ಮೆದುರು ತೆರೆದುಕೊಳ್ಳುತ್ತದೆ. ಅವುಗಳನ್ನು ಈ ಕೆಳಕಂಡಂತೆ ವಿವರಿಸಬಹುದು.

೧) ಪ್ರಧಾನ ಸಂಸ್ಕೃತಿ – ಅಧೀನ ಸಂಸ್ಕೃತಿ

೨) ಸಂಸ್ಕೃತಿ – ಉಪಸಂಸ್ಕೃತಿ

೩) ಸಂಸ್ಕೃತಿ – ಪ್ರತಿಸಂಸ್ಕೃತಿ

ಮೊದಲನೆಯ ಕಾಲಘಟ್ಟದ ಸಂಸ್ಕೃತಿಯ ವ್ಯಾಖ್ಯಾನವನ್ನು ವಿವರಿಸುವುದಾದರೆ ಪ್ರಧಾನ ಮತ್ತು ಅಧೀನ ನೆಲೆಗಳು ಜಾರಿಯಲ್ಲಿದ್ದವು ಎಂಬುದು ವೇದ್ಯವಾಗುತ್ತವೆ. ಈ ರೀತಿಯ ಸಂಸ್ಕೃತಿಯ ಚಿಂತನೆಗಳನ್ನು ನವೋದಯದ ಕಾಲಘಟ್ಟದಲ್ಲಿ ಕಾಣಬಹುದು. ಇಲ್ಲಿ ಪ್ರಧಾನ ಸಂಸ್ಕೃತಿಯು ಅಧೀನ ಸಂಸ್ಕೃತಿಯ ಮೇಲೆ ಸವಾರಿ ಮಾಡುತ್ತಿರುತ್ತವೆ. ಅಥವಾ ಪ್ರಧಾನ ಸಂಸ್ಕೃತಿಯ ಕಬಂಧ ಬಾಹುಗಳು ಅಧೀನ ಸಂಸ್ಕೃತಿಯನ್ನು ಹಿಡಿದಿರುತ್ತವೆ. ಇದನ್ನು ನಾವೊಂದು ಸಿದ್ಧ ಉದಾಹರಣೆಯ ಮೂಲಕ ವ್ಯಾಖ್ಯಾನಿಸುವುದಾದರೆ 'ಕಾರಂತರ ಚೋಮನದುಡಿ ಕಾದಂಬರಿಯಲ್ಲಿ ಮಾಲೀಕ ಸಂಕಪ್ಪಯ್ಯ ಪ್ರಧಾನ ಸಂಸ್ಕೃತಿಯ ಪ್ರತೀಕವಾದರೆ, ತುಂಡು ಭೂಮಿಗಾಗಿ ಒಡೆಯನ ಬಳಿ ನಿವೇಧಿಸಿಕೊಳ್ಳುತ್ತಿದ್ದ ಚೋಮನು ಅಧೀನ ಸಂಸ್ಕೃತಿಯ ಪ್ರತೀಕವಾಗುತ್ತಾನೆ. ಇಲ್ಲಿ ಅಧೀನ ಸಂಸ್ಕೃತಿ ಎಂಬುದು ಪ್ರಧಾನ ಸಂಸ್ಕೃತಿಯ ವಿಚಾರಧಾರೆಗಳನ್ನು ವಿರೋಧಿಸುವ ಕ್ರಮಗಳನ್ನು ವಿವರಿಸುವುದಾದರೆ 'ಚೋಮ ತಾನು ದುಡಿಯನ್ನು ಬಾರಿಸುವ ಮೂಲಕ ಈ ಎಲ್ಲಾ ಹೇರಿಕೆಗಳನ್ನು ವಿರೋಧಿಸುತ್ತಾನೆ' ಆದರೆ ಈ ಪ್ರಕ್ರಿಯೆ ನಡೆಯುವುದು ಆ ಒಂದು ಕ್ಷಣದಲ್ಲಿ ಮಾತ್ರ. ಮತ್ತೆ ಮುಂದೆ ಯಥಾರೀತಿ ಈ ಅಧೀನತೆ ಮುಂದುವರೆಯುತ್ತದೆ. ಇಲ್ಲಿ ಪ್ರಧಾನ ಸಂಸ್ಕೃತಿಯು ತನ್ನ ಇರುವನ್ನ ಪ್ರಬಲವಾಗಿ ಸಾಬೀತು ಪಡಿಸುತ್ತಾ ಅಧೀನ ಸಂಸ್ಕೃತಿಯನ್ನು ತನ್ನ ಹಂಗಿಗೆ ಒಳಪಡಿಸಿಕೊಳ್ಳುತ್ತದೆ.

ನಂತರದ ಕಾಲಘಟ್ಟದ ಸಂಸ್ಕೃತಿಯ ಚಿಂತನೆಯೆಂದರೆ, ಸಂಸ್ಕೃತಿ ಮತ್ತು ಉಪಸಂಸ್ಕೃತಿ. ಬುಡಕಟ್ಟು ನೆಲೆಗಳನ್ನು ಮುಖ್ಯವಾಹಿನಿಗೆ ತರುವ ಮುಖಾಂತರ ಬರಗೂರು ರಾಮಚಂದ್ರಪ್ಪನವರು ಈ ನೆಲೆಯ ಸಂಸ್ಕೃತಿ ಚಿಂತನೆಯನ್ನು ನಡೆಸಿರುವರು. ಇಲ್ಲಿ ಸಂಸ್ಕೃತಿಯೊಂದು ಮತ್ತೊಂದು ಸಂಸ್ಕೃತಿಗೆ ಅಧೀನವಾಗಿರದೆ ತನ್ನ ಇರವನ್ನು, ತನ್ನ ಸ್ವಂತಿಕೆಯ ಮೂಲಕ ಸಾಭೀತುಪಡಿಸುತ್ತದೆ.

ಮೂರನೇ ಘಟ್ಟದ ಸಂಸ್ಕೃತಿ ಚಿಂತನೆ ಎಂದರೆ ಸಂಸ್ಕೃತಿ ಮತ್ತು ಪ್ರತಿಸಂಸ್ಕೃತಿ. ಇಲ್ಲಿ ಸಂಸ್ಕೃತಿಗೆ ಸರಿಸಮಾನವಾಗಿ ಪ್ರತಿಸಂಸ್ಕೃತಿಯು ತನ್ನ ನೆಲೆಯನ್ನು ಸಾಭೀತುಪಡಿಸುತ್ತಿರುತ್ತದೆ. ಈ ರೀತಿಯ ಚಿಂತನೆಗೆ ಒಂದು ಉದಾಹರಣೆ ಕೊಡುವುದಾದರೆ 'ರನ್ನನ ಗದಾಯುದ್ಧಂ' ಕೃತಿಯಲ್ಲಿ

ಭೀಮನು ನಾಯಕನಾದರೆ ದುರ್ಯೋಧನನು ಇಲ್ಲಿ ಖಳನಾಯಕನಾಗದೆ ಪ್ರತಿನಾಯಕನಾಗಿ ಕಂಡು ಬರುತ್ತಾನೆ. ಇಲ್ಲಿ ಯಾವುದೇ ಅಧೀನತೆಯ ಚಿಂತನೆಯು ವ್ಯಕ್ತವಾಗದೆ ನಾಯಕ ಮತ್ತು ಪ್ರತಿನಾಯಕರಿಬ್ಬರೂ ಸಹ ತಮ್ಮ ಸ್ವಂತಿಕೆಯನ್ನು ಕಾಪಾಡಿಕೊಂಡು ಹೋಗುತ್ತಾರೆ. ಈ ರೀತಿ ತಮ್ಮ ಸ್ವಂತಿಕೆಯನ್ನು ಕಾಪಾಡಿಕೊಳ್ಳುವ ಪ್ರತಿ ಸಂಸ್ಕೃತಿ ಚಿಂತನೆಯನ್ನು ಪ್ರತಿಪಾದಿಸುವ ರಹಮತ್ ತರೀಕೆರೆಯವರು ಅಂಡಮಾನ್‌ನ್ನು ಕಂಡ ಬಗೆ ಯಾವುದು ಎಂಬುದೂ ಕೂಡ ಈ ಸಂಶೋಧನೆಯಲ್ಲಿ ಮುಖ್ಯವೆನಿಸುತ್ತದೆ. ರಹಮತ್ ತರೀಕೆರೆಯವರು ತಮ್ಮ ಕೃತಿಯನ್ನು ಅರ್ಪಿಸಿರುವುದು **'ಬಿಲ್ಲುಬಾಣಗಳ ಮೂಲಕ ತಮ್ಮ ತಮ್ಮತನ ಕಾಪಾಡಿಕೊಳ್ಳಲು ಸೆಣಸುತ್ತಿರುವ ಜರವಾ ಆದಿವಾಸಿ ಬುಡಕಟ್ಟಿನವರುಗಳಿಗೆ'** ಈ ವಾಕ್ಯದ ಮುಖಾಂತರ ನಮಗೆ ಅರ್ಥವಾಗುವುದೇನೆಂದರೆ ಪ್ರತಿ ಸಂಸ್ಕೃತಿಯ ಚಿಂತನೆಗಳನ್ನು ಈ ಕೃತಿಯ ಮೂಲಕ ಪ್ರವಾಸ ಕೃತಿಯಲ್ಲಿ ಬಹು ದಟ್ಟವಾಗಿ ಅಭಿವ್ಯಕ್ತಗೊಳಿಸಿದ್ದಾರೆ ಎಂದು ಹೇಳಬಹುದು. ಸದಾ ಹೊಸ ದಿಗಂತವನ್ನೇ ಶೋಧಿಸುವ ತೇಜಸ್ವಿಯವರು ಪ್ರತಿ ಸಂಸ್ಕೃತಿಯ ಚಿಂತಕರಾದ ರಹಮತ್‌ರವರು ಹಾಗೂ ಐತಿಹಾಸಿಕ ದೃಷ್ಟಿಕೋನವನ್ನು ಮೂಲಭಿತ್ತಿಯಾಗಿಸಿಕೊಂಡು ಅಂಡಮಾನ್‌ನ್ನು ಕಂಡಂತಹ ಕೆ.ಟಿ. ಗಟ್ಟಿಯವರ ಅಧ್ಯಯನ ಕ್ರಮಗಳು ಹೇಗೆ ಅಂಡಮಾನ್‌ನ್ನು ಓದುಗರ ಮುಂದೆ ಸವಿಸ್ತಾರವಾಗಿ ಬಿಚ್ಚಿಡುತ್ತದೆ ಎಂಬುದು ಕೂಡ ಮುಖ್ಯವಾಗುತ್ತದೆ. ಇಲ್ಲಿ ಮತ್ತೊಂದು ಉಲ್ಲೇಖಾರ್ಹ ವಿಷಯವೆಂದರೆ ವಿಜಯ ಸುಬ್ಬರಾಜ್‌ರವರ ಪ್ರವಾಸಿ ಕಥನ 'ಸ್ವರ್ಗದೀಪದ ಕನಸಿನ ಬೆನ್ನೇರಿ' ಈ ಕೃತಿ ಶೈಕ್ಷಣಿಕ ಪ್ರವಾಸಕ್ಕೆ ಸಂಬಂಧಪಟ್ಟ ಪ್ರವಾಸ ಕಥನ ಎನ್ನುವಂತಹ ವಿವರಣೆಯನ್ನು ಈ ಲೇಖಕಿಯವರೇ ಕೊಟ್ಟಿರುವುದರಿಂದ ಅಂಡಮಾನ್‌ಗೆ ಭೇಟಿ ನೀಡಬೇಕೆಂಬ ಬಯಕೆ ಬಾಲ್ಯದಿಂದಲೂ ಬಹಳವಾಗಿ ಲೇಖಕಿಯವರನ್ನು ಕಾಡಿದೆ.

ಕೆ.ಟಿ.ಗಟ್ಟಿಯವರು ಅಂಡಮಾನಿಗೆ ಹೋಗಿ ಆ ಪ್ರದೇಶದ ಪೂರ್ವ ಇತಿಹಾಸವನ್ನು ಅಲ್ಲಿನ ಮೂರು ನಾಲ್ಕು ಜನ ಸ್ಥಳೀಯ ಅನುಭವಸ್ಥ ಜನಗಳ ಮುಖಾಂತರ ತಿಳಿದು ತೆರೆದಿಡಲು ಪ್ರಯತ್ನಿಸುತ್ತಾರೆ. ಅಲ್ಲಿ ಗತ ಮತ್ತು ವರ್ತಮಾನಗಳು ಮುಖಾಮುಖಿಯಾಗುವಂತಹ ಬಗೆ, ಓದುಗರನ್ನು ಚಿಂತೆಗೆ ಈಡು ಮಾಡುತ್ತದೆ. ಗಟ್ಟಿಯವರು ಅಂಡಮಾನ್‌ನ್ನು ವರ್ತಮಾನದಲ್ಲಿ ನೋಡದೇ ಭೂತಕಾಲದ ಮುಖಾಂತರ ವರ್ತಮಾನವನ್ನು ಸೃಜಿಸುವಂತಹ ಈ ಕ್ರಮವು ಸಂಶೋಧನೆಯಲ್ಲಿ ಹೊಸಕ್ರಮವಾಗಿ ಕಂಡುಬಂದಿದೆ. ಆದರೆ ತೇಜಸ್ವಿಯವರು ಅಂಡಮಾನ್‌ನ್ನು ಇದ್ದಂತೆಯೇ ಗ್ರಹಿಸಲು ಮುಂದಾಗಿದ್ದಾರೆ. ಅವರು ಹೇಳುವಂತೆ ಅಂಡಮಾನಿನ ಬಗ್ಗೆ ವರದಿರೂಪದ ಪ್ರವಾಸಿ ಕಥನವನ್ನು ಕಟ್ಟಿಕೊಡದೆ; ಅನಾವಶ್ಯಕ ವಿವರವನ್ನು ಹೇಳಿ ಪ್ರವಾಸ ಕಥನದ ದಿಕ್ಕುದಾರಿಗಳನ್ನು ತಪ್ಪಿಸದೇ ವಿಭಿನ್ನ ನೆಲೆಯ ಚಿಂತನೆಗಳನ್ನು ಮೂಡಿಸುವುದರಲ್ಲಿ ಯಶಸ್ವಿಯಾಗಿದ್ದಾರೆ ಎಂದರೆ ಬಹುಶಃ ತಪ್ಪಾಗಲಾರದು. ಅಲೆಮಾರಿಯ ಅಂಡಮಾನ್ ಮತ್ತು

ಮಹಾನದಿ ನೈಲ್ ಎಂಬ ಪ್ರವಾಸಿ ಕಥನದಲ್ಲಿ ತೇಜಸ್ವಿಯವರು ವೈಯಕ್ತಿಕ ಸಾಹಸಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದರೂ ಅಂಡಮಾನಿನ ಇತಿಹಾಸ ಸಮಕಾಲೀನ ಜೀವನ ಈ ಬಗೆಯ ವಿವರಗಳನ್ನು ಸಹ ಅತ್ಯಂತ ದಟ್ಟವಾಗಿ ಕಟ್ಟಿಕೊಡುತ್ತಾರೆ. ತೇಜಸ್ವಿಯವರೇನೂ ಅಂಡಮಾನಿನಲ್ಲಿನ ನಿರ್ಜೀವ ಕಟ್ಟಡಗಳನ್ನು ಸಂದರ್ಶಿಸುತ್ತಾ, ಅದರ ಇತಿಹಾಸವನ್ನು ಕೆದಕುತ್ತಾ ಕೂರುವುದಿಲ್ಲ. ಇದಕ್ಕೆ ಒಂದು ನಿದರ್ಶನ ನೀಡುವುದಾದರೆ ಅವರ ಸಹವರ್ತಿಗಳೆಲ್ಲಾ ಸೆಲ್ಯೂಲಾರ್ ಜೈಲನ್ನು ವೀಕ್ಷಿಸಲು ತೆರಳಿದರೆ ಇವರು ಮಾತ್ರ ಮೀನು ಹಿಡಿಯಲು ಸಮುದ್ರಕ್ಕೆ ತೆರಳುತ್ತಾರೆ. ಅವರೇ ಹೇಳುವಂತೆ 'ಸಮುದ್ರದಲ್ಲಿರುವಂತಹ ಜಲಚರಗಳ ಬಗ್ಗೆ ಅಧ್ಯಯನ ಮಾಡುತ್ತಾ ಇಡೀ ಜೀವಮಾನವನ್ನು ಬೇಕಾದರೂ ಕಳೆಯುತ್ತೇನೆ' ಎಂದು ಹೇಳುವ ಮಾತು ಅವರ ವೈಜ್ಞಾನಿಕ ದೃಷ್ಟಿಕೋನವನ್ನು ಅನಾವರಣಗೊಳಿಸುತ್ತದೆ. ಹಾಗಾದರೆ ಅವರ ಪ್ರವಾಸದ ಉದ್ದೇಶವೇನು ? ಎಂಬುದು ಇಲ್ಲಿ ಓದುಗರಿಗೆ ವೇಧ್ಯವಾಗುತ್ತಾ ಹೋಗುತ್ತದೆ. ತೇಜಸ್ವಿಯವರು ಪ್ರಕೃತಿಯನ್ನು ಎಷ್ಟು ಸೂಕ್ಷ್ಮವಾಗಿ ನೋಡುತ್ತಾರೆ ಎಂಬುದಕ್ಕೆ ಕೆಲವು ಸ್ವಾರಸ್ಯಪೂರ್ಣ ಘಟನೆಗಳನ್ನು ನಾನಿಲ್ಲಿ ಉಲ್ಲೇಖಿಸಲೇಬೇಕು. ತೇಜಸ್ವಿಯವರು ಹವಳ ದಂಡೆಗಳ ಬಗ್ಗೆ ಬರೆಯುತ್ತಾ "ಅಂಡಮಾನಿನ ಸಮುದ್ರದ ದಂಡೆಗಳು ಕೋರಲ್ ಅಥವಾ ಹವಳದ ದಂಡೆಗಳಿಂದ ಕೂಡಿದೆ. ಈ ಹವಳದ ದಂಡೆಗಳು ಒಂದು ಬಗೆಯ ಸೂಕ್ಷ್ಮ ಜೀವಿಗಳಿಂದ ರೂಪಿಸಲ್ಪಡುತ್ತದೆ. ಸಮುದ್ರದ ನೀರನ್ನು ವಿಭಜಿಸಿ ಕ್ಯಾಲ್ಸಿಯಂ ಅಥವಾ ಸುಣ್ಣವನ್ನು ಉಪಯೋಗಿಸಿಕೊಂಡು ಈ ಜೀವಿಗಳು ಹವಳದ ಚಿಕ್ಕ ಚಿಕ್ಕ ಕೋಶಗಳನ್ನು ಒಂದರ ಪಕ್ಕ ಒಂದರಂತೆ ಕಟ್ಟುತ್ತಾ ಹೋಗುತ್ತವೆ. ಇವು ಹವಳದ ಕಲ್ಲುಗಳನ್ನು ರೂಪಿಸುವುದು ಎಷ್ಟು ನಿಧಾನದ ಕ್ರಮ ಎಂದರೆ ಮಿಲಿಯಗಟ್ಟಲೆ ವರ್ಷಗಳಿಂದ ನಿಧಾನವಾಗಿ, ನಿರಂತರವಾಗಿ ಹವಳದ ಕಲ್ಲುಗಳನ್ನು ರಚಿಸುತ್ತಲೇ ಇರುವುದರಿಂದ ಕಾಲಾಂತರದಲ್ಲಿ ಈ ಹವಳದ ದಂಡೆಗಳು ಮೈಲುಗಟ್ಟಲೆ ಇರುವ ಭೂಖಂಡಗಳಾಗಿ ನಿರ್ಮಾಣವಾಗುತ್ತವೆ. ಈ ಸೂಕ್ಷ್ಮ ಜೀವಿಗಳು ಸಮುದ್ರದಲ್ಲಿ ನೂರು ಅಡಿಗಳಿಗಿಂತ ಆಳದಲ್ಲಿ ಸಮುದ್ರದ ತಳ ಇದ್ದರೆ ಅವು ಅಲ್ಲಿ ಬದುಕಲಾರವು. ಎಂದರೆ ಅವುಗಳ ಸೃಷ್ಟಿಕ್ರಿಯೆಗೆ ಸೂರ್ಯನ ಬೆಳಕಿನ ಅವಶ್ಯಕತೆ ಇದ್ದೇ ಇದೆ. ಆದರೆ ಇವು ಸಮುದ್ರ ಮಟ್ಟಕ್ಕಿಂತಲೂ ಮೇಲೂ ಬದುಕಲಾರವು. ಇವು ಸದಾ ಸಮುದ್ರದ ನೀರಿನಿಂದ ಸದಾಕಾಲತೊಯ್ದರೆ ಮಾತ್ರ ಜೀವಂತವಾಗಿರುತ್ತವೆ. ಸಮುದ್ರದ ಅಲೆಗಳ ನಿರಂತರ ದಾಳಿಗೆ ಪ್ರತಿರೋಧವನ್ನು ಒಡ್ಡುತ್ತಾ ತಮ್ಮ ಗೂಡುಗಳನ್ನು ರಚಿಸುವ ಈ ಸೂಕ್ಷ್ಮ ಜೀವಿಗಳ ಶಕ್ತಿಯ ಬಗ್ಗೆ ಆಶ್ಚರ್ಯವಾಗುತ್ತದೆ. ಎಷ್ಟೋ ಭಾರಿ ಸಮುದ್ರದ ದೈತ್ಯ ಅಲೆಗಳು ಬಂದು ಅಪ್ಪಳಿಸಿದಾಗ ಈ ಹವಳದ ದಂಡೆಗಳು ಮುರಿದು ಚೂರು ಚೂರಾಗಿ ಬಿಡುತ್ತವೆ. ಆನಂತರ ಅಲೆಗಳ ತೋಯ್ದಾಟದಲ್ಲಿ ದಡದತ್ತ ತಳ್ಳಲ್ಪಡುತ್ತದೆ. ಆದರೂ ಈ ಜೀವಿಗಳ ನಿರಂತರ ದುಡಿಮೆಯೇ ಇವುಗಳನ್ನು ಅಜೇಯವನ್ನಾಗಿ ಮಾಡಿದೆ."[7]

ಈ ದೀರ್ಘವಾದ ವಿವರಣೆಯ ಮೂಲಕ ನಮಗೆ ವೇಧ್ಯವಾದ ಸಂಗತಿಯೇನೆಂದರೆ ತೇಜಸ್ವಿಯವರು ಏಕಕಾಲದಲ್ಲಿ ಜೀವವಿಜ್ಞಾನಿ, ಸಾಹಿತಿ, ಪ್ರವಾಸಿಗ, ಇತಿಹಾಸಕಾರ ಎಲ್ಲವೂ ಆಗಿ ಕಂಡು ಬರುತ್ತಾರೆ. ಇಲ್ಲಿ ಯಾವ ಅಂಶ ಹೆಚ್ಚು, ಯಾವ ಅಂಶ ಕಡಿಮೆ ಎನ್ನುವುದು ಮುಖ್ಯವಲ್ಲ. ಆದರೆ ತೇಜಸ್ವಿಯವರ ಸಮಗ್ರ ದೃಷ್ಟಿಕೋನ ಇಲ್ಲಿ ಹೇಗೆ ನಿರೂಪಿತವಾಗಿದೆ? ಎಂಬ ಅಂಶ ಅತೀ ಮುಖ್ಯವೆನಿಸುತ್ತದೆ. ಇಲ್ಲಿನ ತಮ್ಮ ಪ್ರವಾಸ ಕಥನದಲ್ಲಿ ಹೀಗೇ ಇರಬೇಕೆಂಬ ಸಿಕ್ಕ ಮೌಲ್ಯಗಳನ್ನು ಪ್ರತಿಪಾದಿಸುತ್ತಾ ಸಾಗದೆ; ತಮಗೆ ಅನುಭವವಾದ ಅಂಶಗಳನ್ನು ನಿರೂಪಿಸಿದ್ದಾರೆ. ಪ್ರಾಚೀನ ಸಾಹಿತ್ಯದಲ್ಲಿ ಮಹಾಕಾವ್ಯಗಳು ರಚನೆಯಾಗುತ್ತಿದ್ದ ಸಂದರ್ಭದಲ್ಲಿ ಅಷ್ಟಾದಶ ವರ್ಣನೆಗಳ ಉದಾಹರಣೆಯನ್ನು ಕಾಣುತ್ತೇವೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳ ಸಾಲಿನಲ್ಲಿ 'ವೇಶ್ಯಾವಾಟಿಕೆ' ವರ್ಣನೆಯೂ ಸಹ ಬಂದಿದೆ. ಅಲ್ಲಿ ವರ್ಣನೆಗೋಸ್ಕರ ಕವಿಯು ಬ್ರಹ್ಮಚಾರಿಯಾದಂತಹ ನಾರದನನ್ನು ವೇಶ್ಯಾಗೃಹಕ್ಕೆ ಕಳುಹಿಸುತ್ತಾನೆ. ಈ ವರ್ಣನೆಯೂ ಕೃತಿಯ 'ಔಚಿತ್ಯ'ಕ್ಕೆ ಭಂಗವನ್ನು ತರುತ್ತದೆ ಎನ್ನುವಂತಹ ಚರ್ಚೆಗಳು ಕನ್ನಡ ಸಾಹಿತ್ಯದಲ್ಲಿ ನಡೆದುಹೋಗಿದೆ. ಇಂತಹ ವರ್ಣನೆಗಳ ಏರಿಕೆಗಳು ಎಷ್ಟರ ಮಟ್ಟಿಗೆ ಓದುಗನನ್ನ ಕೃತಿಯ ಲೋಕಕ್ಕೆ ಕೊಂಡೊಯ್ಯುತ್ತದೆ? ಎಂಬಂತಹ ಪ್ರಶ್ನೆಯೂ ಸಹ ಮುಖ್ಯವಾಗುತ್ತದೆ. ಅದೇ ರೀತಿ ಪ್ರವಾಸ ಸಾಹಿತ್ಯದ ಮಟ್ಟಿಗೆ ಬಂದಾಗ ಸಿದ್ಧ ಮೌಲ್ಯಗಳು ಪ್ರವಾಸ ಕೃತಿಯ ಔಚಿತ್ಯವನ್ನು ಹೇಗೆ ಕೆಡಿಸಬಲ್ಲವು? ಎಂಬಂತಹ ವಿವರಗಳು ಈ ಸಂಶೋಧನೆಯಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದೆ. ಮೇಲಿನ ವಾಕ್ಯವನ್ನು ಉಲ್ಲೇಖಿಸುವ ಕಾರಣವೇನೆಂದರೆ ತೇಜಸ್ವಿಯವರಿಗೆ ಪ್ರವಾಸದ ಸಿದ್ದತೆಗಳು, ಪ್ರವಾಸ ಮಾಡಿದ ಅನುಭವವಗಳು ಸಿದ್ಧಮೌಲ್ಯಗಳಾಗಿ ಕಂಡು ಬರದೆ, ಕಂಡಿದ್ದನ್ನು ಗೀಚುವಂತಹ ಮನೋಪ್ರವೃತ್ತಿ ಈ ಪ್ರವಾಸಿ ಕಥನದಲ್ಲಿದೆ. ತೇಜಸ್ವಿಯವರಿಗೆ ಅಮುಖ್ಯವಾದ ಸಂಗತಿಗಳೇ ಎಷ್ಟೋ ಪ್ರವಾಸ ಕಥನಗಳಲ್ಲಿ ಮುಖ್ಯವಾಗಿ ಕೇವಲ ವರದಿಯಾಗಿರುವಂತಹ ಅಪಾಯಗಳನ್ನು ಇಲ್ಲಿ ಕಾಣಬಹುದು. ತೇಜಸ್ವಿಯವರು ಈ ಕೃತಿಯನ್ನು ಆರಂಭಿಸಿರುವುದು ಕಥೆ ಕಾದಂಬರಿಯ ರೀತಿಯಲ್ಲಿ. ಕನ್ನಡದಲ್ಲಿ ಬಂದ ಬೇರೆ ಬೇರೆ ಪ್ರವಾಸ ಕಥನಗಳಿಗಿಂತ ತುಂಬಾ ಭಿನ್ನವಾಗಿ ಮತ್ತು ಸೃಜನಾತ್ಮಕವಾಗಿ ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್ ಪ್ರವಾಸಿ ಕಥನ ಮೂಡಿಬಂದಿದೆ.

ಕನ್ನಡದ ಬಹುತೇಕ ಪ್ರವಾಸ ಕಥನಗಳು ಸಾಮಾನ್ಯವಾಗಿ ಕನ್ನಡದಲ್ಲಿ ಇದುವರೆಗೆ ಬಂದಿರುವುದು 'ಪ್ರವಾಸಿಗರು ಹೊರಟಲ್ಲಿಂದ ಆರಂಭವಾಗಿ ಬಂದಲ್ಲಿಗೆ ನಿಂದು ಮುಕ್ತಾಯವಾಗುತ್ತಾ ನೀರಸವಾದ ಅಂಕಿ ಅಂಶ ವರ್ಣನೆ, ಮನರಂಜನೆಯ ಸಂಗತಿಯನ್ನು ಬಣ್ಣಿಸುವಲ್ಲಿ ನಿರತವಾಗಿರುವುದನ್ನು' ಕಾಣುತ್ತೇವೆ. ಆದರೆ ತೇಜಸ್ವಿಯವರ ಈ ಪ್ರವಾಸಿ ಕಥನದ ಹಿಂದೆ ವಿಸ್ಮಯದ ಅನ್ವೇಷಣೆ, ಶೋಧನೆ, ವೈಜ್ಞಾನಿಕ ಮನೋಭಾವ ಇವುಗಳನ್ನು ಕಾಣಬಹುದು.

ಇದರ ಜೊತೆಗೆ ಪ್ರವಾಸದಲ್ಲಿ ಅನುಭವಿಸಿದ ಅವಘಡಗಳನ್ನು ತೇಜಸ್ವಿಯವರು ಓದುಗರಿಗೆ ಕಾಣಗೊಡುತ್ತಾರೆ. ರಹಮತ್ ತರೀಕೆರೆಯವರ 'ಅಂಡಮಾನ್ ಕನಸು' ಓದುಗರಿಗೆ ಅನಿರ್ವಚನೀಯವಾದ ಅನುಭವ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ರಹಮತ್‌ರವರು ಅಂಡಮಾನಿನ ಶುಷ್ಕ ವಿವರಗಳನ್ನು ದಾಖಲಿಸದೇ ಸಚಿತ್ರವಾಗಿ ಓದುಗನ ಮುಂದೆ ಅಂಡಮಾನನ್ನು ತೆರೆದಿಡುತ್ತಾರೆ.

ಏಕಕಾಲಕ್ಕೆ ರಹಮತ್‌ರವರು ಸ್ಥಳೀಯ ಪ್ರಜ್ಞೆ ಮತ್ತು ಅಂಡಮಾನನ್ನು ಪರಸ್ಪರ ಮುಖಾಮುಖಿಗೆ ಒಳಗು ಮಾಡುತ್ತಾರೆ. ಇದಕ್ಕೆ ಉದಾಹರಣೆಯಾಗಿ ಮ್ಯಾಂಗ್ರೋವ್ ಕಾಡುಗಳ ಬಗ್ಗೆ ವರ್ಣಿಸುತ್ತಾ, ಮ್ಯಾಂಗ್ರೋವ್ ಮರಗಳು ಹುಟ್ಟಿ ಬೆಳೆಯುವ ಬಗ್ಗೆ ವಿವರಿಸುತ್ತಾ 'ಅಂತಹ ಮರಗಳನ್ನು ಶರಾವತಿ ಗೇರುಸೊಪ್ಪಕ್ಕೆ ಹೋಗುವ ಪಾಣೆ ಮಂಗಳೂರಿನ ಬಳಿ ಈ ರೀತಿ ಗಿಡಗಳು ಬೆಳೆಯುವುದನ್ನು ನೋಡಿದ್ದೆ' ಎಂದು ಉಲ್ಲೇಖಿಸುತ್ತಾರೆ. ಇಂತಹ ಅನುಭವಗಳ ಬೆನ್ನು ಹತ್ತಿ ಹೊರಟಾಗ ರಹಮತ್ ಹೇಳುತ್ತಿರುವ ಅನುಭವಗಳನ್ನು ನಾವಿಲ್ಲಿಯೇ ಮುಖಾಮುಖಿ ಮಾಡಿಕೊಳ್ಳಬಹುದು. ಇದರ ಜೊತೆಗೆ ಅಲ್ಲಿನ ಅಧಿಕಾರಿಗಳ ವರ್ತನೆ, ಸ್ಥಾನಮಾನ ಇವುಗಳ ಬಗ್ಗೆಯೂ ಚರ್ಚಿಸುತ್ತಾರೆ. ಮಾಯಾಬಂದರ್ ಎಂಬಲ್ಲಿ ಉಳಿದುಕೊಳ್ಳಲು ಹೋದಾಗ ಅಲ್ಲಿನ ಅಧಿಕಾರಿಯು ಇವರನ್ನು ಆದರ ಮತ್ತು ಗೌರವದಿಂದ ಕಂಡು ಇವರು ಕೊಟ್ಟ ಅರ್ಜಿಯನ್ನು ಸ್ವೀಕರಿಸಿ ಟಿಪ್ಪಣಿ ಬರೆದು ಅತಿಥಿ ಗೃಹದ ಕೋಣೆಗಳನ್ನು ಮಂಜೂರು ಮಾಡುತ್ತಾರೆ. ಇದರ ಮೂಲಕ ಅಲ್ಲಿನ ಅಧಿಕಾರಿಗಳ ಸೇವಾ ಮನೋವೃತ್ತಿಯನ್ನು ತಿಳಿಸುತ್ತಾರೆ. ಇಲ್ಲಿ ನೆನಪಾಗುವ ಮತ್ತೊಂದು ಸಂಗತಿಯೆಂದರೆ ತೇಜಸ್ವಿಯವರ 'ತಬರನ ಕಥೆ'ಯ ಪ್ರಸಂಗ. ಇಲ್ಲಿ ಸರಕಾರಿ ಅಧಿಕಾರಿಗಳು ಆತನಿಗೆ ನಿವೃತ್ತಿ ವೇತನ ನೀಡದೆ ಸತಾಯಿಸಿ ಆಡಳಿತ ಶಾಹಿಯ ಕರಾಳ ಮುಖವನ್ನು ಪರಿಚಯಿಸುತ್ತಾರೆ. ಹಾಗಾಗಿ ಅಧಿಕಾರವುಳ್ಳವರು ಸೌಜನ್ಯಯುತವಾಗಿ ವರ್ತಿಸಿದರೆ ಆ ಅಧಿಕಾರಕ್ಕೆ ಬೆಲೆಬರುತ್ತದೆ. ಇಲ್ಲಿ ಕುವೆಂಪುರವರ ಹೇಳಿಕೆಯನ್ನು ಉಲ್ಲೇಖಿಸುವುದು ಅನಿವಾರ್ಯ. "ಯಾವುದೇ ಒಬ್ಬ ವ್ಯಕ್ತಿಯ ಯೋಗ್ಯತೆಯನ್ನು ಅಳೆಯಬೇಕಾದರೆ ಆತನಿಗೆ ಅಧಿಕಾರ ಕೊಟ್ಟು ನೋಡಬೇಕು. ಅಧಿಕಾರವಿಲ್ಲದಾಗ ಹೇಗೆ ವರ್ತಿಸಿದ್ದಾನೆಯೋ, ಅಧಿಕಾರವಿದ್ದಾಗಲೂ ಸಹ ಅದೇ ರೀತಿ ವರ್ತಿಸಿದರೆ ವ್ಯಕ್ತಿಯ ಘನತೆ ಹೆಚ್ಚಾಗುತ್ತದೆ' ಎಂದು ನಾವು ಅರಿತುಕೊಳ್ಳಬೇಕು. ಇದೇ ರೀತಿಯ ಉದಾಹರಣೆ ಗಟ್ಟಿಯವರ ಕೃತಿಯಲ್ಲಿಯೂ ಕಾಣಬಹುದು. ೧೯೧೦ರಲ್ಲಿ ಸೆಲ್ಯುಲಾರ್ ಜೈಲಿನ ಅಧಿಕಾರಿಯಾಗಿ ಅಧಿಕಾರವಹಿಸಿಕೊಂಡ 'ಡೇವಿಡ್ ಬ್ಯಾರಿ' ಆ ಜೈಲಿನ ಖೈದಿಗಳಿಗೆ ಹೇಳುವ ಮಾತುಗಳು ಆತನ ಅಧಿಕಾರದ ಮದವನ್ನು ಪ್ರದರ್ಶಿಸುತ್ತದೆ. ಆತನು ದೇವರಿಗಿಂತ ನಾನೇ ಹೆಚ್ಚು ಎನ್ನುವ ಅಹಂಕಾರದ ಮಾತುಗಳನ್ನು ಹೇಳುತ್ತಿರುತ್ತಾನೆ. ಅದಕ್ಕೆ ತಕ್ಕುದಾದ ಉತ್ತರವನ್ನು ಭಾರತೀಯ ವೀರ ಸಾರ್ವಕರ್ ನೀಡಿರುತ್ತಾನೆ.

# ಅಧ್ಯಾಯ – ೦೬

## ಸ್ತ್ರೀ ಅನುಭವ ಕೇಂದ್ರಿತ ಸಂಕಥನ

ಭಾರತದ ಭೌಗೋಳಿಕ ಪರಿಸರದ ಎಲ್ಲೆಯ ಒಳಗಡಿಯಲ್ಲಿ ಬರುವ ಅಂಡಮಾನ್ ಒಂದು ದ್ವೀಪವಾಗಿದ್ದು. ಮೂಲದಿಂದ ಬಿಡಿಸಿಕೊಂಡ ಬೇರಿನೋಪಾದಿಯಲ್ಲಿ ಇರುವ ಅಂಡಮಾನ್ ಕೌತುಕಗಳೇ ತುಂಬಿರುವ ಒಂದು ಪ್ರದೇಶ. ಯಾವುದೇ ಪ್ರದೇಶದ ಅಧ್ಯಯನದ ಸಂದರ್ಭದಲ್ಲಿ ನಾವು ಆ ಪ್ರದೇಶದ ಐತಿಹಾಸಿಕವಾದ ವಿಚಾರಗಳು, ಅಂಡಮಾನಿನ ವಿಚಾರದಲ್ಲಿ ಅದು ಕಷ್ಟಕರವಾದ ವಿಚಾರ. ಏಕೆಂದರೆ ಇಲ್ಲಿ ಪುರಾಣ ಐತಿಹ್ಯಗಳಿಗೆ ಸಂಬಂಧಿತ ಯಾವುದೆ ವಿಚಾರಗಳು ನಮಗೆ ತಿಳಯ ಬರುವುದಿಲ್ಲ. ಈ ಪ್ರದೇಶದಲ್ಲಿ ಜನವಸತಿ ಯಾವಾಗ ಪ್ರಾರಂಭವಾಯಿತು ಎಂಬುದರ ಬಗ್ಗೆ ಗೊಂದಲಗಳಿವೆ. ಅಂಡಮಾನ್ ಎಂದರೆ ಒಂದು ಕಾಲದಲ್ಲಿ ನರಕ ಸದೃಶವಾದ ಪ್ರದೇಶವೇ? ಎಂಬ ಅಂಶ ಜನ ಮಾನಸದಲ್ಲಿ ಉದ್ಭವಿಸಿದ್ದು ಉಂಟು. ಉದಾ:– ಅಂಡಮಾನ್ ಜೈಲು, ಪ್ರಾಕೃತಿಕ ಸಂಪತ್ತನ್ನ ಅಗಾಧವಾಗಿ ಒಳಗೊಂಡಿರುವ ಭೂ ಪ್ರದೇಶದಲ್ಲಿ ಅಂಡಮಾನಿನ ಸಾಮರ್ಥ್ಯ ಅಧಿಕ ಎಂಬುದನ್ನು ನಾವು ತೇಜಸ್ವಿಯವರ ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್‌ನದಿ ಯನ್ನು ಓದಿದಾಗ ತಿಳಿಯುತ್ತದೆ.

ಅಂಡಮಾನ್ ಪ್ರವಾಸಿಗರ ಸಂಖ್ಯೆಯ ಅಧಿಕವಾಗುತ್ತಿದ್ದಂತೆ. ಇಲ್ಲಿನ ಮೂಲ ನಿವಾಸಿಗಳ ಜೀವನದ ಮೇಲೆ ವ್ಯತಿರಿಕ್ತವಾದ ಪರಿಣಾಮ ಬೀರಿರುವುದನ್ನು ಗಮನಿಸಬಹುದಾಗಿದೆ. ಬುಡಕಟ್ಟು ಜನಗಳ ಮೂಲನೆಲೆಯಾಗಿ ಜಾರುವಾ, ಓಂಗೆ, ಸೋಂಬಿಯನ್ ಮುಂತಾದ ಜನಾಂಗಗಳನ್ನು ಹೆಸರಿಸಬಹುದಾಗಿದೆ.

ಪ್ರಪಂಚದ ಬಹುಭಾಗವನ್ನು ಆಳ್ವಿಕೆ ನಡೆಸಿದ ಇಂಗ್ಲೀಷರು ತಮ್ಮ ಅಧಿಪತ್ಯವನ್ನು ಈ ಪ್ರದೇಶದಲ್ಲಿ ನೆಲೆನಿಂತು. ೧೭೮೮ರಲ್ಲಿ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕಾರ್ನ್‌ವಾಲೀಸ್ ಪ್ರಯತ್ನಪಟ್ಟಿದ್ದನು. ನಂತರ ೧೮೫೮ರಲ್ಲಿ ಬ್ರಿಟಿಷರ ಸೇನಾ ನಂತರ ಪೋರ್ಟ್‌ಬ್ಲೇರ್‌ನ್ನು ತನ್ನ ಅಸ್ತಿತ್ವಕ್ಕೆ ಪಡೆದನು. ಇಂದಿಗೂ ಸಹ ಅಂಡಮಾನಿನಲ್ಲಿರುವ ಅನೇಕ ಕಟ್ಟಡಗಳು ಬ್ರಿಟಿಷರು ನಿರ್ಮಾಣ ಮಾಡಿದವುಗಳೇ ಆಗಿದೆ.

ಬ್ರಿಟಿಷರಿಂದ ರಾಜಕೀಯನೆಲೆಗಳು ಆರಂಭಗೊಂಡು. ಈ ಪ್ರದೇಶದಲ್ಲಿ ಬುಡಕಟ್ಟು ಸಂಸ್ಕೃತಿ, ಆಚರಣೆಗಳು, ನಂಬಿಕೆಗಳಿಗೆ, ಹಾನಿಯಾಗುವ ಸಂದರ್ಭದಲ್ಲಿ ಇಲ್ಲಿನ ಮೂಲವಾಸಿಗಳ ನಡುವೆ ಘರ್ಷಣೆಗಳು ಸಹ ನಡೆದಿದ್ದು. ತಮ್ಮ ತನವನ್ನು ಉಳಿಸಿಕೊಳ್ಳುವಲ್ಲಿ ಅಲ್ಪಕಾಲ ಯಶಸ್ಸು ಕಂಡು ನಂತರದ ಕಾಲಘಟ್ಟದಲ್ಲಿ ಬ್ರಿಟಿಷರ ವಸಾಹತುಶಾಹಿಗೆ ತಲೆಬಾಗಲೇ ಬೇಕಯಿತು.

ಪ್ರತಿಯೊಂದು ಸ್ಥಳದ ಸ್ಥಳನಾಮದ ಬಗ್ಗೆ ಅದರ ಉಗಮದ ಬಗ್ಗೆ ಹಲವು ಬಗೆಯ ಚರ್ಚೆಗಳು ನಡೆದಿರುತ್ತವೆ. ಅಂಡಮಾನ್ ಎಂಬ ಹೆಸರು ಬರಲು ಕಾರಣವೇನು ಎಂಬುದರ ಬಗೆ ವಿದ್ವಾಂಸರಲ್ಲಿ ಸೃಷ್ಟಿ ನಿಲುವಿಗೆ ಬರುವುದಕ್ಕೆ ಸಾಧ್ಯವಾಗಿಲ್ಲ. ಆದರೂ ಅಂಡಮಾನ್ ಎಂಬುದು ಮಲಯನ್ ಭಾಷೆಯಲ್ಲಿ ಕಪಿಗೆ, ಹಂಡುಮಾನ್(ಹನುಮಾನ್) ಎಂದಿದ್ದಿದ್ದು ಕ್ರಮೇಣ. ಅಂಗಮೇನಿಯಾ, ಅಂಡಮೇನಿಯಾ ಕಾಲಾನಂತರ ಅಂಡಮಾನ್ ಎಂಬುದಾಗಿ ಆಗಿದೆ.

ಸ್ವರ್ಗ ದ್ವೀಪದ ಕನಸಿನ ಬೆನ್ನೇರಿಯು ವಿದ್ಯಾರ್ಥಿ ಪ್ರವಾಸ ಸಂದರ್ಭದಲ್ಲಿ ನಡೆದ ಘಟನೆಯ ಮೂಲಕವಾಗಿ ಲೇಖಕರು ತಮ್ಮ ಮನಸ್ಸಿನಲ್ಲಿ ಹಾಗೂ ನೋಟ ಕ್ರಮದ ವಿವಿಧ ಹಾಗೂ ವಿಭಿನ್ನ ನೋಟಕ್ರಮವನ್ನು ಕಟ್ಟಿಕೊಡುತ್ತಾರೆ. ಆದರೆ ಬಿ.ಜಿ.ಎಲ್. ಸ್ವಾಮಿಯವರ 'ಹಸಿರುಹೊನ್ನು' ಕೃತಿಗೆ ಹೋಲಿಸಿದರೆ ಅಲ್ಲಿನ ವಿವರಗಳ ಕಡೆ ಹೆಚ್ಚಿನ ಗಮನ ಕೊಡದೆ ಪ್ರಮುಖವಾದ ಅಂಶಗಳಿಗೆ ಮಾತ್ರ ಮಹತ್ವ ಕೊಡುತ್ತಾ ವೇಗವಾಗಿ ಓದುಗನನ್ನು ದುಡಿಸಿಕೊಳ್ಳುತ್ತದೆ. ಕೃತಿಯ ಅರ್ಧ ಭಾಗದಷ್ಟು ಕತೆಯು ಪ್ರವಾಸ ಪೂರ್ವಸಿದ್ಧತೆಯ ಬಗೆಗಿನ ವಿವರವಿದ್ದು ಉಳಿದ ಭಾಗದಲ್ಲಿ ಅಂಡಮಾನಿನ ವಿವರವನ್ನು ಕಟ್ಟಿಕೊಡುವ ಪ್ರಯತ್ನವನ್ನು ಲೇಖಕಿ ಕಟ್ಟಿಕೊಡುತ್ತಾರೆ. ವಿದ್ಯಾರ್ಥಿಗಳ ಕಾತರತೆಯು ಸ್ಥಳ ನೋಡುವುದರ ಬಗೆಗೋ ಅಥವಾ ವಿಚಾರ ಗ್ರಹಿಸುವುದರ ಬಗ್ಗೆ ಇರಬಹುದಾ? ಬಹುಶಃ ತಿಳಿಯದು.

ಬಂಕ್ ಕ್ಲಾಸಿನಲ್ಲಿ ಪಯಣ ಬೆಳೆಸಿದರು. ಈಡೀ ಬಂದರಿನಲ್ಲಿ ನಡೆದ ಗಣೇಶನ ಉಪಚಾರ ಔಪಚಾರಿಕವಾಗಿದ್ದರು ಉಪಯುಕ್ತವಾಗಿತ್ತು. ಈಡೀ ಬಂದರಿನ ಚಿತ್ರಣವೇ ಹೊಸತನದಿಂದ ಕೂಡಿದ ಬಗೆಯನ್ನು ಕಾಣಬಹುದಾಗಿದೆ. ತೇಜಸ್ವಿಯವರ ಕೃತಿಗೂ ಈ ಕೃತಿಯ ಪ್ರಯಾಣದ ಅಂಶವನ್ನು ಗಮನಿಸದರೆ ಅಜಗಜಾಂತರವಿದೆ. ತೇಜಸ್ವಿ ಕೆಳಗಿನ ಹಂತದಲ್ಲಿನ ಪ್ರಯಾಣಿಕರ ಯಮಯಾತನೆಯ ಪ್ರಯಾಣದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಜೊತೆಗೆ ಭಾರತದಲ್ಲಿ ಜನ ಸ್ಥಿತಿಗತಿಯ ಅಂಶಗಳ ತಿಳಿಯಪಡಿಸುತ್ತಾರೆ.

ಸಮುದ್ರಯಾನದ ಸೌಂದರ್ಯ ತನ್ನಲ್ಲಿ ಅಡಗಿಸಿಕೊಂಡಿರುವ ಸೌಂದರ್ಯದ ಜೊತೆಗೆ ರೌದ್ರತೆಯ ಸ್ವರೂಪ, ತಮ್ಮ ದೋಣಿಯ ರೌದ್ರಾವತಾರದ ಅಲೆಗಳನ್ನು ಸೀಳುಕೊಂಡುಹೋಗುವ ದೃಶ್ಯವು ಮನಮೋಹಕ ಸಮುದ್ರದ ಮೇಲ್ಮೈಯು ಸೌಮ್ಯವಾಗಿದ್ದು ತನ್ನ ಒಡಲಲ್ಲಿ ಘೋರತೆಯನ್ನು ನೋಡುಗನಿಗೆ ತೋರ್ಪಡಿಸಿಕೊಳ್ಳುವುದಿಲ್ಲ.

ಇದಿಷ್ಟೂ ಒಳಗಿನ ಸಂಗತಿಯಾದರೆ, ಹಡಗಿನಲ್ಲಿ ಡೆಕ್‌ಗೆ ಬಂದು ನೋಡಿದರೆ, ಎಂತಹ ಅಭೂತಪೂರ್ವ ಅನುಭವ! ಮಾತಿಗೆ ಮೀರಿದ ವಿಸ್ತಾರವಾದ ಕಡಲು, ಸಮುದ್ರ ಗಾಂಭೀರ್ಯವೆಂದರೇನೆಂದು ಈಗ ನನ್ನ ಮನಕ್ಕೆ ಬಂತು. ಪ್ರಶಾಂತ ಪರಿಸರ. ಡೆಕ್ಕಿನಲ್ಲಿ ಸುತ್ತಲೂ

ಕಟ್ಟಿರುವ ಅಡ್ಡ ಕಂಬಿಗಳ ಮೇಲಿಂದ ಬಾಗಿ ಕೆಳಕ್ಕೆ ನೋಡಿದರೆ ನಿಧಾನವಾಗಿ ಕಡಲ ಮೈಯನ್ನು ಸೀಳಿಕೊಂಡು ಹೋಗುವಾಗ ಏಳುವ ನೊರೆ, ಹಡಗಿನ ನಡುವಿಗೆ ಕಟ್ಟಿದ ಬಿಳಿಯ ಉಡಿದಾರದಂತೆ ಕಾಣುತ್ತಿತ್ತು. ದಂಡೆ ಬಿಟ್ಟಾಗ ಹಸಿರಾಗಿದ್ದ ಜಲರಾಶಿ, ಮುಂದೆ ಮುಂದೆ ಸಾಗಿದಂತೆ ದಟ್ಟ ನೀಲಿಯಾಯಿತು. ಇನ್ನೂ ಮುಂದೆ ಸಾಗಿದಂತೆ, ಬಾನ್ನೀಲಿ, ಕಡಲ ನೀಲಿಗಳು ಬೆರೆತು ಗಾಢವಾದ ಮಸಿ ಬಣ್ಣಕ್ಕೆ, ಅಂದರೆ ದಟ್ಟ ಕಪ್ಪು ಬಣ್ಣಕ್ಕೆ ತಿರುಗಿತ್ತು. ಬಂಗಾಳ ಕೊಲ್ಲಿಯ ನೀರು ಕಪ್ಪ ನೀರು– ಬಹುಶಃ ಅದಕ್ಕೆ ಏನೋ, ಬ್ರಿಟಿಷರು, ನಮ್ಮ ಸ್ವಾತಂತ್ರ್ಯ ಯೋಧರನ್ನು, ಬೇರೆ ಬಗೆಯ ಅಪರಾಧಿಗಳನ್ನು ದೇಶ ದ್ರೋಹಿಗಳೆಂದು ಬಗೆದು, ಕಪ್ಪು ನೀರಿನ ಶಿಕ್ಷೆಗೆಂದು ಇಲ್ಲಿಗೆ ಕಳಿಸುತ್ತಿದ್ದುದು! 'ಕಾಲಾಪಾನಿ' ಶಿಕ್ಷೆ ಎಂದರೆ ಇದೇ ಇರಬೇಕು! ಅನಿಸಿತು.*

ಪೋರ್ಟ್‌ಬ್ಲೇರ್‌ನ ಬಂದರಿನ ಹೆಸರು "ಚಾಥಮ್" ಹಡಗಿನಿಂದ ಇಳಿದ ನಂತರ ಲೇಖಕರಿಗೆ ಅಂಡಮಾನಿನ ಸುಂದರ ಆಗರವೇ ಸಿಕ್ಕ ಹಾಗಾಯಿತು.

ಮತ್ತೊಮ್ಮೆ ನನ್ನ ದೃಷ್ಟಿ ಹಾಯಿಸಿ ಸುತ್ತಲೂ ನೋಡಿದೆ. ಓಹ್! ಸ್ವರ್ಗವೆಂದರೆ ಇದೇ ಇರಬಹುದೇ! ನಿಸ್ತಬ್ಧ ಮೌನದ ನಡು ನಡುವೆ ಲಯಬದ್ಧವಾಗಿ ಕೇಳಿ ಬರುತ್ತಿದ್ದ ಅಲೆಗಳ ನಿರ್ಘೋಷ! ಶಿಸ್ತಿನ ಸಿಪಾಹಿಗಳಂತೆ ಕಾವಯಿತಿಗೆಂದು ನಿಂತ ಎತ್ತರದ ತೆಂಗು, ಕೌಂಗು, ಈಚಲ ಮರಗಳು! ಕಡಲು ಮುಗಿಲುಗಳ ಅಲೌಕಿಕ ಆಲಿಂಗನದಂತೆ ಕಾಣುವ ಕ್ಷಿತಿಜ!– ಇವಳು ದ್ವೀಪ ಸುಂದರಿಯೇ ಸರಿ. ಭಾವ ಸಮಾಧಿಗೆ ಇಳಿಯುತ್ತಿದ್ದಂತೆ, ಅಂಡಮಾನದ ಅಪ್ಸರೆ, ಮೈ ಕಳೆದು ನಿಂತಳು. ಅವಳ ರೂಪವಿಲಾಸ, ವೈಭವಗಳು ಮಾತಿಗೆ ಮೀರಿದ್ದೆನಿಸಿತು. 'ಅಲೆ ನಿರಿಗಳ ಸೀರೆಯುಟ್ಟು! ಹಸಿರ ಕುಸುರಿ ಮುಸುಕು ಹೊದ್ದು, ಚಿಕ್ಕಿ ಮಲ್ಲೆಂದಡೆ ಮುಡಿದು! ತುಟಿಗೆ ಅರುಣರಾಗ ಬಳಿದು! ಹಣೆಗೆ ಚಂದ್ರ ಬೊಟ್ಟನಿಟ್ಟು, ಮುಗಿಲ ಕುರುಳು ತೀಡಿಕೊಂಡು! ಕಣ್ಣ ಬೆಳಕು ಚೆಲ್ಲಿಕೊಂಡು ತೆಂಗು ಚವರಿ ಸೇವೆಯಲ್ಲಿ, ಮರದ ಪಚ್ಚೆನೆರಳಿನಲ್ಲಿ, ಗಿರಿ ಬನಗಳ ಬೀದಿಯಲ್ಲಿ! ಬೀಗಿ ನಡೆವ ಬೆಡಗಿ ಹುಡುಗಿ' ಅನ್ನುವುದರಲ್ಲಿ ಸಂಶಯವೇ ಇರಲಿಲ್ಲ.

ಎಂತಹವರನ್ನೂ ಭಾವ ಪರವಶತೆಯ ಮೋಡಿಗೆ ಸೆಳೆದೊಯ್ಯುವ ಈ ದ್ವೀಪ ಸೌಂದರ್ಯ, ಮೊದಲೇ ಭಾವುಕ ಮನಸ್ಸಿನವಳಾದ ನನ್ನ ಕನಸಿಗಿಳಿಸಿ ಕರಗಿಸಿ ಬಿಟ್ಟಿತು. ನನ್ನ ಗೆಳತಿಗೆ ನನ್ನನ್ನು ಆಗಾಗಾ ಇಂತಹ ಭಾವ ಸಮಾಧಿಯೊಳಗಿಂದ ಎಬ್ಬಿಸಿಕೊಂಡು ಬರುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ಆದರೂ ಅದನ್ನು ಸಹಿಸದೆ ಅವಳಿಗೆ ಬೇರೆ ದಾರಿಯೇ ಇರಲಿಲ್ಲ . ಮಾಮೂಲಿನಂತೆ, ನನ್ನ ಬೆನ್ನ ಮೇಲೆ ಎರಡು ಸಲ ತಟ್ಟಿ ಎಚ್ಚರಿಸಬೇಕಾಯಿತು. ಇಲ್ಲೆ ಕುಳಿತು ಕವಿತೆ ಬರೆಯೋಕೆ ಶುರು ಮಾಡಬೇಡ ತಾಯಿ! ಎದ್ದು ನಿನ್ನ ಸಾಮಾನುಗಳನ್ನು ಪರೀಕ್ಷಿಸಿ, ಹೊರಡು, ಈಗಾಗಲೇ ಹಡಗಿನ ಬಾಗಿಲಲ್ಲಿ ಪ್ರಯಾಣಿಕರ ಸಾಮಾನುಗಳನ್ನು ತಪಾಸಣೆ

ಅಡಿಟಿಪ್ಪಣಿ:* ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ; ವಿಜಯಾ ಸುಬ್ಬರಾಜ್. ಪುಟ. ೨೯

ಮಾಡುವ ಕಾರ್ಯ ಆರಂಭವಾಗಿತ್ತು. ನಮ್ಮದೆಲ್ಲರ ಸಾಮಾನುಗಳನ್ನು ಒಟ್ಟಿಗೆ ಲೆಕ್ಕಾಚಾರ ಹಾಕಿ ಹೊರಗೆ ಹೊರೆಸಿಕೊಂಡು ಬಂದೆವು. ಯಾರೂ ನಮ್ಮನ್ನು ನಿರ್ಬಂಧಿಸಲಿಲ್ಲ.

ಮನಸ್ಸಿಲ್ಲದ ಮನಸ್ಸಿನಿಂದ ಭಾರವಾದ ಹೆಜ್ಜೆಗಳನ್ನಿಡುತ್ತಾ ಬಂದರಿನಿಂದ ಹೊರಗೆ ಬಂದೆವು. ಹಡಗಿನಲ್ಲಿದ್ದಷ್ಟು ಹೊತ್ತು ಬೇಸಿಗೆಯ ಬಿಸಿಲಿನ ಅನುಭವವಾಗಿತ್ತು. ಸುಡು ಸುಡು ಬಿಸಿಲೇ ಇನ್ನು ನಮ್ಮ ಪ್ರವಾಸದುದ್ದಕ್ಕೂ ನಮ್ಮ ಪಾಲಿಗೆ ಇರುವುದೆಂದು ಭಾವಿಸಿದ್ದೆವು. ಅಲ್ಲಿನ ಹವಾಗುಣದ ಬಗ್ಗೆ ನಮಗೆ ಅಷ್ಟೇನೂ ಸ್ಪಷ್ಟವಾದ ಕಲ್ಪನೆಯಿರಲಿಲ್ಲ. ಆದರೆ ಅಂಡಮಾನದ ಬಗ್ಗೆ ನಮ್ಮ ಬಳಿ ಸಾಕಷ್ಟು ರೆಫರನ್ಸ್ ಮೆಟೀರಿಯಲ್ ಇತ್ತು. ಹುಡುಗರನ್ನು ಅಂಡಮಾನ್ ಸಂದರ್ಶನಕ್ಕೆ ಕರೆದೊಯ್ಯುವ ಮೊದಲು ಅವರಿಗೆ ಅದರ ಬಗ್ಗೆ ಭೌಗೋಳಿಕ, ಐತಿಹಾಸಿಕ ವಿವರಗಳನ್ನು ನೀಡುವುದು ಅಗತ್ಯವೆಂದು ಭಾವಿಸಿದ್ದರಿಂದ ನಮ್ಮಲ್ಲಿ ವಿಷಯ ಸಂಗ್ರಹಣೆ ಇತ್ತು.

ವಿದ್ಯಾರ್ಥಿಗಳ ಹುಮ್ಮಸ್ಸು, ಉತ್ಸಾಹವು ಮಳೆಯಲ್ಲಿ ನೆನೆಯುವ ಸಂದರ್ಭದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಯು ಸಹ ಪ್ರಕೃತಿಯ ಸೌಮ್ಯತನವನ್ನು ಇಷ್ಟಪಡುವಂತೆ ಅದರ ರೌದ್ರತೆಯನ್ನು ಇಷ್ಟಪಡುವುದಿಲ್ಲ. ಈ ಸಂದರ್ಭದಲ್ಲಿ ತೇಜಸ್ವಿಯವರ ಮಾಯಾಲೋಕದ ಒಂದು ಸಾಲನ್ನು ನೆನೆಯಲೇ ಬೇಕು. ಮನುಷ್ಯ ಹೆಚ್ಚು ನಾಗರೀಕನಾಗಿ ಬೆಳೆಯುತ್ತಾ ತಾನೇ ಎಲ್ಲರಿಗಿಂತ ಉತ್ತಮ ನನ್ನನ್ನು ಬಿಟ್ಟರೆ ಉಳಿದವರು ಯಾರೂ ಇಲ್ಲಿ ಹಾಗೂ ತನ್ನನ್ನು ನಿಯಂತ್ರಿಸುವವರು ಯಾರೂ ಇಲ್ಲ. ಎಂದು ತಿಳಿಯುವುದು ಅವನ ಮೂರ್ಖತನ ಪ್ರಕೃತಿಯು ಒಮ್ಮೆ ಮುನಿಸಿಕೊಂಡರೆ ಪ್ರಕೃತಿಯ ಮುಂದೆ ಮಾನವರ ಜಾದುಗಾರಿಕೆ ಏನೂ ಸಹ ನಡೆಯುವುದಿಲ್ಲ. ಇತ್ತೀಚೆಗೆ ನಡೆದ ಹಲವು ಘಟನೆಗಳನ್ನು ನೆನಪಿಸಿಕೊಳ್ಳಬಹುದಾಗಿದೆ ಸುನಾಮಿ, ಭೂಕಂಪ, ಜ್ವಾಲಾಮುಖಿ ಚಂಡಮಾರುತಗಳಿಂದ ಆದ ಅನಾಹುತಗಳನ್ನು ನೆನಪಿಸಿಕೊಳ್ಳಬಹುದಾಗಿದೆ.

ಬೆಂಗಳೂರು ಮತ್ತು ಅಂಡಮಾನಿನ ಜೀವನ ಸೌಕರ್ಯಗಳ ಬೆಲೆಯಲ್ಲಿನ ಅಂತರತೆಯನ್ನು ಲೇಖಕಿಯು ನೆನೆಸಿಕೊಳ್ಳುತ್ತಾ. ಜನಜೀವನ ರಸ್ತೆಗಳಲ್ಲಿನ ಜನರ ಕಣ್ಣುಗಳಲ್ಲಿ, ಮನಸ್ಸುಗಳಲ್ಲಿ ವಿವಿಧ ಭಾವಗಳನ್ನು ಹೊಳೆಸಿ ಬಸ್‌ಸ್ಟ್ಯಾಂಡ್ ತಲುಪಿದೆವು. ಬಸ್‌ನ ವ್ಯವಸ್ಥೆ ಚೆನ್ನಾಗಿದೆ. ಇಲ್ಲಿ ಖಾಸಗಿ ವಾಹನಗಳು ಬಹಳ ಕಡಿಮೆ. ಕಾರಿನ ಜನರೂ ಅಪರೂಪ. ಒಂದು ಸರಕಾರಿ ಅಧಿಕಾರಿಗಳು (ಕೇಂದ್ರದ) ಟ್ರಾನ್ಸ್‌ಫರ್ ಆಗಿ ಬಂದಿರುವವರು, ಎರಡನೆಯದಾಗಿ ನೆಲೆಸಿರುವವರು. ಮೂಲ ಅಂಡಮಾನಿಗಳಂತೂ ಕಾಣುವುದೇ ಇಲ್ಲ. ತುಂಬಾ ಶ್ರೀಮಂತರೆನ್ನುವವರು ಬಹಳ ಕಡಿಮೆ. ಅಂಡಮಾನದ ಒಳಗೇ ಓಡಾಡಲು ಬಸ್ ಅಥವಾ ಟ್ಯಾಕ್ಸಿಗಳಿವೆ. ಟ್ಯಾಕ್ಸಿ ಬೆಂಗಳೂರಿಗೆ ಹೋಲಿಸಿದರೆ ಬಹಳ ಅಗ್ಗ. ೨೫ ರೂಗಳನ್ನು ಕೊಟ್ಟರೇ ಅಂಡಮಾನಿನ ಪ್ರೇಕ್ಷಣಿಯ ಸ್ಥಳಗಳನ್ನು ಸುತ್ತಿಕೊಂಡು ಬರಬಹುದು. ಇಲ್ಲಿನ ರಸ್ತೆಗಳೋ ಭಗವಂತನೇ ಕಾಪಾಡಬೇಕು!

"ವಂದೂರ್ ಬೀಚ್ ಅಂಡಮಾನದ ಪ್ರಮುಖವಾದ ಬೀಚುಗಳಲ್ಲಿ ಒಂದು. ದಕ್ಷಿಣ ಅಂಡಮಾನದಿಂದ ೩೦.ಕಿ.ಮೀ. ಪಶ್ಚಿಮಕ್ಕಿದೆ. ಈಜುವವರಿಗೆ, ಡೈವ್ ಮಾಡುವವರಿಗೆ ಬಹಳ ಪ್ರಸಕ್ತವಾದ ಜಾಗ. ಸ್ವಲ್ಪ ಒಳಕ್ಕೆ ಪಾರದರ್ಶಕ ನೀರಿನ ಪದರಗಳ ದಂಡೆಯಾದರೆ ರಸ್ತೆ ಕಡೆಗಿನ ದಂಡೆ ಕೆಸರು. ಅದರೊಳಗಿಂದ ನೋಡಿದರೆ ದಂಡೆಯಲ್ಲಿ ಬಂಡೆಕಲ್ಲುಗಳ ನಡುವೆ ಮತ್ತು ಜೆಲ್ಲಿಯಂತ ಹಾಸಿನ ನಡುವೆ ವಿವಿಧ ಬಗೆಯ ಜಲಪ್ರಾಣಿಗಳು. ಹವಳ ಜೀವಿಗಳು ತಮ್ಮೆಲ್ಲರೂಪ, ಬಣ್ಣ ವಿನ್ಯಾಸಗಳಿಂದ, ಮನಸೂರೆಗೊಳ್ಳುವಂತಿತ್ತು. ಸಮುದ್ರ ಸಂಪತ್ತಿಗೆ ಆಗರವಾದ ಪ್ರದೇಶ ಇದು. ಆದ್ದರಿಂದಲೇ ಇದು ರಕ್ಷಿತ ಪ್ರದೇಶವಾಗಿ ಘೋಷಿತವಾಗಿ, ಖಾಸತಿ ವ್ಯಕ್ತಿಗಳು ಯಾರೂ ಅಲ್ಲಿನ ಸಂಪತ್ತನ್ನು ಮುಟ್ಟುವುದಾಗಲೀ, ಸಂಗ್ರಹಿಸುವುದಾಗಲೀ ನಿಷೇಧಿಸಲಾಗಿದೆ. ಕೇವಲ ಸರಕಾರದ ವಸ್ತುಸಂಗ್ರಹಾಲಯಕ್ಕಾಗಿ, ಪರವಾನಗಿ ಪಡೆದ ನುರಿತ ಡೈವರ್ಸ್ (ಮುಳುಕರು) ಇದ್ದಾರೆ. ಅವರು ಮಾತ್ರವೇ ಅಲ್ಲಿನ ಪ್ರದೇಶದಲ್ಲಿ ಡೈವ್ ಮಾಡಲು ಸಾಧ್ಯವಾಗಿದೆ. ಕಡಲಸೌತೆ, ನಕ್ಷತ್ರ ಮೀನು ಹಲವು ಬಗೆಯ ಚಿಪ್ಪಿನ ಮತ್ತು ಶಂಕಿನ ಪ್ರಾಣಿಗಳು, ಹಲವು ಬಗೆಯ ಹವಳ ಜೀವಿಗಳು–ಇಲ್ಲಿನ ಅದ್ಭುತ ನಿಸರ್ಗ ಸಂಪತ್ತಾಗಿದೆ."*

ಅಂಡಮಾನಿನ ಮನಮೋಹಕ ಬೀಚುಗಳು ಒಂದನ್ನೊಂದು ಮೀರಿಸುವ ರೀತಿಯಲ್ಲಿದ್ದು ಆಕರ್ಷಣೆಯವಾಗಿವೆ. **'ಚಿಡಿಯಾ ಟಾಪು'** ಬೀಚು ಕಲ್ಲಿನಿಂದ ಆವೃತ್ತವಾಗಿರುವ ನೆಲೆಯಾಗಿದ್ದು ಸುಂದರ ಹಾಗೂ ಮನಸ್ಸನ್ನು ಹಾಗೂ ಮನುಷ್ಯನ ಚಿತ್ತವನ್ನು ತನ್ನ ಕಡೆ ಸೆಳೆದುಕೊಳ್ಳುವಷ್ಟು ಶಕ್ತಿ ಈ ನೀರಿಗಿದೆ.

"ಪೂರ್ವ ನಿಶ್ಚಯದಂತೆ 'ಚಿಡಿಯಾ ಟಾಪು' ನಮ್ಮ ಅಂದಿನ ಗುರಿಯಾಗಿತ್ತು. ಹೆಜ್ಜೆ ಹಾಕಿ ನಡೆದೆವು. ಬಸ್ಸಿಗಾಗಿ ಕಾದು ಕಾಲಹರಣ ಮಾಡುವುದು ಬೇಡವಾಗಿತ್ತು. ಟ್ರಕ್ಕಿಂಗ್ ಮೂಡ್‌ನಲ್ಲಿದ್ದ ಹುಡುಗರು ತಮ್ಮ ಗುರಿಯ ಕಡೆಗೆ ಹೆಜ್ಜೆ ಹಾಕಿದರು. ಅಂಡಮಾನಿನಲ್ಲಿ ದಾರಿ ತಪ್ಪಿಸಿಕೊಳ್ಳುವ ಸಾಧ್ಯತೆಗಳೇ ಇಲ್ಲ. ಎಲ್ಲಿಗೆ ಹೋದರೂ ಕಣ್ಣಳತೆಗೇ ಸಿಗುತ್ತಾರೆನ್ನುವಷ್ಟು ಹತ್ತಿರ ಹತ್ತಿರ ಜಾಗಗಳು. ಸುಮಾರು ಒಂದು ಅಥವ ಒಂದೂವರೆ ಗಂಟೆ ನಡೆದ ಮೇಲೆ 'ಚಿಡಿಯಾ ಟಾಪು' ಬೀಚನ್ನು ತಲುಪಿದೆವು ನಾವು ಅಲ್ಲಿಗೆ ಮುಟ್ಟಿದಾಗ ಇನ್ನೂ ಉಬ್ಬರವಿತ್ತು. ಅದು ಮರಳಿನ ಬೀಚಲ್ಲ; ಕಲ್ಲಿನ ಬೀಚು; ಆದ್ದರಿಂದ ಗಾಜಿನಂತೆ ಲಕಲಕಿಸುವ ನೀರಿನ ಪದರಗಳು. ಮಂಡಿಯವರೆಗೆ ಇದ್ದ ತಣ್ಣನೆಯ, ಪಾರದರ್ಶಕವಾದ ನೀರಿನಲ್ಲಿ ಸಾಕಷ್ಟು ದೂರ ನಡೆದೆವು ವಂದೂರಿನ ಬೀಚಿಗಿಂತ ಸುಂದರವಾಗಿತ್ತು. ಈ ಬೀಚು. ದಕ್ಷಿಣ ಅಂಡಮಾನದ ದಕ್ಷಿಣದ ತುದಿಗಿದ್ದ ಇದರ ಸೌಂದರ್ಯ, ದಂಡೆಗಳ ವಕ್ರ ವಿನ್ಯಾಸ, ಸುತ್ತಲೂ ಎತ್ತೆತ್ತಲೂ ಹರಡಿ ಬಿದ್ದುಕೊಂಡಿದ್ದ 'ಡ್ರಿಫ್ಟ್‌ವುಡ್'ನ ಮಳೆ, ಪ್ರವಾಹಗಳ ಹೊಡೆತಕ್ಕೆ ಸಿಕ್ಕಿ ಬಿದ್ದು ತೇಲಿಕೊಂಡು ಬಂದ ಮರಳು! ಸಹಜ, ಸ್ವಾಭಾವಿಕವಾಗಿ ಅರಳಿನಿಂತ ವಿವಿಧ ಕಲಾ ವಿನ್ಯಾಸಗಳು, ಅಗೋಚರ ಕಲಾವಿದನ

ಅಡಿಟಿಪ್ಪಣಿ: * ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ; ವಿಜಯಾ ಸುಬ್ಬರಾಜ್. ಪುಟ.೩೯

ಅದ್ಭುತ ಕಲಾ ಕೃತಿಗಳಂತೆ ಕಾಣಿಸುತ್ತಿದ್ದವು. ಈ ಕಲಾ ಸೌಂದರ್ಯ ಸಮುದ್ರ ದಂಡೆಯ ಸೌಂದರ್ಯವನ್ನು ಇಮ್ಮಡಿಸಿತ್ತು; ನೂರ್ಮಡಿಸಿತ್ತು. ದಂಡೆಯುದ್ದಕ್ಕೂ ದಟ್ಟಣಿಸಿದ ಮಳೆ ಪ್ರದೇಶದ ಕಾಡಿನ ಭಾಗಗಳು, ಅಲ್ಲಲ್ಲಿ ನೀರಿನ ನಡುವೆ ತೇಲುವ ಪುಟ್ಟ ಪುಟ್ಟ ಹಸಿರು ದ್ವೀಪಗಳಂತೆ ಗೋಚರಿಸುತ್ತಿದ್ದವು. ನಡುನಡುವೆ ವಿವಿಧ ಆಕಾರಗಳಲ್ಲಿ ಎದ್ದು ನಿಂತ ಬಂಡೆಗಲ್ಲುಗಳು ಮಂಜು ಮುಸುಕನ್ನು ಉಟ್ಟು ನೋಡುವವರ ಕಣ್ಮನಗಳಿಗೆ ಅಲೌಕಿಕ ಆನಂದಾನುಭೂತಿಯನ್ನು ಉಂಟು ಮಾಡುತ್ತಿದ್ದವು. ಈ ಅಪಾರ ವೈವಿಧ್ಯಮಯ ಸೌಂದರ್ಯ ರಾಶಿಯನ್ನು ನಮ್ಮ ಅನುಭೂತಿಗೆ ನೀಡುತ್ತಿರುವ ಅಗೋಚರ ಶಕ್ತಿಯ ಸ್ವರೂಪವೇನು? ಎಂದು ಯೋಚಿಸಿತು, ಮನಸ್ಸು. ಒಟ್ಟಾರೆಯಾಗಿ ಆ ದಂಡೆಯ ಪರಿಸರವು ಅನುಪಮ ಚಿತ್ರಕಲಾ ಶಾಲೆಯಂತೆ ತೋರುತ್ತಿತ್ತು.**

ಅಲೆಗಳ ಹಾಗೂ ಮಳೆಯ ಹೊಡೆತಕ್ಕೆ ಸಿಕ್ಕ ಮರಗಳು ನೀರಿನಲ್ಲಿ ತೇಲುತ್ತಾ, ನಡುಗಡ್ಡೆಯಲ್ಲಿ ಕೆಲವು ಕಡೆ ಹಸಿರಿನ ಗುಂಚದೋಪಾದಿಯಲ್ಲಿ ಗೋಚರಿಸುತ್ತಾ ಕಣ್ಣಿಗೆ ಆಹ್ಲಾದಕತೆಯನ್ನು ಉಂಟುಮಾಡುತ್ತಿದೆ. ಈ ಸಂದರ್ಭದಲ್ಲಿ ಲೇಖಕ ನೇಚರ್ ಈಸ್ ಚಾಂಟಿಪುಲ್ ದಿ ಪೊಯಿಟ್ರಿ ಆಫ್ ಅರ್ತ್ ಈಸ್ ನೆವರ್ ಡೆಡ್, ಎಕಿಂಗ್ ಆಫ್ ಬ್ಯೂಟಿ ಈಸ್ ಜಾಯ್‌ಫಾರ್ ಎವರ್' ಎನ್ನುವ ಸಾಲುಗಳನ್ನು ಮೆಲುಕು ಹಾಕುತ್ತಾ ತಮ್ಮ ಆನಂದವನ್ನು ಹೊರಹಾಕುತ್ತಿದ್ದರು. ಪ್ರವಾಸೋದ್ಯಮವನ್ನು ಆದಾಯದ ಮೂಲವನ್ನಾಗಿ ಬಲಪಡಿಸಿಕೊಂಡಿರುವ ಕೆಲವು ಜನ ವ್ಯವಹಾರಸ್ಥರು. ತಮ್ಮ ಸ್ವಾರ್ಥಕ್ಕಾಗಿ ಇಡೀ ಪ್ರದೇಶವನ್ನು ಶ್ರೀಮಂತರ ಮೋಜು ಮಸ್ತಿಗೆ ಎಡೆ ಮಾಡಿಕೊಡುತ್ತಾ ಅಧಿಕಾರಶಾಹಿಗಳಾಗಿದ್ದಾರೆ. ಒಂದು ಪ್ರದೇಶದ ಅಭಿವೃದ್ಧಿ ಹಾಗೂ ಆ ಪ್ರದೇಶ ಪ್ರಪಂಚದ ಎಲ್ಲಾ ಪ್ರವಾಸಿಸುವಂತೆ ಮಾಡುವುದು ಪ್ರವಾಸೋದ್ಯಮದ ಕರ್ತವ್ಯ ಆದರೆ ಅದು ವ್ಯತಿರಿಕ್ತವಾಗಿದೆ. ಅಂಡಮಾನಿನ ಜನರ ಭಾಷೆ, ಸಂಸ್ಕೃತಿ, ಆಚಾರ, ವಿಚಾರಗಳು ಭಾರತದ ರೀತಿಯಲ್ಲಿಯೇ ಇದ್ದು. ಹೊರಗಿನ ವ್ಯಕ್ತಿಗಳನ್ನು ಆಪ್ತತೆಯಿಂದ ನೋಡುವ ಗುಣ ಅವರಲ್ಲಿದ್ದು ಪರಕೀಯ ಭಾವನೆಯು ನಮ್ಮನ್ನು ಕಾಡುವುದಿಲ್ಲ.

ಒಂದು ಶೈಕ್ಷಣಿಕ ಮಹತ್ವದ ವಿವರಗಳು : ಭೂಗೋಳಿಕ ವ್ಯಾಪ್ತಿ; ಅಲ್ಲಿನ ಜನಸಂಖ್ಯೆ; ಅಲ್ಲಿನ ಆಹಾರ ಪದಾರ್ಥಗಳು; ಹೊರದೇಶದ ಜನಸಂಖ್ಯೆ; ಅಲ್ಲಿರುವ ಜನಗಳ ನೀತಿ ನಡವಳಿಕೆಗಳು ಇವುಗಳನ್ನೇ ಕುರಿತಂಥ ವಿವರಗಳು. ಸಾಮಾಜಿಕ ವಿವರಗಳು: ಅಲ್ಲಿನ ಜನರ ಉಡುಪು, ಅವರು ಧರಿಸಿಕೊಳ್ಳುವ ರೀತಿ, ನೀತಿ ಮತ್ತು ಅಷ್ಟೇ ಅಲ್ಲ ಯಾರಾದರೂ ಬಂದಾಗ ನಡೆದುಕೊಳ್ಳುವಂಥ ವಿಧಾನಗಳು; ಜನರ ಸೌಮನಸ್ಯವಾದ ಸ್ವಭಾವ; ಯಾರಾದರೂ ಬಂದಾಗ ನಿಂತ್ಕೊಂಡು ಅವರನ್ನು ಸ್ವಾಗತಿಸುವ ಕ್ರಮ; ಅವರ ಶುಚಿ ಶುದ್ಧತೆಯ ವಿವರಗಳು ಪುಸ್ತಕ ಬಹುಭಾಗದ ಅಂಶಗಳಾಗಿ ಕುತೂಹಲಕರವಾದರೂ ಸತ್ಯ ಸಂಗತಿಯಾಗಿ ಕಾಣಿಸುತ್ತವೆ.

---

ಅಡಿಟಿಪ್ಪಣಿ: **ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ; ವಿಜಯಾ ಸುಬ್ಬರಾಜ್. ಪುಟ.೪೭

ಈಗ ನಾವು ನಮ್ಮ ದೇಶದಲ್ಲಿ ನಾವು ಬದುಕುತ್ತಿರುವ ರೀತಿಗೂ, ಆ ದೇಶದಲ್ಲಿ ಅವರು ಬದುಕುತ್ತಿರುವ ರೀತಿಗೂ, ಅಲ್ಲಿಯ ಯಾಂತ್ರಿಕ ಪ್ರಗತಿಗಳ ರಿವಾಜು; ನಮ್ಮಲ್ಲಿ ನಮ್ಮ ಮೌಲ್ಯಗಳ ಬದಲಾವಣೆ, ಅಲ್ಲಿನ ಮೌಲ್ಯಗಳು. ಇವುಗಳು ವ್ಯತ್ಯಾಸವಾಗುವ ರೀತಿ, ಮೌಲ್ಯಗಳ ಭಾಷೆಯನ್ನು ವರದಿಯ ಮಟ್ಟದಿಂದ ಸಾಹಿತ್ಯದ ಮಟ್ಟಕ್ಕೆ ಎಳೆದೊಯ್ಯುವ ಒಂದು ಪ್ರಯತ್ನ ಇಲ್ಲಿ ಕಾಣುತ್ತದೆ. ಶುದ್ಧ ಸಾಹಿತ್ಯಕ ಬರವಣಿಗೆ ಇಲ್ಲಿಲ್ಲ. ಆದರೆ, ಭಾಷೆ ವರದಿ ಆಗಬಹುದಾದ ಸಂಗತಿಯಿಂದ ತಪ್ಪಿಸುತ್ತಾರೆ. ಭಾಷೆ ಇಲ್ಲ ವರದಿ ಮೇಲ್ಮಟ್ಟಕ್ಕೆ ಕರೆದೊಯ್ಯುತ್ತದೆ ಇದರಿಂದಾಗಿ, ಬರಿ ಒಂದು ದೇಶದ ವಿವರಗಳನ್ನು, ಆ ದೇಶದಲ್ಲಿರುವ ಸಂಗತಿಗಳಷ್ಟೇ ತಿಳಿದುಕೊಳ್ಳಬೇಕು ಅನ್ನುವವರಿಗೂ ಅಷ್ಟೇ ಪ್ರಿಯವಾಗುತ್ತದೆ. ಒಂದು ಸಾಹಿತ್ಯಕ ಪ್ರವಾಸ ಕಥನದ ಪ್ರಮುಖ ಉದ್ದೇಶದಿಂದಲೂ ಕೂಡ ಇದೆ ಆ ಮಟ್ಟದ ಬರವಣಿಗೆಯ ಹತ್ತಿರಕ್ಕೆ ಹೋಗುತ್ತದೆ.

ಸಂಘ, ತಮ್ಮ ಪ್ರಕೃತಿ ಜೀವನಕ್ಕೆ ಸಂಬಂಧಪಟ್ಟ ಹಾಗೆ ಯೋಗದ ವಿವರಗಳ ಬಗ್ಗೆ ಬೇಕಾದಷ್ಟು ವಿವರಗಳನ್ನು ಅವರು ತಂದುಕೊಡುತ್ತಾರೆ. ಅವುಗಳನ್ನು ತಂದುಕೊಡುವಾಗಲೇ ತಮ್ಮ ಅನುಭವಗಳನ್ನು ಕೂಡಿ ಶೋಧನೆ ಮಾಡಿಕೊಳ್ಳುತ್ತಾರೆ. ತಾವು ಬದುಕಿರುವ ರೀತಿ ನೀತಿಗಳನ್ನು ಕುರಿತು ಚರ್ಚೆ ಮಾಡುತ್ತಾರೆ. ಅಲ್ಲಿ ಜನಗಳು ಹೇಗೆ ಬದುಕಿದ್ದಾರೆ? ಅಲ್ಲಿ ಜನಗಳು ಹೇಗೆ ಬದುಕಬಹುದಾಗಿತ್ತು? ಬದುಕುವ ರೀತಿಗಳಲ್ಲಿ ಇರುವ ಅಂಶಗಳಾವುದು ಇವುಗಳನ್ನು ಅವರು ಒಂದು ಅನುಭವದ ಶೋಧನೆಯಾಗಿ ಕೂಡ ತೆಗೆದುಕೊಳ್ಳುತ್ತಾರೆ. ಪ್ರಕೃತಿಯ ಸೊಬಗು ಅದ್ಭುತವಾಗಿ ನರ್ತನ ಮಾಡುತ್ತಿದೆ. ವಿಶಾಲವಾಗಿ ಅರ್ಧಚಂದ್ರಾಕೃತಿಯಲ್ಲಿ ಧುಮುಕುತ್ತಿರುವ ಈ ನೀರ ರಾಶಿಯ ಮೇಲೆ ಸೂರ್ಯ ಕಿರಣ ಬಿದ್ದು ಪ್ರಕೃತಿ ರಾಣಿಗೆ ವಜ್ರ, ಪಚ್ಚೆ ಮಟ್ಟದ ತೋಳುಬಂದಿ ಇದೆಯೇನೋ ಅನ್ನುವಂತಿದೆ."

# ಅಧ್ಯಾಯ - ೦೭

## ಪ್ರವಾಸ ಕಥನಗಳ ಶೀರ್ಷಿಕೆಗಳ ಕುರಿತಾದ ಚರ್ಚೆ

ಅಂಡಮಾನ್ ಎನ್ನುವ ಕೇಂದ್ರವಸ್ತುವು ೪ ಜನ ಲೇಖಕರ ಪ್ರಕ್ರಿಯೆಯೊಳಗೆ ಮೂಡಿ ಅಕ್ಷರರೂಪದಲ್ಲಿ ಅನಾವರಣಗೊಂಡಿರುವ ಬಗೆ ಅತ್ಯಂತ ರೋಚಕವಾದುದು. ಪ್ರತಿಯೊಬ್ಬರಿಗೂ ಕೂಡ ಕನಸುಗಳಿರುತ್ತವೆ. ಕನಸು ಕಾಣುವುದು ಪ್ರತಿಯೊಬ್ಬ ಮನುಷ್ಯನ ಸಹಜ ಗುಣ. ಅಂತಹ ಕನಸು ಈಡೇರಿಸಿಕೊಳ್ಳಲು ಪ್ರತಿಯೊಬ್ಬ ಮಾನವನೂ ಕೂಡ ಹಪಹಪಿಸುವುದು ಸಹಜಗುಣ.

ಯಾವುದೇ ಒಬ್ಬ ವ್ಯಕ್ತಿಗೆ ಒಂದು ಪ್ರದೇಶ ಅಥವಾ ಸ್ಥಳದ ಮೇಲೆ ವ್ಯಾಪಕವಾದ ಮೋಹ ಉಂಟಾದರೆ ಹೇಗೆ ಅದು ಸದಾ ಆತನನ್ನು ಕಾಡುತ್ತಾ ಸೆಳೆಯುತ್ತಿರುತ್ತದೆ ಎಂಬುದಕ್ಕೆ ಉದಾಹರಣೆಯಾಗಿ ಆದಿಕವಿ ಪಂಪನ ಈ ಪದ್ಯವನ್ನು ನೋಡಬಹುದು.

**ತೆಂಕಣಗಾಳಿ ಸೋಂಕಿದೊಡಂ, ಒಳ್ನುಡಿಗೇಳ್ದೊಡಂ, ಇಂಪನಾಳ್ದಗೇ**

**ಯಂ ಕಿವಿವೊಕ್ಕಡಂ, ಬಿರಿದ ಮಲ್ಲಿಗೆಗಂಡೊಡಂ, ಆದ ಕೆಂದಲಂ**

**ಪಂಗೆಡೆಗೊಂಡೊಡೆಂ, ಮಧುಮಹೋತ್ಸವಮಾದೊಡಂ, ಏನೆನೆಂಬೆನ್, ಆರ್**

**ಅಂಕುಶಮಿಟ್ಟೊಡಂ ನೆನೆವುದೆನ್ನಮನಮಂ ಬನವಾಸಿದೇಶಮಮಂ'.**

ಕನ್ನಡದ ಆದಿಕವಿ ಪಂಪ ತನಗೆ ಆಶ್ರಯ ನೀಡಿದ ದೊರೆ ಅರಿಕೇಸರಿಯ ಜೊತೆಗೆ ಅನೇಕ ಕಡೆಗೆ ದಂಡಯಾತ್ರೆಗೆ ಹೋಗುತ್ತಿದ್ದ. ಅದು ಅಲ್ಲಲ್ಲಿ ಯುದ್ಧಯಾತ್ರೆ, ತೀರ್ಥಯಾತ್ರೆಯೂ ಆಗಿರುತ್ತಿತ್ತು. ಹೀಗೆಲ್ಲ ಸುತ್ತಾಡಿದಾಗ ಆದ ಕೆಲವು ಅನುಭವಗಳನ್ನು ಕಾವ್ಯಗಳಲ್ಲಿ ದಾಖಲಿಸಿದ್ದಾನೆ. ಪಂಪ ಭಾರತದಲ್ಲಿ ಬಂದಿರುವ ಬನವಾಸಿಯ ವರ್ಣನೆ ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಮೊತ್ತಮೊದಲು ದಾಖಲೆ ಎನಿಸುತ್ತದೆ. ಪಂಪ ಬನವಾಸಿಯವನಲ್ಲ, ಅವನು ಉತ್ತರ ಕರ್ನಾಟಕದಲ್ಲಿ ಹುಟ್ಟಿದವನು. ಆಂಧ್ರಪ್ರದೇಶದಲ್ಲಿ ಇದ್ದವನು. ಆದರೆ ಅವನು ಯಾವಾಗಲೋ ಪದ್ಯಗಳನ್ನು ಬರೆದಿದ್ದಾನೆ. ಆಗ ವ್ಯಕ್ತಿ ನಿಷ್ಠವಾದಂಥ ಭಾವಗೀತ ಪ್ರಕಾರ ಇರಲಿಲ್ಲ ತನ್ನ ಅನುಭವಗಳೇನಿದ್ದರೂ ಅವನ್ನು ವಸ್ತುನಿಷ್ಠವಾದ ಮಹಾಕಾವ್ಯದಲ್ಲಿ ಮಾತ್ರ ಪ್ರಕಟ ಮಾಡುವುದು ಅವನಿಗೆ ಸಾಧ್ಯವಾಗಿತ್ತು ಆದ್ದರಿಂದ ಆ ಪದ್ಯಗಳನ್ನು ತನ್ನ ಭಾರತದಲ್ಲಿ ಸೇರಿಸಿದ್ದಾನೆ ಎನ್ನುತ್ತಾರೆ ಸಿ.ಪಿ.ಕೆ. ಪಂಪನಿಗೆ ಹೇಗೆ ಬನವಾಸಿ ಕಾಡುವ ಸ್ಥಳವಾಗಿತ್ತೋ ಅದೇ ರೀತಿ ನಾಲ್ಕು ಜನ ಲೇಖಕರಿಗೆ ಅಂಡಮಾನ್ ನಿರಂತರವಾಗಿ ಕಾಡುವ ಸ್ಥಳವಾಗಿತ್ತು ಎಂದರೆ ಅಂಡಮಾನ್ ಇವರನ್ನು ಕಾಡಿದ ರೀತಿ ಅದ್ಭುತ ಮತ್ತು ಅವರ್ಣನೀಯ.

ಮೊದಲಿಗೆ ಕೆ.ಟಿ. ಗಟ್ಟಿಯವರ ಅಂಡಮಾನ್ ಬಗ್ಗೆ ಅದನ್ನು ಕಂಡಿರುವ ಬಗ್ಗೆ ಹೇಗೆ ಮೋಹವುಂಟಾಯಿತ್ತೆಂಬುದನ್ನು ಗಮನಿಸುವುದಾದರೆ ಚಿಕ್ಕಂದಿನಲ್ಲಿ ಕ್ಷೌರದಂಗಡಿಯಲ್ಲಿ ಕುಳಿತಾಗ ಅಲ್ಲಿದ್ದ ಗೋಡೆಗಳ ಮೇಲೆ ತೆರೆದುಕೊಳ್ಳುತ್ತಿದ್ದ ಕಲಾಲೋಕದ ಚಿತ್ರಣ ಅವರನ್ನು ಬಹಳವಾಗಿ ಕಾಡುತ್ತಿತ್ತು. "ನೀರಿನ ಅಂಕುಡೊಂಕಾದ ಖಾರಿಗಳ ಇಕ್ಕೆಲಗಳಲ್ಲಿ ಗುಂಡುಗುಂಡಗೆ ಎತ್ತರೆತ್ತರಕ್ಕೆ ಬೆಳೆದ ಜೀವ ಚಿಮ್ಮುವ ಸಸ್ಯರಾಶಿ, ಓರೆಕೋರೆಯಾದ, ಸ್ವಚ್ಛ ಕಾಲುಹಾದಿಯ ಪುಟ್ಟಸೇತುವೆ ತುಂಬಾ ಒತ್ತಡದಿಂದ ಮುನ್ನುಗ್ಗುತ್ತಿರುವ ಪ್ರವಾಹ. ಎಲ್ಲೂ ಒಂದಿಂಚ್ಚು ನೆಲವೂ ಕಾಣದ ಬೆಳೆದ ಗಿಡ, ಮರ, ಬಳ್ಳಿ, ಪೊದೆ ಎಂದೇನೂ ಹೇಳಲಾಗದಂತಹ ಅದ್ಭುತ ಸಸ್ಯ ಸೃಷ್ಟಿ. ಅಂತಹ ಪ್ರವಾಹ ಅಂತಹ ಖಾರಿಗಳು, ಅಂತಹ ಸಸ್ಯರಾಶಿಯನ್ನು ನಾನು ಎಲ್ಲಿಯೂ ಕಂಡಿರಲಿಲ್ಲವಾದ್ದರಿಂದ ಅವು ನಿಜವಾದ ನಿಸರ್ಗದ ದೃಶ್ಯಗಳಲ್ಲ. ಅವು ಕಲಾವಿದನೊಬ್ಬನ ಕಲ್ಪನೆಯ ದೃಶ್ಯಗಳೆಂದು ನನಗನಿಸುತ್ತಿತ್ತು. ಕ್ಷೌರದಂಗಡಿಯಲ್ಲಿ ನಾನು ಕಂಡ ಅದ್ಭುತ ಪ್ರಕೃತಿ ಸೌಂದರ್ಯದ ದೃಶ್ಯ ಚಿತ್ರಗಳನ್ನು ಸುಮಾರು ೨೦-೨೫ ವರ್ಷಗಳ ಕಾಲವಾದರೂ ಕಂಡಿರಬಹುದು. ಈಗಲೂ ಸಹ ಅಂತಹ ಚಿತ್ರಗಳಿರುವುದನ್ನು ಕಾಣಬಹುದು. ಈಗಲೂ ಸಹ ಕ್ಷೌರ ಅಂಗಡಿಯ ಕುರ್ಚಿಯಲ್ಲಿ ಕುಳಿತಾಗ ಕಣ್ಣುಗಳು ಅಂತಹ ಚಿತ್ರಗಳನ್ನು ಹುಡುಕುತ್ತವೆ. ಎಲ್ಲೂ ಕಾಣಿಸದಿದ್ದಾಗ ನಿರಾಸೆಯಾಗುತ್ತದೆ".*೧ ಈ ಮೇಲಿನ ಮಾತುಗಳ ಮೂಲಕ ಗಟ್ಟಿಯವರಿಗೆ ಬಾಲ್ಯದಲ್ಲೇ ನಿಸರ್ಗದ ಬಗ್ಗೆ ಅಪಾರವಾದ ಆಸಕ್ತಿ ಇತ್ತು ಎಂಬುದು ತಿಳಿದುಬರುತ್ತದೆ. ಅವರು ತಮ್ಮ ಆಸಕ್ತಿಯನ್ನು ಅನಾವರಣಗೊಳಿಸಿಕೊಂಡಿದ್ದು ಅಂಡಮಾನಿನಲ್ಲಿ. ಆ ಪ್ರಕೃತಿ ಸೌಂದರ್ಯವನ್ನು ಕಂಡಾಗ ಮಾತ್ರ ಚಿಕ್ಕಂದಿನಲ್ಲಿ ಕಂಡಿದ್ದ ಕಲಾವಿದನ ಕಲ್ಪನೆಯ ಚಿತ್ರಗಳು ಅಂಡಮಾನಿನಲ್ಲಿ ನಿಜರೂಪದಲ್ಲಿ ಕಂಡುಬರುತ್ತದೆ. ಅವರು ಅಂಡಮಾನಿನ ಪ್ರಕೃತಿಯನ್ನು ಈ ರೀತಿ ವರ್ಣಿಸಿದ್ದಾರೆ. "ಅಂಡಮಾನಿನ ಪ್ರಕೃತಿ ಸೌಂದರ್ಯವು ಅಷ್ಟೇ ಅನನ್ಯ. ಕಪ್ಪು ನೀರು, ಆಕಾಶ, ಹಸಿರು ದ್ವೀಪ ಶ್ರೇಣಿ ಇವುಗಳೊಂದಿಗೆ ಬೆಚ್ಚನೆಯ ಬೆಳದಿಂಗಳಂತಹ ಬಿಸಿಲು ಆಕಾಶವೇ ಹರಿದು ಬೀಳುತ್ತಿದೆ ಎಂಬಂತಹ ಮಳೆ. ಇಷ್ಟೆಲ್ಲಾ ಮೇಳೈಸುವ ತಾಣ ಜಗತ್ತಿನಲ್ಲಿ ಮತ್ತೊಂದಿಲ್ಲ"*೨ ಎಂದು ಅಂಡಮಾನಿನ ಬಗ್ಗೆ ಗಟ್ಟಿಯವರು ಹೇಳುವುದು ಉತ್ಪ್ರೇಕ್ಷೆಯ ಮಾತಲ್ಲ. ಅವರು ಪ್ರಕೃತಿಯ ಬಗ್ಗೆ ಚರ್ಚಿಸಲು ತಮ್ಮ ಕೃತಿಯಲ್ಲಿ 'ಪ್ರಕೃತಿಯ ಮಾಯಾಲೋಕ' ಎನ್ನುವಂತಹ ಅಧ್ಯಯನವನ್ನೇ ರಚಿಸಿದ್ದಾರೆ".

ಕೆ.ಟಿ. ಗಟ್ಟಿಯವರು ಕೂಡ ಮ್ಯಾಂಗ್ರೋವ್ ಕಾಡುಗಳ ಬಗ್ಗೆ ಹವಳದ ಉದ್ಯಾನಗಳ ಬಗ್ಗೆ ಸಾಕಷ್ಟು ದೀರ್ಘವಾದ ಚರ್ಚೆ ನಡೆಸಿದ್ದಾರೆ. ಇವರ ಕೃತಿಯಲ್ಲಿ ಪ್ರಕೃತಿಯ ಅಂಶಗಳು ಪ್ರಾಸಂಗಿಕವಾಗಿ ಚರ್ಚಿತವಾಗಿವೆಯೇ ಹೊರತು ಮುಖ್ಯವಾಹಿನಿಯಲ್ಲಿ ಪ್ರಕಟವಾಗಿಲ್ಲವೆಂದೇ ಹೇಳಬಹುದು. ಆದರೆ ರಹಮತ್‌ರವರು ಪ್ರಕೃತಿಯ ಬಗ್ಗೆ ವಿಶೇಷವಾದ ಒಲವನ್ನು ಹೊಂದಿದ್ದು,

ಮ್ಯಾಂಗ್ರೋವ್ ಕಾಡು ಎನ್ನುವಂತಹ ಘಟಕದಲ್ಲಿ ಆ ಮ್ಯಾಂಗ್ರೋವ್ ಕಾಡುಗಳು ಹುಟ್ಟಿ ಬೆಳೆಯುವ ಬಗ್ಗೆ ಅವುಗಳ ಸೌಂದರ್ಯ, ನೀರು ಮತ್ತು ಕಾಡಿನ ಅಂತರ್ಸಂಬಂಧ ಇವುಗಳ ಬಗ್ಗೆ ಗಾಢವಾದ ಚರ್ಚೆಯನ್ನು ನಡೆಸುತ್ತಾರೆ.

'ಅಂಡಮಾನ್ ಎಂಬುದನ್ನು ಮರೆತರೆ ಎಲ್ಲೋ ಸಕಲೇಶಪುರದಲ್ಲೋ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯಾ ಸಂಪಾಜೆಯಲ್ಲೋ ಪ್ರಯಾಣಿಸುತ್ತಿರುವಂತೆ ಭಾಸವಾಗುತ್ತದೆ. ಕೆಲವು ಬಾರಿ ದಕ್ಷಿಣ ಕನ್ನಡದ ಕರಾವಳಿ ರಸ್ತೆಯಲ್ಲಿ ಸಂಚರಿಸುತ್ತಿರುವ ಅನುಭವ.' ಎಲ್ಲೂ ಕಡಲಿನ ಸುಳಿವಿಲ್ಲ. ವಿಶಾಲವಾದ ಬಯಲು, ಹೊಲಗದ್ದೆಗಳು ಎಲ್ಲೋ ಅಲ್ಲೊಂದೆಡೆ ಮನೆಗಳು, ಗುಡಿಸಲುಗಳ ಗುಂಪು, ಒಂದು ಚಿಕ್ಕ ಊರು. ದನ-ಕರುಗಳ ಹಿಂಡು ಕೋಳಿಗಳು, ಆಡುಗಳು, ಹಂದಿಗಳು.

ಅಪರಾಹ್ನದ ಹೊತ್ತು ಉತ್ತರ ಅಂಡಮಾನಿನ ಕಾಲೀಘಾಟಿನಿಂದ ಮಧ್ಯ ಅಂಡಮಾನಿನ ಮಾಯಾ ಬಂದರಿನವರೆಗಿನ ಎರಡೂವರೆ ಗಂಟೆಗಳ ಪ್ರಯಾಣ ಒಂದು ಅವಿಸ್ಮರಣೀಯವಾದ ಅನುಭವ. ಅಷ್ಟು ಹೊತ್ತು ನಾನು ಬೇರೆ ಯಾವ ನೆನಪು ಇಲ್ಲದೇ ಬೇರೆ ಒಂದು ಲೋಕದಲ್ಲಿ ಇದ್ದೆ. ಅದು ಎಂತಹ ಅನುಭವ ಎಂಬುದನ್ನು ವರ್ಣಿಸಲು ಕಷ್ಟ. ನೋಡಿಯೇ ತಿಳಿಯಬೇಕು ಅನಿಸುತ್ತದೆ. ಸುಮಾರಾಗಿ ನದಿಯಂತೆಯೇ ಇರುವ ಖಾರಿ. ಕೆಲವು ಕಡೆ ೧೫-೨೦ ಕಿ.ಮೀ. ಅಗಲವಿದ್ದರೆ ಕೆಲವೆಡೆ ೧೦೦-೨೦೦ ಮೀ. ಮಾತ್ರ ಇಕ್ಕಡೆಗಳಲ್ಲಿ ನೀರಿನಿಂದಲೇ ಎದ್ದು ನಿಂತಂತೆ ತೋರುವ ಮ್ಯಾಂಗ್ರೋವ್ ಸಸ್ಯದ ಹಸಿರು ಗೋಡೆ, ಈ ಮ್ಯಾಂಗ್ರೋವ್ ಎಂಬ ಸಸ್ಯ ತನ್ನ ಆಕ್ಟೋಪಾಸ್ ಬೇರುಗಳನ್ನು ಮಣ್ಣಿನಾಳಕ್ಕೆ ಇಳಿಸಿ ತನ್ನನ್ನು ದಾಟಿ ಆಚೆ ಹೋಗದಂತೆ ಕಡಲನ್ನು ತಡೆದು ನಿಲ್ಲಿಸಿರುವ ದೃಶ್ಯ ಮೋಡಿ ಮಾಡುವಂತಹದ್ದು. ಕೆಲವೆಡೆ ಆರೇಳು ಅಡಿ ಎತ್ತರವಿರುವ ಈ ಕಾಡುಗಳು ಕೆಲವೆಡೆ ೩೦-೪೦ ಅಡಿ ಎತ್ತರವಿದೆ. ಆ ಕಡೆ ಈ ಕಡೆ ನೀರಿನಂಚಿನಿಂದ ಬಹುದೂರದವರೆಗೆ ಇದರದೇ ಕಾಡು ಅದರಾಚೆ ದಟ್ಟವಾದ ಅರಣ್ಯ. ಅದರಾಚೆ ಪರ್ವತ ಅದು ಕೂಡ ಅರಣ್ಯಮಯ. ಸಂಚಾರಕ್ಕೆ ಸಾಧ್ಯವಾಗುವುದು ಈ ನೀರ ಮೇಲಿನ ದಾರಿಯಲ್ಲಿ ಮಾತ್ರ. ಇಕ್ಕಡೆಯ ಹಸಿರು ಭೂಮಿ ಅಭೇಧ್ಯ. ನಿರಂತರವಾಗಿ ಬದಲಾಗದಿರುವ ದೃಶ್ಯ ನೀರು. ನೀಲ ನೀಲ ನೀರು ಹಸಿರು ಗೋಡೆ, ಹಸಿರು ಕಾಡು ಅಚ್ಚ ಹಸಿರು ಪರ್ವತ ಮೇಲೆ ನೀಲ ಆಕಾಶ ಬೇರೆ ಏನೊಂದು ಇಲ್ಲ. ಈ ಅಗಲವಾದ ಖಾರಿಯಿಂದ ಆ ಕಡೆ ಈ ಕಡೆ ಭೂಭಾಗದೊಳಗೆ ಹೋಗಿ ಎಲ್ಲೋ ಕೊನೆಗೊಳ್ಳುವ ಬೇರೆ ಬೇರೆ ಖಾರಿಗಳು. ವರ್ಷದ ೫-೬ ತಿಂಗಳಲ್ಲಿ ಧೋ-ಧೋ ಎಂದು ಸುರಿಯುವ ಕಾಲವರ್ಷದ ನೀರು ದ್ವೀಪದ ಮೇಲಿಂದ ನೂರಾರು ಅಗಲ ಕಿರಿದಾದ ಖಾರಿಗಳಲ್ಲಿ ಹರಿದು ದೊಡ್ಡ ಖಾರಿಗಳನ್ನು ಸೇರಿ ಸಮುದ್ರ ಸೇರುತ್ತದೆ.*೧

ಈ ರೀತಿ ಗಟ್ಟಿಯವರ ಮೇಲಿನ ವರ್ಣನೆಯನ್ನು ಕಂಡರೆ ಕನ್ನಡದ ಕಾವ್ಯಗಳಲ್ಲಿ ಬರುವ ಯಾವುದೇ ಪ್ರಕೃತಿ ವರ್ಣನೆಗಿಂತಲೂ ಕೂಡ ಕಡಿಮೆಯಿಲ್ಲ ಎಂದು ಭಾವಿಸಬಹುದು. ಈ



ಅಡಿಟಿಪ್ಪಣಿ:*೧.*೨. ನಿಸರ್ಗ ಕನ್ಯೆ ಅಂಡಮಾನ್, ಕೆ.ಟಿ.ಗಟ್ಟಿ: ಮುನ್ನುಡಿ.

ವರ್ಣನೆಗಳು ನಮ್ಮನ್ನು ಮಲೆನಾಡಿಗೆ ಕೊಂಡೊಯ್ಯುವುದರಲ್ಲಿ ಸಂದೇಹವಿಲ್ಲ. ಇಲ್ಲಿ ಗಟ್ಟಿಯವರ ಕವಿ ಮನಸ್ಸು ಅನಾವರಣಗೊಂಡಿದೆ. ಈ ನಿಟ್ಟಿನಲ್ಲಿ ನೋಡುವುದಾದರೆ ಅವರು ಅಂಡಮಾನನ್ನು **'ನಿಸರ್ಗ ಕನ್ಯೆ'** ಎಂದು ಕರೆದುದರ ಔಚಿತ್ಯ ಅರ್ಥವಾಗದೆ ಇರದು. ಪ್ರಕೃತಿಯ ಬಗ್ಗೆ ಕುವೆಂಪುರವರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಕಥೆ, ಕವನ, ಕಾದಂಬರಿ ಇವುಗಳಲ್ಲಿ ದಟ್ಟವಾದ ಪ್ರಕೃತಿ ವರ್ಣನೆ ಕಾಣಿಸುತ್ತಾ ಕನ್ನಡ ಸಾಹಿತ್ಯದಲ್ಲಿ ಪ್ರಕೃತಿಯ ಕವಿಯೆಂದೇ ಹೆಸರಾಗಿದ್ದ ಕುವೆಂಪುರವರು 'ಸೂರ್ಯೋದಯದ ಬಗ್ಗೆ ಸಾಕಷ್ಟು ಸಂಖ್ಯೆಯ ಪದ್ಯ ರಚಿಸಿರುವುದು; ಅವರು ಪ್ರಕೃತಿಯನ್ನು ಭಿನ್ನ-ಭಿನ್ನ ನೆಲೆಗಳಲ್ಲಿ ಹೇಗೆ ಗ್ರಹಿಸಿದ್ದಾರೆ' ಎಂಬುದಕ್ಕೆ ಸಾಕ್ಷಿಯಾಗಿದೆ. ಈ ಭಿನ್ನ ನೆಲೆಗಳನ್ನು ಕೆ.ಟಿ.ಗಟ್ಟಿಯವರು ತಮ್ಮ ಪ್ರವಾಸಿ ಕಥನದಲ್ಲೂ ಕೂಡ ಅನಾವರಣಗೊಳಿಸಿದ್ದಾರೆ. ಈ ಕೃತಿಯ ಶೀರ್ಷಿಕೆ ಪ್ರಾರಂಭವಾಗುವುದು ನಿಸರ್ಗದಿಂದ. ಆ ನಿಸರ್ಗವನ್ನು ಹೆಣ್ಣಿಗೆ ಹೋಲಿಸಿ ನಿರೂಪಿಸಿರುವ ಕ್ರಮ ಗಟ್ಟಿಯವರ ರಸವಂತಿಕೆಯನ್ನು ತೋರ್ಪಡಿಸುತ್ತದೆ. ಹಾಗಾಗಿ ಗಟ್ಟಿಯವರ ಈ ಕೃತಿಯು ಪ್ರಾಕೃತಿಕವಾಗಿಯೂ ಕೂಡ ನಮಗೆ ಮುಖ್ಯವೆನಿಸುತ್ತದೆ. ಹಾಗೂ ಬಾಲ್ಯದಲ್ಲಿ ಕಂಡ ಕನಸನ್ನು ನನಸಾಗಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ರಹಮತ್ ತರೀಕೆರೆಯವರ ಕೃತಿಯಾದ ಅಂಡಮಾನ ಕನಸು ಕೃತಿಯಲ್ಲಿ ಪ್ರಕೃತಿ ಅನಾವರಣಗೊಂಡ ಬಗೆಯನ್ನು ಚರ್ಚಿಸುವುದು ಕೂಡ ಈ ಅಧ್ಯಯನದ ಪ್ರಮುಖ ಭಾಗವಾಗಿದೆ. ರಹಮತ್‌ರವರು ಕೂಡ ಬಾಲ್ಯದಿಂದಲೇ ಸಮುದ್ರದ ಮೇಲೆ ಹಡಗಿನಲ್ಲಿ ಹೋಗಬೇಕು, ದ್ವೀಪನಾಡನ್ನು ಸಂದರ್ಶಿಸಬೇಕು ಎಂಬುವುದು ಅವರನ್ನು ಬಾಲ್ಯದ ದಿನಗಳಿಂದಲೂ ಕಾಡಿದ್ದ ಅಂಶವಾಗಿದ್ದು; ಅವರೇ ಹೇಳುವಂತೆ ಅಲ್ಲಿನ ಕಾಡುಗಳಲ್ಲಿ ಅಲೆದಾಡುವ ಚಪಲ. ಆಮೇಲೆ ದ್ವೀಪಗಳ ಬದುಕನ್ನು ನೋಡುವ ಕುತೂಹಲ, ಕಡಲಲ್ಲಿ ಈಜಾಡುವ ಸೆಳೆತ. ಇವೆಲ್ಲವೂ ಸೇರಿಕೊಂಡು ಅವರು ಅಂಡಮಾನಿಗೆ ಹೋಗಬೇಕು ಮತ್ತು ಅಲ್ಲಿನ ಪ್ರಕೃತಿಯ ಸೊಬಗನ್ನು ಸವಿಯಬೇಕು ಎಂಬ ಮಹತ್ವಾಕಾಂಕ್ಷೆ ಬಹಳವಾಗಿ ಕಾಡಿತ್ತೆಂದು ಅರುಹುತ್ತಾರೆ. ಅವರ ಶೀರ್ಷಿಕೆಯನ್ನು ಗಮನಿಸುವುದಾದರೆ ಅಂಡಮಾನ್ ಎನ್ನುವುದು ಬಾಲ್ಯದ ಕನಸು. ಆ ಕನಸನ್ನು ನನಸು ಮಾಡಿಕೊಂಡರೆ ವ್ಯಕ್ತವಾಗುವ ಮಹದಾನಂದ ವರ್ಣಿಸಲು ಅಸದಳ. ಅಂತಹ ಆನಂದದಿಂದಲೇ ಅವರು ಪ್ರಕೃತಿಯನ್ನು ಕಂಡಿರುವ ಬಗೆ ಅನಿರ್ವಚನೀಯ. ಅಂತಹ ಉದಾಹರಣೆಯನ್ನು ಈ ಮುಂದಿನಂತೆ ನೋಡಬಹುದಾಗಿದೆ.

"ತೆರೆದ ಕಡಲು ಮುಗಿದು ಮ್ಯಾಂಗ್ರೋವ್ ಕಾಡು ಶುರುವಾಯಿತು, ಮ್ಯಾಂಗ್ರೋವ್ ಗಿಡಗಳು ಉಪ್ಪು ನೀರಿನಲ್ಲಿ ಬೇರು ಜಾಲವನ್ನು ಹರಡಿಕೊಂಡು ಬೆಳೆಯುತ್ತವೆ. ಇವನ್ನು ನೇತ್ರಾವತಿ ನದಿ ಅರಬ್ಬಿಸಮುದ್ರ ಸೇರುವ ಜಾಗದಲ್ಲಿ ಶರಾವತಿ ನದಿ ಮೂಲಕ ಗೇರುಸೊಪ್ಪಕ್ಕೆ

ಹೋಗುವ ಹಾದಿಯಲ್ಲಿ ನೋಡಿದ್ದೆ. ಅವು ಕಳೆಗಿಡದಂತೆ ಕ್ಷುದ್ರವಾಗಿದ್ದವು. ಹೆಚ್ಚೆಂದರೆ ಗೋಡಂಬಿ ಮರದಂತೆ ಇದ್ದವು. ಆದರೆ ಅಂಡಮಾನಿನ ಮ್ಯಾಂಗ್ರೋವ್ ಗಿಡಗಳು ನೂರಾರು ವರ್ಷ ಬೆಳೆದ ಹೆಮ್ಮರಗಳಾಗಿ ಅಬೇಧ್ಯ ಕಾಡನ್ನು ಸೃಷ್ಟಿಸಿದ್ದವು. ಕಡಲ ಕೊರತದಿಂದ ಅಮೂಲ್ಯ ಭೂಮಿಯನ್ನು ರಕ್ಷಿಸಲು ಸ್ವತಃ ನಿಸರ್ಗವೇ ನಿರ್ಮಿಸಿಕೊಂಡ ಈ ಹಸಿರು ಕೋಟೆ ಬಲಿಷ್ಠವಾಗಿತ್ತು.

ಮ್ಯಾಂಗ್ರೋವ್ ಕಾಡು ಕೆಸರಿನಂತಹ ನೆಲವು ಉಪ್ಪು ನೀರು ಕೂಡುವ ಜಾಗದಲ್ಲಿ ಹುಟ್ಟಿಬೆಳೆಯುವ ಉಪಾಯವೇ ಅದ್ಭುತ. ಗಿಡವು ಹಣ್ಣಾದ ಬೀಜವನ್ನು ನೀರಿನ ಮೇಲೆ ಉದರಿಸುತ್ತದೆ. ಬೀಜ ಹಣ್ಣಿನೊಳಗಿರುವಾಗಲೇ ಸಣ್ಣಗೆ ಬೇರು ಬಿಟ್ಟು ಎಲೆಧರಿಸಿ ಗಿಡವಾಗಲು ಮೊದಲ ಸಿದ್ಧತೆ ಮುಗಿಸಿರುತ್ತದೆ. ಬಿದ್ದಬೀಜವು ತೇಲುತ್ತಾ ತನಗೆ ಬೇಕಾದ ನೆಲ ಹುಡುಕುತ್ತಾ ಪಯಣ ಹೊರಡುತ್ತದೆ. ಅಲೆಗಳ ಹಿಡಿತವಿರುವ ಹೊತ್ತು ನೋಡಿಕೊಂಡು ಸರಸರ ಮರಗಳಲ್ಲಿ ಬೇರುಬಿಡುತ್ತವೆ. ಗಿಡ ಬೆಳೆಯುತ್ತಾ ನೆಲದೊಳಗಿಂದ ಮೇಲಕ್ಕೆ ತನ್ನ ಬೇರುಗಳನ್ನು ಕಳುಹಿಸಿ ಗಾಳಿಪಡೆಯುತ್ತದೆ. ಮೇಲಕ್ಕೆ ಬಂದ ಬೇರುಗಳು ತೆಂಗಿನಕಾಯಿ ಸುರಿಯುವ ನೆಟ್ಟ ಸಸಿಗಳಂತೆ ಸುತ್ತಲು ನಿಮಿರಿ ನಿಲ್ಲುತ್ತವೆ. ಮೊಟ್ಟೆ ಇಟ್ಟು ಮರಿಮಾಡಲು ಎಷ್ಟೋ ಜಾತಿಯ ಮೀನುಗಳು ಮ್ಯಾಂಗ್ರೋವ್ ಬೇರುಗಳಿಗೆ ತಮ್ಮ ತವರು ಮನೆಗೆ ಬಂದಂತೆ ಬರುತ್ತವೆ. ನೆಲ ತನ್ನ ದಡಕಾಯಲು, ಕಡಲು ತನ್ನ ಎಲ್ಲೆ ಮೀರದಿರಲು, ಮೊಸಳೆ ಮೀನುಗಳು ತನ್ನ ಸಂತಾನ ಬೆಳೆಸಿಕೊಳ್ಳಲು, ನೀರ ಹಕ್ಕಿಗಳು ತಮ್ಮ ಗೂಡುಕಟ್ಟಿಕೊಂಡು ಬದುಕಲು ಮ್ಯಾಂಗ್ರೋವ್ ಕಾಡು ಆಶ್ರಯ. ನಿಸರ್ಗ ಕೊಟ್ಟ ಪಾತ್ರವನ್ನು ಮ್ಯಾಂಗ್ರೋವ್ ಕಾಡುಗಳು ಬಹು ಜತನದಿಂದ ಮೌನವಾಗಿ ನಿರ್ವಹಿಸುತ್ತಿವೆ. ಭಾರತದ ಕರಾವಳಿ ಉದ್ದಕ್ಕೂ ಮ್ಯಾಂಗ್ರೋವ್ ಕಾಡುಗಳಿವೆ. ಆದರೆ ಬಂಗಾಳದ ಸುಂದರಬನ್ ಕಾಡುಗಳು ಹಾಗೂ ಅಂಡಮಾನಿನ ಖಾರಿಗಳಲ್ಲಿರುವ ಕಾಡುಗಳು ಜಗತ್ತಿನಲ್ಲೇ ಪ್ರಸಿದ್ಧ. ಇದನ್ನು ರಕ್ಷಿತ ಕಾಡುಗಳನ್ನಾಗಿ ಮಾಡಲಾಗಿದೆ."

"ಚೀನಾಗೋಡೆಗಳಂತೆ ನಿರ್ಮಾಣವಾಗಿರುವ ಮ್ಯಾಂಗ್ರೋವ್ ಕಾಡುಗಳು ನಿಸರ್ಗದ ಅಪೂರ್ವವಾದ ಸಮ್ಮೇಳನವಾಗಿದೆ." ತನ್ನ ನೀರ್ಗನ್ನಡಿಯಲ್ಲಿ ಮ್ಯಾಂಗ್ರೋವ್ ಕಾಡು ಪ್ರತಿಬಿಂಬಿಸುತ್ತಾ, ತಾನು ಹಸಿರುಗಪ್ಪಾಗಿರುವ ಕಡಲ ನೀರು ಉದ್ದಕ್ಕೆ ಹಾಸಿದ ರೇಷ್ಮೆ ಪತ್ತಲದಂತಿರುವ ನೀರಿಗೆ ಅಂಚುಕಟ್ಟಿದಂತಹ ಮ್ಯಾಂಗ್ರೋವ್ ಮರಗಳು. ದ್ವೀಪಗಳ ಮೇಲೆ ಬಹುಶಃ ಮನುಷ್ಯ ಹೊಕ್ಕಿರದ ಕಾಡು. ತಲೆ ಎತ್ತಿನೋಡಿದರೆ ಮಾತ್ರ ಕಾಣುವ ನೀಲ ಆಗಸ. ದೋಣಿ ಮೋಟಾರಿನ ಫಟ್‌ಫಟ್ ಸದ್ದು ಮ್ಯಾಂಗ್ರೋವ್ ಗೋಡೆಗೆ ಬಡಿದು ನೂರ್ಮಡಿಯಾಗುವ ಪ್ರತಿಧ್ವನಿ. ಇವುಗಳ ಹಿತವಾದ ಸೆರೆಯಲ್ಲಿರುವ ನರಮನುಷ್ಯರಾದ ನಾವು. ನನಗಂತೂ ಮ್ಯಾಂಗ್ರೋವ್ ಕಾಡನ್ನು ನೋಡಲೆಂದೇ ಮತ್ತೊಮ್ಮೆ ಅಂಡಮಾನಿಗೆ ಬರಬೇಕೆನಿಸಿತು."*೧

ಅಡಿಟಿಪ್ಪಣಿ: *೧ ಅಂಡಮಾನ್‌ನ ಕನಸು: ರಹಮತ್ ತರೀಕೆರೆ . ಪುಟ. ೩೪. ೩೫

ರಹಮತ್‌ರವರು ತಮ್ಮ ಕೃತಿಯಲ್ಲಿ ನಿರೂಪಿಸಿರುವ ಪ್ರಕೃತಿ ಚಿತ್ರಣ ರಮಣೀಯವಾದದ್ದು. ಕನ್ನಡದ ವಿಮರ್ಶಕರೊಬ್ಬರು ಪ್ರವಾಸಕ್ಕೆ ತೆರಳಿ ಅಲ್ಲಿನ ಪ್ರಕೃತಿಯನ್ನು ಆಸ್ವಾಧಿಸಿ ಓದುಗರಿಗೂ ಕೂಡ ಪ್ರಕೃತಿಯ ಮನೋಲೋಕವನ್ನು ಪರಿಚಯಿಸುವ ಕ್ರಮ ತುಂಬಾ ಮಹತ್ವವಾದದ್ದು. ಪ್ರಕೃತಿಯ ವರ್ಣನೆಯು ಶುಷ್ಕವಾಗಿ ಮೂಡಿಬರದೇ ಹಾಗೂ ವರ್ಣನೆಗಾಗಿ ವರ್ಣನೆ ಎಂಬಂತೆ ಇರದೆ ಸೊಗಸಾಗಿ ಮೂಡಿಬಂದಿದೆ. ರಹಮತ್‌ರವರ ಕವಿ ಮನಸ್ಸು ಪ್ರಕೃತಿಯನ್ನು ಪರಿಭಾವಿಸುವ ಕ್ರಮ ಹೇಗೆ ? ಎಂಬುದನ್ನು ಓದುಗರಿಗೆ ಸಚಿತ್ರವಾಗಿ ಈ ಕೃತಿ ಕಟ್ಟಿಕೊಡುತ್ತದೆ. ಈ ದಿಸೆಯಲ್ಲಿ ಈ ಕೃತಿಯು ಗೆಲ್ಲುತ್ತದೆ ಎಂಬು ಹೇಳಬಹುದಾಗಿದೆ.

ತೇಜಸ್ವಿಯವರ ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್ ಎಂಬ ಕೃತಿಯಲ್ಲಿ **'ಅಲೆಮಾರಿ'** ಎಂಬ ವಿಶೇಷಣವು ತೇಜಸ್ವಿಯವರು ತಮಗೆ ತಾವೇ ಆರೋಪಿಸಿಕೊಂಡ ಗುಣವಾಚಕವಾಗಿದೆ. ಅವರ ಸಾಹಿತ್ಯವನ್ನು ಕೂಲಂಕುಶವಾಗಿ ಅಧ್ಯಯನ ಮಾಡಿದರೆ ಈ ರೀತಿಯ ಜಂಗಮ ಪರಿಕಲ್ಪನೆಗಳು ಯಥೇಚ್ಚವಾಗಿ ಕಾಣಸಿಗುತ್ತವೆ. ಇವರ ಪ್ರವಾಸ ಕೃತಿಯು ಕೇವಲ ಪ್ರಕೃತಿ ವರ್ಣನೆಯನ್ನು ಮಾತ್ರ ಉಲ್ಲೇಖಿಸದೆ ಬಹು ಹಿಂದಿನಿಂದ ಪರಸ್ಪರ ಪೂರಕವಾಗಿರುವ 'ಮಾನವ ಮತ್ತು ಪ್ರಕೃತಿ' ಸಂಬಂಧ ಯಾವ ಬಗೆಯದು? ಎಂಬುದನ್ನು ವಿವರಿಸುತ್ತಾ ಹೋಗುತ್ತದೆ. ಇದಕ್ಕೆ ಸಾಕ್ಷಿ ಈ ಕಥಾನಕ.

"ಅದೊಂದು ವಿಚಿತ್ರವಾದ ಕಥೆ ನಾವು ಆಸೆಯನ್ನೇ ಬಿಟ್ಟಿದ್ದೆವು. ನಾನು ಬೊಂಬಾಯಿಯಲ್ಲಿ ಇದ್ದೇನೆ. ಆತ ನಮ್ಮೊಡನೆ ಇದ್ದಾಗ ಅವನಿಗೆ ಒಂದು ವಿಚಿತ್ರವಾದ ಕಾಯಿಲೆ ಶುರುವಾಯಿತು. ಶ್ವಾಸಕೋಶದಲ್ಲಿ ನೀರು ತುಂಬಿಕೊಳ್ಳಲು ಆರಂಭವಾಯಿತು. ಇದನ್ನು ಡಾಕ್ಟರುಗಳೆಲ್ಲಾ **'ಪ್ಲೂರಸಿ'** ಎಂದು ಗುರುತಿಸಿ ಅವನಿಗೆ ಔಷಧೋಪಚಾರ ಮಾಡಿದರು. ಆದರೆ ಅವುಗಳೆಂದೆಲ್ಲಾ ಅವನಿಗೆ ದಿನದಿನಕ್ಕೂ ಕಾಯಿಲೆ ಉಲ್ಬಣವಾಯಿತೇ ಹೊರತು ವಾಸಿಯಾಗಲಿಲ್ಲ. ಕೊನೆಗೆ ಡಾಕ್ಟರುಗಳು ಅವನು ಬದುಕುವುದಿಲ್ಲವೆಂದು ಹೇಳಿಬಿಟ್ಟರು. ನಮಗೆ ಅವನೊಬ್ಬನೇ ಮಗ. ಅವನನ್ನು ಉಳಿಸಲು ಏನು ಬೇಕಾದರೂ ಮಾಡಲು ತಯಾರಿದ್ದೇವೆ. ಡಾಕ್ಟರು ಹೇಳಿದ ಹಾಗೆ ಹೇಳಿ ಅವನ ಆಸೆ ತೊರೆದಾಗ ನಮಗೆ ದಿಕ್ಕೇ ತೋರಲಿಲ್ಲ.

ಅವನು ಮರಣ ಶಯ್ಯೆಯಲ್ಲಿದ್ದಾಗ ಉಸಿರಾಡಲು ತಹತಹ ಪಡುತ್ತಿದ್ದಾಗ ಯಾರೋ ಒಬ್ಬರು ನಮ್ಮ ಹಿತೈಷಿಗಳು 'ಈತನನ್ನು ಅಂಡಮಾನಿಗೆ ಕೊಂಡೊಯ್ಯಿರಿ ಅಲ್ಲಿನ ಕಾಡಿನ ಗಾಳಿ ಇವನಿಗೆ ಹಿಡಿಸಬಹುದು' ಎಂದರು. ಇನ್ನೇನು ಸಾಯಲಿದ್ದ ಆತನನ್ನು ತುಂಬಾ ಕಷ್ಟಪಟ್ಟು ಅಂಡಮಾನಿಗೆ ಸಾಗಿಸಿದೆವು. ಭಗವಂತನ ಲೀಲೆ ಏನೆಂದು ಹೇಳೋಣ ! ಅಂಡಮಾನಿಗೆ ಕರೆತಂದ ನಾಲ್ಕೇ ದಿನದಲ್ಲಿ ಆತನ ಕಾಯಿಲೆ ವಾಸಿಯಾಗತೊಡಗಿತು. ತಿಂಗಳೊಳಗಾಗಿ ಯಾವ ಔಷದವೂ ಇಲ್ಲದೆ ಆತ ಸಂಪೂರ್ಣ ಗುಣವಾದ. ಅಂಡಮಾನ್ ದ್ವೀಪಗಳು ಆತನಿಗೆ ಎಷ್ಟೊಂದು

ಒಗ್ಗಿತ್ತೆಂದರೆ ಆತ ಮರಳಿ ಭಾರತಕ್ಕೆ ಬರುವುದಿಲ್ಲವೆಂದು ಹೇಳಿ ಇಲ್ಲೇ ಉಳಿದುಬಿಟ್ಟ ಎಲ್ಲಾದರು ಇರಲಿ, ಹೇಗಾದರೂ ಜೀವನೋಪಾಯ ಮಾಡಲಿ. ಒಟ್ಟಿನಲ್ಲಿ ಕ್ಷೇಮವಾಗಿ ಆತ ಇದ್ದರೆ ಸಾಕೆಂದು ನಾವು ಸಮ್ಮತಿಸಿದ್ದೆವು. ಈಗ ಇಲ್ಲೇ ಬಾಡಿಗೆ ದೋಣಿಗಳನ್ನಿಟ್ಟುಕೊಂಡು ಮೀನುಗಾರಿಕೆ ಮಾಡುತ್ತಾ ಆತ ಜೀವನ ಮಾಡುತ್ತಿದ್ದಾನೆ.*೧

ಪ್ರಕೃತಿ ಮಾನವ ಸಂಬಂಧ ಅನಾದಿಕಾಲದಿಂದಲೂ ಕೂಡ ತಾಯಿ ಮಗನ ಸಂಬಂಧದ ಹಾಗೆ. ಮಾನವ ಪ್ರಕೃತಿಯನ್ನು 'ಮಾತೆ' ಎಂದು ಭಾವಿಸಿರುವುದು ಇದಕ್ಕೆ ಒಂದು ಉದಾಹರಣೆ. ಆಕೆ ಮಡಿಲಲ್ಲಿ ಹುಟ್ಟಿಬೆಳೆದ ಈತ ನಾಗರೀಕತೆ ಬೆಳೆದಂತೆಲ್ಲಾ ಸಂಸ್ಕಾರಗೊಳ್ಳುತ್ತಾ ಬಂದ. ಈ ಪ್ರಕೃತಿಯ ಸ್ವಭಾವವನ್ನು ವಿವರಿಸುವುದಾದರೆ ಇದು ಸೌಮ್ಯವೂ ಹೌದು, ರೌದ್ರವೂ ಹೌದು. ಈ ಪ್ರಕೃತಿಯ ಎರಡು ಮುಖಗಳನ್ನು ಕುವೆಂಪುರವರ ಪದ್ಯಗಳ ಮೂಲಕ ವ್ಯಾಖ್ಯಾನಿಸುವುದಾದರೆ

**"[ಹಸುರತ್ತಲ್ ಹಸುರಿತ್ತಲ್**

**ಹಸುರಾದುದು ಕವಿಯಾತ್ಮಮಂ"**

ಎಂದು ಪ್ರಕೃತಿಯ ರಮ್ಯ ರಮಣೀಯತೆಯನ್ನು ಪ್ರತಿಪಾದಿಸುತ್ತಾರೆ. ಅದೇ ರೀತಿ ಪ್ರಕೃತಿಯ ಮತ್ತೊಂದು ಮುಖವನ್ನು ಕುರಿತು

**"ಕದ್ದಿಂಗಳು ಕಗ್ಗತ್ತಲು**

**ಕಾರ್ಗಾಲದ ರಾತ್ರಿ**

**ಸಿಡಿಲ್ಮಿಂಚಿಗೆ ನಡುಗುತ್ತಿದೆ**

**ಪರ್ವತ ವನಧಾತ್ರಿ"**

ಎಂದು ಪ್ರಕೃತಿಯ ಸೌಮ್ಯ ರೌದ್ರ ಮುಖವನ್ನು ವರ್ಣಿಸಿದ್ದಾರೆ. ಈ ಪದ್ಯವು ಉಲ್ಲೇಖಿಸಲು ಕಾರಣವೆಂದರೆ ಪ್ರಕೃತಿ ಎರಡೂ ರೀತಿಯಲ್ಲೂ ಸಹ ಮಾನವನ ಜೊತೆ ವರ್ತಿಸುತ್ತದೆ ಎಂದು ಸಾಭೀತುಪಡಿಸಲು ತೇಜಸ್ವಿಯವರ ಈ ಕೃತಿಯಲ್ಲಿ ಉಲ್ಲೇಖಿಸಿರುವಂತೆ ಪ್ರಕೃತಿಯು ತಾಯಿಯಂತೆ ಪೊರೆದು ಆತನ ಕಾಯಿಲೆಯನ್ನು ಗುಣಪಡಿಸುತ್ತದೆ. ಅದೇ ರೀತಿಯಲ್ಲಿ ಪ್ರವಾಹ, ಸುನಾಮಿ, ಭೂಕಂಪ ಈ ರೀತಿಯಲ್ಲಿ ಮುನಿದು ಮಾನವನನ್ನು ನಾಶಪಡಿಸುತ್ತದೆ. ಹಾಗಾಗಿ ಮಾನವನ ಎಲ್ಲಾ ಪ್ರಯತ್ನಗಳೂ ಕೂಡ ಪ್ರಕೃತಿಯ ಮುಂದೆ ನಿಷ್ಫಲವಾಗುತ್ತದೆ ಎಂಬುದರ ಮೂಲಕ ಓದುಗರನ್ನು ನಿಷ್ಕರ್ಷೆಗೆ ತೊಡಗಿಸುತ್ತಾರೆ.

ಇದಕ್ಕೆ ಮತ್ತೊಂದು ಉದಾಹರಣೆ ದಾಖಲಿಸುವುದಾದರೆ ತೇಜಸ್ವಿರವರ 'ಮಾಯಾಲೋಕ' ಕಾದಂಬರಿಯಲ್ಲಿ 'ಜನಗಳು ಮುಷ್ಕರವನ್ನು ವಿದ್ಯುತ್ ಇಲಾಖೆಯ ವಿರುದ್ಧ

ಅಡಿಟಿಪ್ಪಣಿ: *೧. ಅಲೆಮಾರಿಯ ಅಂಡಮಾನ್ ಮತ್ತು ಮಹಾ ನದಿ ನೈಲ್: ತೇಜಸ್ವಿ . ಪುಟ. ೩೧,೩೨

ನಡೆಸುತ್ತಿರುತ್ತಾರೆ. ಅದು **ಥೇಟ್ ಕುರುಕ್ಷೇತ್ರದಂತೆ** ಕಂಡುಬರುತ್ತಿರುತ್ತದೆ. ಆ ಸಂದರ್ಭದಲ್ಲಿ ಮೋಡ ಕವಿದು ಮಳೆ ಸುರಿಯಲಾರಂಭಿಸಿರುತ್ತದೆ. ಆ ಕೂಡಲೇ ಅಲ್ಲಿ ನಡೆಯುತ್ತಿದ್ದ ಮುಷ್ಕರ, ರಸ್ತೆತಡೆ ಈ ಪ್ರಕ್ರಿಯೆಗಳೆಲ್ಲಾ ಕ್ಷಣಮಾತ್ರದಲ್ಲಿ ಸ್ಥಗಿತಗೊಳ್ಳುತ್ತದೆ'. ಅಂದರೆ ಪ್ರಕೃತಿಯು ಮನುಷ್ಯನ ಎಲ್ಲಾ ವರ್ತನೆಗಳನ್ನು ಸೂತ್ರಧಾರಿಯಂತೆ ನಿಂತು ನಿರ್ದೇಶಿಸಿರುತ್ತದೆ ಎಂಬುದು ಮೇಲಿನ ಮಾತುಗಳ ಮೂಲಕ ವ್ಯಕ್ತವಾಗಿದೆ.

ಸದಾ ಹೊಸ ದಿಗಂತವನ್ನು ಶೋಧಿಸುವ ಚಿಂತಕರಾಗಿರುವ ತೇಜಸ್ವಿಯವರು ತಮ್ಮ ಒಳನೋಟಗಳ ಮುಖಾಂತರ ಅಂಡಮಾನಿನ ಸಂಸ್ಕೃತಿ, ಚಾರಿತ್ರಿಕ ಇತಿಹಾಸ, ಇವುಗಳನ್ನು ಪುನರ್ ಸ್ಥಾಪಿತಗೊಳಿಸುವ ಬಗೆ ಹೇಗೆ ಎಂಬುದನ್ನು ಚರ್ಚಿಸುತ್ತಾ ಹೋಗುತ್ತಾರೆ. ತೇಜಸ್ವಿಯವರ ಪ್ರಜ್ಞೆಯೊಳಗೆ ಸ್ಥಾಪಿತಗೊಂಡ ಅಂಡಮಾನ್‌ನ ಚಿತ್ರಣ ಹಾಗೂ ಓದುಗರ ಮನೋಲೋಕದಲ್ಲಿ ಸೃಷ್ಟಿಯಗುವ "ಅಂಡಮಾನ್‌ನ ಚಿತ್ರಣ" ಯಾವ ಬಗೆಯದು? ಎಂಬುದೂ ಕೂಡ ತಾತ್ವಿಕತೆಯ ನೆಲೆಯಲ್ಲಿ ಎತ್ತಬಹುದಾದ ಬಹುಮುಖ್ಯವಾದ ಪ್ರಶ್ನೆಯಾಗಿದೆ.

ತೇಜಸ್ವಿಯವರ ಪ್ರವಾಸ ಸಾಹಿತ್ಯದಲ್ಲಿ ಭಿನ್ನ ಜೀವನ ಕ್ರಮಗಳ ತೌಲನಿಕ ಕ್ರಮವು ಎಷ್ಟರ ಮಟ್ಟಿಗೆ ಕಾರ್ಯನಿರ್ವಹಿಸಿದೆ ಎಂಬುದೂ ಕೂಡ ಬಹು ಮುಖ್ಯವಾಗುತ್ತದೆ. ಯಾವುದೋ ಒಂದು ಪ್ರವಾಸಿ ಕಥನ ರಚಿಸುವ ಲೇಖಕ ತನು ಬದುಕುತ್ತಿರುವ ಸನ್ನಿವೇಶ, ಸ್ಥಳೀಯತೆ ಇವುಗಳನ್ನು ಪ್ರವಾಸಕ್ಕೆ ಹೋದಂತಹ ಸಂದರ್ಭದಲ್ಲಿ ತುಲನೆ ಮಾಡುವ ಪ್ರಕ್ರಿಯೆಯು ಸಾಮಾನ್ಯ. ಇಂತಹ ತುಲನೆಯ ಸಂದರ್ಭದಲ್ಲಿ ಲೇಖಕನು ತನ್ನ ಸಂಸ್ಕೃತಿಗೆ ಮುಖವಾಣಿಯಾಗುವ ಅಥವಾ ಮುಖಾಮುಖಿಯಗುವ ವಿಧಾನ ಯಾವ ತರನಾದದ್ದು ಎಂಬುದು ಬಹು ಮುಖ್ಯವಾಗುತ್ತದೆ.

ಪ್ರವಾಸ ಸಂದರ್ಭಗಳಲ್ಲಿನ ವ್ಯಕ್ತಿಯು ಭೂತ ಮತ್ತು ವರ್ತಮಾನಗಳನ್ನು ತನ್ನ ಜ್ಞಾನದ ಪರಿಧಿಯೊಳಗಿಟ್ಟು ಏಕಕಾಲಕ್ಕೆ ಮುಖಾಮುಖಿ ಮಾಡುತ್ತಿರುತ್ತಾನೆ. ಇಂತಹ ಮುಖಾಮುಖಿ ಮಾಡುವ ಸಂದರ್ಭದಲ್ಲಿ ಉಂಟಾಗುವ ಭಿನ್ನ ಚರಿತ್ರೆ ಅಥವಾ ಭಿನ್ನ ಚಿಂತನಾಕ್ರಮ ಯಾವುದು ಎಂಬುದು ಬಹು ಚರ್ಚಿತವಾಗುವ ಪ್ರಶ್ನೆಯಾಗುತ್ತದೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ 'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್' ಕೃತಿಯು ಅಂಡಮಾನ್ ಅನ್ನುವಂತಹ ಪ್ರದೇಶ ಅಲೆಮಾರಿಯ ಪರಿಭಾಷೆಯಲ್ಲಿ ಮೂಡಿಬಂದಿದುದ್ದರ ಕಾರಣ ಲೇಖಕರ ಅಲೆಮಾರಿಯ ಮನೋಭಾವ ಮತ್ತು ವಿಶಿಷ್ಟ ಚಿಂತನಾ ಕ್ರಮಗಳು. ಒಂದು ಕಡೆ ನಿಂತಲ್ಲಿ ನಿಲ್ಲದೇ ಸದಾ ಸಂಚರಿಸುವ 'ಜಂಗಮನ' ಪರಿಕಲ್ಪನೆಯೊಳಗೆ ಅಂಡಮಾನ್ ದ್ವೀಪವನ್ನು ಕಂಡಿರಬಹುದು.

ರಹಮತ್ ತರೀಕೆರೆಯವರ 'ಅಂಡಮಾನ್ ಕನಸು' ಎಂಬುದು 'ಕನಸಿನ' ಪರಿಕಲ್ಪನೆಯಡಿಯಲ್ಲಿ ಮೂಡಿಬಂದಿರುವ ಕ್ರಮ ಯಾವತರನಾದದ್ದು? ಎಂಬುದನ್ನು ಅರಿಯುವುದು ಕೂಡ ಇಲ್ಲಿ ನನಗೆ ಮುಖ್ಯವೆನಿಸುತ್ತದೆ. ರಹಮತ್ ತರೀಕೆರೆಯವರು ಒಬ್ಬ ವಿಮರ್ಶಕರಾಗಿ ಅಂಡಮಾನನ್ನು ಕಾಣುವ ನೋಟ ಮತ್ತು ಓದುಗರಿಗೆ ಕಾಣಗೊಡುವ ಬಗೆ ಯಾವುದು? ಎಂಬುದು ಅಧ್ಯಯನ ಯೋಗ್ಯ ವಿಷಯವಾಗಿದೆ. ತರೀಕೆರೆಯವರ ಕೃತಿಯಾದ 'ಅಂಡಮಾನ್ ಕನಸು' ಅಂಡಮಾನಿನ ನಿಸರ್ಗ ರಮಣೀಯತೆಯನ್ನು ಕವಿ ಮನಸ್ಸಿನಿಂದ ನೋಡುತ್ತಾ ಪ್ರಕೃತಿಯ ವಿವಿಧ ಮಜಲುಗಳನ್ನು ಪರ್ಯಾವಲೋಕಿಸುತ್ತಾ ಹೊಸ ಬಗೆಯ ದೃಷ್ಟಿಕೋನವನ್ನು ಅನಾವರಣಗೊಳಿಸುತ್ತಾರೆ. ಅಲ್ಲಿನ ನೆಲ ಜಲ ಪ್ರಾಣಿ ಪಕ್ಷಿಗಳು ಅವರ ಪ್ರವಾಸ ಕಥನದಲ್ಲಿ ಹಾಸು ಹೊಕ್ಕಾಗಿವೆ. ಈ ರೀತಿಯ ನಿರ್ವಚನ ಅಂಡಮಾನ್ ಕುರಿತಂತೆ ಉಳಿದ ಪ್ರವಾಸ ಕಥನಗಳಿಗಿಂತ ಭಿನ್ನವಾದ ನೆಲೆಯನ್ನು ಒದಗಿಸುತ್ತಿದೆಯೇ? ಎಂಬ ಪ್ರಶ್ನೆ ಅತಿ ಮುಖ್ಯವಾದುದು.

ರಹಮತ್ ತರೀಕೆರೆಯವರು ಅಂಡಮಾನಿನ ಸಕಲ ಪ್ರಾದೇಶಿಕ ಸಂಗತಿಗಳನ್ನು ತಮ್ಮ ಪ್ರಗತಿಪರ ಮತ್ತು ಮಾನವೀಯ ನೆಲೆಯಲ್ಲಿ ಕಾಣಿಸಲು ಮುಂದಾಗಿದ್ದಾರೆಂಬ ದೃಷ್ಟಿಕೋನವು ಓದುಗರ ಪ್ರಜ್ಞಾವಲಯಕ್ಕೆ ಹೆಚ್ಚು ಆಪ್ತತೆಯನ್ನು ತಂದುಕೊಡುತ್ತದೆ. ಈ ಆಪ್ತತೆ ವಾಸ್ತವಿಕ ದೃಷ್ಟಿಕೋನವನ್ನು ತಿರುಚುತ್ತಿದೆಯೇ ಅಥವಾ ಮರೆಮಾಚುತ್ತಿದೆಯೇ ಎಂಬುದೂ ಕೂಡ ಇಲ್ಲಿ ಮುಖ್ಯವಾದ ಅಂಶವಾಗುತ್ತದೆ.

ಕೆ.ಟಿ.ಗಟ್ಟಿಯವರ 'ನಿಸರ್ಗ ಕನ್ಯೆ ಅಂಡಮಾನ್' ಎಂಬುದು ಸೌಂದರ್ಯಾನುಭವದ ಪರಿಕಲ್ಪನೆಯಡಿಯಲ್ಲಿ ಅಂಡಮಾನ್ ಮತ್ತು ಅಲ್ಲಿನ ನಿಸರ್ಗರಾಶಿಯನ್ನು ಹೇಗೆ ಪರಿಭಾವಿಸುತ್ತಾರೆ. ಹಾಗೂ ಅಂಡಮಾನ್‌ನನ್ನು ಅನಾವರಣಗೊಳಿಸುವ ಬಗೆ ಯಾವತರನಾದದ್ದು? ಎಂಬುದು ಈ ಅಧ್ಯಯನದಲ್ಲಿ ಅವಶ್ಯವಾಗಿ ಚರ್ಚಿಸುವ ವಿಷಯವಾಗಿದೆ. ಕೆ.ಟಿ.ಗಟ್ಟಿಯವರು ತಮ್ಮ ಕೃತಿಯ ಮುನ್ನುಡಿಯಲ್ಲಿ ತಿಳಿಸಿರುವಂತೆ 'ಅಂಡಮಾನ್ ಕೇವಲ ಒಂದು ದ್ವೀಪ ಸಮೂಹ ಮಾತ್ರವಲ್ಲ, ಅದು ಭಾರತದ ಸ್ವಾತಂತ್ರ್ಯ ಇತಿಹಾಸದ ಕರಾಳ ದಿನಗಳ ನೆನಪನ್ನು ಸದಾ ಹಸಿಯಾಗಿಸಿರುವ "ಚಾರಿತ್ರಿಕ ದಾಖಲೆ" ಎಂದು ಅಂಡಮಾನಿನ ಐತಿಹಾಸಿಕ ದೃಷ್ಟಿಕೋನವನ್ನು ವ್ಯಾಖ್ಯಾನಿಸುತ್ತಿದ್ದಾರೆ. ಇಲ್ಲಿ ಚಾರಿತ್ರಿಕವಾಗಿ ಮುಖ್ಯವಾಗುತ್ತಿರುವ ಅಂಡಮಾನ್ ಸಾಂಸ್ಕೃತಿಕವಾಗಿ ಮತ್ತು ಪ್ರಾಕೃತಿಕವಾಗಿ ಹೇಗೆ ಚಿತ್ರಿತವಾಗಿದೆ ಎಂಬುದೂ ಕೂಡ ಮುಖ್ಯವಾಗುತ್ತದೆ.

ಇನ್ನು ಬಹುಮುಖ್ಯವಾಗಿ ಒಬ್ಬ ಮಹಿಳಾ ಲೇಖಕಿಯಾಗಿ ಅಂಡಮಾನ್ ದ್ವೀಪದ ಕುರಿತು ಡಾ.ವಿಜಯಾ ಸುಬ್ಬರಾಜ್‌ರವರು ರಚಿಸಿರುವ ಪ್ರವಾಸ ಕಥನ " ಸ್ವರ್ಗ ದ್ವೀಪದ ಕನಸಿನ

ಬೆನ್ನೇರಿ" ಇದೂ ಕೂಡ ಅಂಡಮಾನ್ ಕುರಿತಂತೆ ಒಳನೋಟಗಳನ್ನು ಕೊಡಲು ಸಾಕಷ್ಟು ಶ್ರಮಿಸುವ ಕೃತಿಯಾಗಿದೆ. ಅಂಡಮಾನನ್ನು ಕೇವಲ ಪ್ರವಾಸದ ದೃಷ್ಟಿಕೋನದಿಂದ ಮಾತ್ರ ನೋಡದೆ ಭೌಗೋಳಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ನೆಲೆಯ ಚಿಂತನೆಗಳು ಕೃತಿಯಲ್ಲಿ ಹಾಸು ಹೊಕ್ಕಾಗಿರುವುದನ್ನು ಕಾಣಬಹುದಾಗಿದೆ. ಲೇಖಕಿಯವರೇ ಹೇಳಿರುವಂತೆ 'ಕೀಟ ಅಧ್ಯಯನ ವಿಭಾಗ'ದ ವಿದ್ಯಾರ್ಥಿಗಳೊಂದಿಗಿನ ಪ್ರಯಾಣದಿಂದ ಮೊದಲ್ಗೊಂಡ ಸ್ವರ್ಗ ದ್ವೀಪದ ಪ್ರವಾಸದ ಅನುಭವಗಳು ಭಿನ್ನ ನೆಲೆಯಲ್ಲಿ ತಮ್ಮ ಕೃತಿಯಲ್ಲಿ ಹೇಗೆ ಚಿತ್ರಿತವಾಗಿವೆ? ಹಾಗೂ ಅಂಡಮಾನಿನಲ್ಲಿ ಕಂಡುಕೊಂಡ ಅನುಭವ ವಿಸ್ತರಣೆಯ ಸಾಧ್ಯತೆಗಳಾವುವು? ಎಂಬುದು ಕೂಡ ಚರ್ಚಿತವಾದ ವಿಷಯವಾಗುತ್ತದೆ.

ಕನ್ನಡ ಸಾಹಿತ್ಯದ ಇತ್ತೀಚಿನ ಒಲವುಗಳು ಸ್ತ್ರೀಕೇಂದ್ರಿತವಾಗಿ ರೂಪುಗೊಳ್ಳುತ್ತಿರುವುದರಿಂದ ಈ ಪ್ರವಾಸಿ ಕಥನವನ್ನು ಅದೇ ದೃಷ್ಟಿಕೋನದಿಂದ ಅಧ್ಯಯನ ಮಾಡಿದರೆ ಫಲಿತವಾಗುವ ಮಾಹಿತಿಗಳು ಅಪಾರ. ಪುರುಷ ಕೇಂದ್ರಿತವಾದ ನೆಲೆಯಲ್ಲಿ ಮೇಲಿನ ಮೂರು ಲೇಖಕರು ಅಂಡಮಾನ್ನನ್ನು ಕಾಣುವುದಕ್ಕೂ ,ಅದೇ ಅಂಡಮಾನ್ ಸ್ತ್ರೀಕೇಂದ್ರಿತವಾದ ಪರಿಕಲ್ಪನೆಯಲ್ಲಿ ಹೇಗೆ ಕಾಣಸಿಗುತ್ತದೆ ಎಂಬುದು ಇಲ್ಲಿ ಚರ್ಚಿತವಾಗುವ ಸಂಗತಿಯಾಗುತ್ತದೆ.

ಅಂಡಮಾನ್ ಮೇಲಿನ ಪ್ರತಿಯೊಬ್ಬ ಪ್ರವಾಸಿಗರಿಗೂ ಕೂಡ ಕನಸಿನ ಸ್ವರ್ಗವಾಗಿತ್ತು. ಈ ವೈಭವಕೇಂದ್ರಿತ ಮತ್ತು ವರ್ಣನಾ ಕೇಂದ್ರಿತ ದೃಷ್ಟಿಕೋನವನ್ನು ಪ್ರಮುಖ ಮಾನದಂಡಗಳಾಗಿ ಪರಿಗಣಿಸಿ ಅಂಡಮಾನನ್ನು ಕಂಡರೆ ನಮಗೆ ದೃಗೋಚರವಾಗುವ ಅಂಡಮಾನ್ ಯಾವ ರೀತಿಯದು? ಎಂಬುದು ಕೂಡ ನನಗೆ ಬಹು ಮುಖ್ಯವೆನಿಸುತ್ತದೆ.

ಈ ನಾಲ್ಕೂ ಪ್ರವಾಸ ಕಥನಗಳಲ್ಲಿ ಮತ್ತು ಲೇಖಕರಲ್ಲಿ ಕಂಡು ಬರುವ ಅಂಡಮಾನಿಗೂ, ಮೂಲತಃ ಅಂಡಮಾನಿಗೂ ಇರುವಂತಹ ವ್ಯತ್ಯಾಸಗಳೇನು? ಹಾಗೂ ಪ್ರತಿಯೊಂದು ಪ್ರದೇಶಕ್ಕೂ ಒಂದೊಂದು ಚಾರಿತ್ರಿಕ ಹಿನ್ನಲೆಯಿದ್ದು, ಆ ಚರಿತ್ರೆಯನ್ನು ಮತ್ತು ಆ ಪ್ರದೇಶವನ್ನು ಅಧ್ಯೆಸುವ ವಿಧಾನಗಳು ಯಾವುವು? ಎಂಬುದು ಬಹು ಮುಖ್ಯ ಪ್ರಶ್ನೆಯಾಗಿ ಕಾಡುತ್ತದೆ.

ವಿಜಯಾ ಸುಬ್ಬರಾಜ್‌ರವರ ಶೀರ್ಷಿಕೆಯಾದ "ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ" ಮೂಲಕ ಅಂಡಮಾನಿನ ಪ್ರಾಕೃತಿಕ ಸೊಬಗನ್ನು ವರ್ಣರಂಜಿತವಾಗಿ ಹಾಗೂ ವರ್ಣನಾತ್ಮವಾಗಿ ಓದುಗರಿಗೆ ತಲುಪಿಸುವ ಪ್ರಯತ್ನ ಮಾಡಿದ್ದಾರೆ ಎಂಬುದು ಗಮನಾರ್ಹ. ಪ್ರವಾಸ ಕಥನ ಎಂಬುದು ವರ್ಣನೆ, ವೈಭವೀಕರಣಕ್ಕೆ ಹೆಚ್ಚಿನ ಒತ್ತು ಕೊಡದೆ ಅದು ಪಡೆದು ಕೊಳ್ಳಬೇಕಾದ ಭಿನ್ನ ಆಯಾಮಗಳು ಯಾವುವು? ಅದರ ಫಲಿತಗಳು ಇನ್ನೂ ಬಹು ದೂರ ಸಾಗಬಹುದಲ್ಲವೇ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಈ ನಾಲ್ಕೂ ಕೃತಿಗಳು ಪ್ರವಾಸಿ ಕಥನ ಸಾಹಿತ್ಯದಲ್ಲಿ ಮುಖ್ಯವಾದವು. ಅವುಗಳ ನಿರೂಪಣಾ ಶೈಲಿಯೂ ಕೂಡ ಗಮನೀಯವಾದುದ್ದು. ಇಲ್ಲಿನ

“ನಿರೂಪಣಾ ಶೈಲಿ, ಭಾಷೆ ಮತ್ತು ಕಟ್ಟಿಕೊಡುವ ಅಂಡಮಾನಿನ ವಿವರಗಳು” ಈ ಅಂಶಗಳನ್ನೂ ಸಹ ಅಧ್ಯಯನ ವ್ಯಾಪ್ತಿಯೊಳಕ್ಕೆ ತರಲಾಗುವುದು.

ಲೇಖಕನೊಬ್ಬ ಅಪರಿಚಿತ ಸ್ಥಳಕ್ಕೆ ಪ್ರವಾಸಕ್ಕೆ ಹೋದಾಗ ಆತನ ಮನೋಭಾವವು ಯಾವ ರೀತಿ ಆ ಸ್ಥಳವನ್ನು ಕಾಣುವಂತೆ ಪ್ರೇರೇಪಿಸುತ್ತದೆ. ಅದರ ಹಿಂದಿನ ಮನೋವೈಚಾರಿಕ ದೃಷ್ಟಿಕೋನಗಳಾವುವು? ಎಂಬಂಶಗಳು ಮುಖ್ಯವಾಗುತ್ತವೆ. ಮತ್ತು ಪ್ರವಾಸದ ಸಂದರ್ಭದಲ್ಲಿ ತಮ್ಮ ಪರಿವಾರದೊಂದಿಗೆ ಆ ಸ್ಥಳವನ್ನು ವೀಕ್ಷಿಸುವುದಾದರೆ ಹಾಗೂ ಏಕಾಂಗಿಯಾಗಿ ವೀಕ್ಷಿಸುವುದಾದರೆ ಇರುವ ವ್ಯತ್ಯಾಸಗಳು ಕೂಡ ಮುಖ್ಯವಾಗುತ್ತವೆ.

ಪ್ರವಾಸಿ ಕಥನಗಳಲ್ಲಿ ಕೆಲವು ಇತಿಹಾಸವನ್ನು ಕೆದಕುವ ದೃಷ್ಟಿಕೋನದಿಂದ ಮಾತ್ರ ರಚನೆಯಾದರೆ

ಮತ್ತೆ ಕೆಲವು ಕೃತಿಗಳು ಇತಿಹಾಸದ ಹಿನ್ನಲೆಯಲ್ಲಿ ವರ್ತಮಾನವನ್ನು ಅರ್ಥೈಸಿಕೊಳ್ಳುವ ಪ್ರಯತ್ನಕ್ಕೆ ಮುಂದಾಗಿವೆ. ಇನ್ನೂ ಕೆಲವು ಪ್ರವಾಸಿ ಕಥನಗಳನ್ನು ಅವಲೋಕಿಸುವುದಾದರೆ ಪ್ರವಾಸಿ ಸ್ಥಳದ ಹೊಗಳಿಕೆಯಲ್ಲೇ ಕೆಲವು ಕೃತಿಗಳು ಪರ್ಯಾವಸಾನಗೊಳ್ಳುತ್ತವೆ. ಆದರೆ ಆ ಕೃತಿಗಳು ಅಲ್ಲಿರುವ ಪ್ರಾದೇಶಿಕ ಒಳನೋಟಗಳನ್ನು ಕಟ್ಟಿಕೊಡುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ ಎಂಬಂಶವೂ ಕೂಡ ಬಹು ಮುಖ್ಯವಾದದ್ದು.

ಮೊದಮೊದಲು ಪ್ರವಾಸವೆಂದರೆ ಕೇವಲ ಯುರೋಪ್ ರಾಷ್ಟ್ರಗಳಿಗೆ ಮಾತ್ರ ಭೇಟಿ ಕೊಡುವುದೆಂದು ಅರ್ಥೈಸಿಕೊಳ್ಳಲಾಗುತ್ತಿತ್ತು. ಆದರೆ ಅಂಡಮಾನ್ ಕೂಡ ಪ್ರವಾಸಕ್ಕೆ ಯೋಗ್ಯ ಸ್ಥಳ ಎಂಬುದು ಕನ್ನಡ ಸಾಹಿತ್ಯದ ಮಟ್ಟಿಗೆ “ಪ್ರತಿ ಸಂಸ್ಕೃತಿಯ” ಚಿಂತನೆಗಳನ್ನು ಸಾಭೀತು ಪಡಿಸಲು ಸಾಧ್ಯವಾಗುತ್ತಿದೆ.

# ಅಧ್ಯಾಯ – ೦೮

## ಪ್ರವಾಸ ಕಥನಗಳ ತೌಲನಿಕ ನೋಟ

ಪ್ರವಾಸಕಥನ ಎಷ್ಟೇ ಆದರೂ ಪ್ರವಾಸ ಮಾಡಿದವರಿಗಾಗುವ ಅನುಭವ ಒಂದು ಛಾಯೇ ಮಾತ್ರ. ಅದರಿಂದಾಗುವ ಅನುಭವ ಇದು ಅಂತ ಹೇಳಿದರೆ; ನಾವು ಯಾಕೆ ಹೋಗಿ ನೋಡಿ ಬರಬಾರದು. ಅನುಭವವನ್ನು ಪಡೆಯಬಾರದು ಅಂತ ಆಸಕ್ತಿ ಉಂಟಾಗುತ್ತದೆ. ಒಂದು ಪ್ರವಾಸ ಕಥನದಲ್ಲಿ ಬಹಳ ಮುಖ್ಯವಾದದ್ದು ತೌಲನಿಕ ವಿವೇಚನರ. ಇದು ಇಲ್ಲದ ಪ್ರವಾಸಕಥನ ಏನೂ ಪ್ರಯೋಜನಕ್ಕೆ ಬರುವುದಿಲ್ಲ. ನಾವು ಬೇರೆ ದೇಶಗಳಲ್ಲಿ ನೋಡಿದಾಗ; ಈ ಒಂದು ದೇಶದವರು ನಾವು ಪರದೇಶಕ್ಕೆ ಹೋದಾಗ ನಮ್ಮ, ಅವರ ಜೀವನ ಕ್ರಮಗಳನ್ನು ಹೋಲಿಸಿ ನೋಡುವುದರ ಮೂಲಕ ಬರುವಂಥ ಆರೋಗ್ಯಕರವಾದ ನಾಚಿಕೆ ಇದೆಯಲ್ಲ ಬಹಳ ಮುಖ್ಯವಾದದ್ದು. ಮುಂದುವರೆದ ದೇಶಗಳನ್ನು ನೋಡಿದಾಗ ಅನ್ನಿಸಬೇಕಾದದ್ದು ಏನಿದೆ? ಅವರ ಜೀವನ ಕ್ರಮ ಏನು? ಅವರಲ್ಲಿರುವ ಪ್ರಾಮಾಣಿಕತೆ ಎಂಥದ್ದು? ಅವರಲ್ಲಿನ ನಿಜವಾದಂಥ ಮೌಲ್ಯಗಳಾವುವು ಇಂಥದನ್ನು ಪರಿಚಯ ಮಾಡಿಕೊಳ್ಳುವುದರಿಂದ ಒಂದು ವ್ಯಕ್ತಿತ್ವದ ವಿಕಾಸ ಉಂಟಾಗುತ್ತದೆ. ಪ್ರವಾಸ ಕಥನಗಳನ್ನು ಬಹಳಷ್ಟು ಜನ ಬರೆದುಬಿಡುತ್ತಾರೆ. ಆದರೆ, ಅದು ನಿಜವಾಗಿಯೂ ಪ್ರವಾಸ ಕಥನವಾಗಿದೆಯೋ ಇಲ್ಲವೋ ಅನ್ನುವುದೇ ಮುಖ್ಯ. ಕಥನ ಅನ್ನೋದು ಇಲ್ಲಿ ಬಹಳ ಸಾಹಿತ್ಯಕ ಪ್ರಕಾರವಾಗಿ, ಮೌಲಿಕವಾದ ಒಂದು ಸಾಹಿತ್ಯದ ಸೇರ್ಪಡೆಯಾಗಿ ಬೆಳೆಯುತ್ತಿದೆ. ಹೀಗಾಗಿ ಪ್ರವಾಸ ಕಥನವನ್ನು ಕುರಿತು ಬರೆಯುವಾಗ ಆ ಜಗತ್ತು ಬಹಳ ಸ್ವಾರಸ್ಯವಾಗಿರುತ್ತದೆ; ವೈವಿಧ್ಯಮಯವಾಗಿರುತ್ತದೆ; ವರ್ಣರಂಜಿತವಾಗಿರುತ್ತದೆ; ಅನುಭವ ಸಮೃದ್ಧವಾಗಿರುತ್ತದೆ.

ಇಡೀ ಕೃತಿಯನ್ನು ಅವಲೋಕನ ಮಾಡಿದಾಗ ಲೇಖಕಿ ಪ್ರಾಣಿಶಾಸ್ತ್ರದ ವಿದ್ಯಾರ್ಥಿಗಳನ್ನು ಅಧ್ಯಯನಕ್ಕಾಗಿ ಕರೆದೊಯ್ಯುವ ಸಂದರ್ಭದಲ್ಲಿ ಆದ ಅನುಭವಗಳನ್ನು ಇಲ್ಲಿ ನಮೂದು ಮಾಡುವ ಪ್ರಯತ್ನವಿದೆ. ಆದರೆ ಇಲ್ಲಿ ವಿದ್ಯಾರ್ಥಿಗಳ ಚಟುವಟಿಕೆ ಗೌಣವಾಗಿದ್ದು ವಿದ್ಯಾರ್ಥಿಗಳ ಸಂಶೋಧನಾ ಪ್ರಕ್ರಿಯೆಗಳು ಎಲ್ಲಿಯೂ ಸಹ ನಮೂದಾಗಿಲ್ಲದಿರುವುದು ಈ ಕೃತಿಯ ತೂಕವನ್ನು ಕಡಿಮೆ ಮಾಡಿದ ಜೊತೆಗೆ ಪ್ರಯಾಣದ ಸಂದರ್ಭದಲ್ಲಿ ಆಗುವ ಅನುಭವದ ವರ್ಣನೆಯಲ್ಲಿಯು ಸಹ ಅಷ್ಟೇನೂ ಪ್ರಭಾವಬೀರುವ ಅಂಶಗಳಿಲ್ಲ. ಐತಿಹಾಸಿಕ ವಿಚಾರಗಳ ಬಗ್ಗೆ ಚರ್ಚೆ ನಡೆಸಿದ್ದರೂ. ತಳಸ್ಪರ್ಶಿಯಾಗಿ ಅಧ್ಯಯನ ನಡೆದಿಲ್ಲ ಇನ್ನೂ ಪ್ರಯತ್ನಪಟ್ಟಿದ್ದರೆ. ಹಾಗೂ ಅಲ್ಲಿನ ಸ್ಥಳೀಯ ವ್ಯಕ್ತಿಗಳ ಅಭಿಪ್ರಾಯವನ್ನು ಪರಿಗಣನೆ ತೆಗೆದುಕೊಂಡಿದ್ದರೆ. ಇನ್ನೂ ಹೆಚ್ಚಿನ ಮಾಹಿತಿಯನ್ನು ಕಲೆಹಾಕಬಹುದಾಗಿತ್ತು. ಬಿ.ಜಿ.ಎಲ್. ಸ್ವಾಮಿಯವರ ಹಸಿರು ಹೊನ್ನು ಕೃತಿಯನ್ನು ತೌಲನಿಕವಾಗಿ ನೋಡಿದಾಗ. ಸಸ್ಯ ಮತ್ತು ಪ್ರಾಣಿಶಾಸ್ತ್ರ ವಿಭಾಗಗಳ ಪ್ರವಾಸದ

ಕಥಾನಕವನ್ನು ಹೊಂದಿರುವ ಕೃತಿಗಳು, ವಿದ್ಯಾರ್ಥಿಗಳ ಸ್ವಾಭಾವಿಕವಾದ ಮನಸ್ಥಿತಿಗಳನ್ನು ಅನಾವರಣಗೊಳಿಸುವಲ್ಲಿ ಹಸಿರು ಹೊನ್ನು ಪ್ರಭಾವ ಬೀರಿದೆ. ಆದರೆ ಈ ಕೃತಿ ಆ ವಿಚಾರದಲ್ಲಿ ಗೌಣಸ್ಥಿತಿಯಲ್ಲಿದೆ.

ಲೇಖಕಿಯು ತಮ್ಮ ಅಂಡಮಾನಿನ ಅನುಭವಗಳನ್ನು ಹೇಳುವಂತಹ ಅವಸರದಲ್ಲಿ ಈ ಅಂಶಗಳನ್ನು ಮರೆತಿದ್ದಾರೆ. ಪ್ರದೇಶದ ವರ್ಣನೆಯು ಸಹ ಮೊದಲೇ ಹೇಳಿದಂತೆ ತೇಜಸ್ವಿಯವರ ಅಲೆಮಾರಿ ಅಂಡಮಾನ್ ಮತ್ತು ನೈಲ್ ನದಿ ಪುಸ್ತಕದಷ್ಟು ಪ್ರಭಾವವಿಲ್ಲ, ಪ್ರತಿಯೊಂದು ಸ್ಥಳಗಳ ಬಗ್ಗೆ ನೋಡುಗನಿಗೆ ಪ್ರಾಥಮಿಕವಾಗಿ ಮಾಹಿತಿ ನೀಡುವತ ಪುಸ್ತಕದೋಪಾದಿಯಲ್ಲಿದ್ದು ಕೆಲವೊಂದು ವಿಚಾರಗಳು ತುಂಬಾ ಉಪಯುಕ್ತವಾದ ಅಂಶಗಳನ್ನು ತಿಳಿಸುತ್ತಾರೆ. ಬ್ರಿಟಿಷರು ದ್ವೀಪಗಳನ್ನು ಆಕ್ರಮಿಸಿದ್ದು. ಜೈಲು ನಿರ್ಮಾಣ. ಹಾಗೂ ಕೆಲವೊಂದು ಐತಿಹಾಸಿಕ ವಿಚಾರಗಳ ಬಗ್ಗೆ ಕೆಲವೊಂದು ಮಾಹಿತಿಗಳು ಉತ್ತಮವಾಗಿವೆ. ಸಾಂಸ್ಕೃತಿಕವಾಗಿ, ಶೈಕ್ಷಣಿಕ, ಆರ್ಥಿಕವಾಗಿ, ಅಂಡಮಾನಿನ ಮೂಲನಿವಾಸಿಗಳ ಮೇಲೆ ಏರುತ್ತಿರುವ ನಾಗರೀಕತೆಯ ಹೊರೆಯಿಂದಾಗಿ ಅವರು ತಮ್ಮ ಮೂಲ ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಕೊಳ್ಳುಭಾಕ ಸಂಸ್ಕೃತಿಯಿಂದಾಗಿ ಇಂತಹ ಹಲವು ಬುಡಕಟ್ಟು ಸಮುದಾಯಗಳು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದೆ. ಮನುಷ್ಯನ ಸ್ವಾರ್ಥ ಮನೋಭಾವವೇ ಇದಕ್ಕೆಲ್ಲಾ ಮೂಲ ಕಾರಣ ನಾಗರೀಕ, ಮನುಷ್ಯ ತಾನು ಬದುಕಿ ಉಳಿದವರನ್ನು ಬದುಕಲು ಬಿಡಬೇಕು ಆದರೆ ಇಲ್ಲಿ ಕಾಡಿನ ಸಂಸ್ಕೃತಿಯನ್ನು ಹಾಳುಗೆಡುವುದರ ಮೂಲಕ ಅಭಿವೃದ್ಧಿಯ ಓಟದಲ್ಲಿ ಈ ಸಂಸ್ಕೃತಿಯನ್ನು ಮಣ್ಣುಗೂಡಿಸುತ್ತಿದ್ದಾನೆ. ಮುಂದೊಂದುದಿನ ಪ್ರಕೃತಿಯ ಮಾಯೆಯು ಹೊರ ಬಂದಾಗ ಮನುಷ್ಯ ತಕ್ಕ ಬೆಲೆಯನ್ನು ತೆರಬೇಕಾಗುತ್ತದೆ. ಉದಾ:- ಗ್ಲೋಬಲ್ ವಾರ್‌ಮಿಂಗ್!

ಒಟ್ಟಾರೆ ಈ ಕೃತಿಯಲ್ಲಿ ಲೇಖಕಿಯ ಸಾಂಸ್ಕೃತಿಕ, ರಾಜಕೀಯ, ಪ್ರಾಕೃತಿಕ, ವಿಚಾರಗಳ ಮೂಲಕವಾಗಿ ಅಂಡಮಾನ್ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಯತ್ನವಿದೆ.

ಯಾವುದೇ ಒಂದು ಸಂಶೋಧನೆಯು ಪರಿಪೂರ್ಣತೆಯನ್ನು ಹೊಂದಬೇಕಾದರೆ ಶೀರ್ಷಿಕೆಯಲ್ಲಿ ಪ್ರಸ್ತಾಪವಾಗಿರುವ ಸಮಗ್ರ ವಿಷಯಗಳ ಕಡೆ ಹೆಚ್ಚುಗಮನ ಹರಿಸಿಬೇಕಾಗುತ್ತದೆ. ಇಲ್ಲಿ ಉಲ್ಲೇಖಿಸುವ ಮತ್ತೊಂದು ಅಂಶವೆಂದರೆ ಪರಿಪೂರ್ಣತೆ. ಬಹುಶಃ ಸಂಶೋಧನೆಯ ಮಟ್ಟಿಗೆ ಇರಲಾರದೇನೊ? ಎಂಬ ಸಂದೇಹವನ್ನಿಟ್ಟುಕೊಂಡೆ ಈ ಮೇಲಿನ ಚರ್ಚೆಯನ್ನು ಬೆಳೆಸುತ್ತಿದ್ದೇನೆ. 'ಪರಿಪೂರ್ಣತೆ' ಎಂಬ ಪದವನ್ನು ಸ್ವಲ್ಪ ಪರೀಕ್ಷಿಸಿ 'ಸಮಗ್ರತೆ' ಎಂದು ಪರಿಭಾವಿಸುವುದಾದರೆ ಅದರ ಅರ್ಥ ವ್ಯಾಪ್ತಿ ಹೆಚ್ಚಾಗುತ್ತದೆ.

ಅಧ್ಯಯನದ ಉದ್ದೇಶ ವ್ಯಾಪ್ತಿಯಲ್ಲೇ ಚರ್ಚಿಸಿರುವಂತೆ ನನ್ನ ಸಂಪ್ರಬಂಧಕ್ಕೆ ಒಂದು ಚೌಕಟ್ಟು ಇರಬೇಕಾದದ್ದು ಕಡ್ಡಾಯ. ಅಂತಹ ಚೌಕಟ್ಟುಗಳಿಗೆ ವಿಷಯವು ಹಲವಾರು

ಆಯಾಮಗಳನ್ನು ಪಡೆದುಕೊಂಡರೂ ಸಮಸ್ಯೆಯಲ್ಲ. ಇಂತಹ ಆಯಾಮಗಳು ಸಂಶೋಧನೆಯಲ್ಲಿ ಬಹುಮುಖಿ ಚರ್ಚೆಗೆ ಒಳಗು ಮಾಡಿದರೆ ಅಲ್ಲಿ ಸಂಶೋಧನೆಯು ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ ಎನ್ನಬಹುದು.

ಕೆ.ಟಿ. ಗಟ್ಟಿಯವರ 'ನಿಸರ್ಗ ಕನ್ಯೆ ಅಂಡಮಾನ್' ಕೃತಿಯ ಮುನ್ನುಡಿಯಲ್ಲಿ ಅವರು ಪ್ರಸ್ತಾಪಿಸಿರುವಂತೆ **"ಭಾಷೆ ಮತ್ತು ನಾಗರೀಕತೆ ಹುಟ್ಟುವುದಕ್ಕೆ ಮೊದಲು ಜೀವಿಸಿದ್ದ ಆದಿಮಾನವ ಈಗಲೂ ಅಂಡಮಾನಿನಲ್ಲಿ ಇದ್ದಾನೆ ಆದ್ದರಿಂದ ಅಂಡಮಾನ್ ಜಗತ್ತಿನಲ್ಲಿ ಜೀವಂತ ಆದಿಮಾನವರಿರುವ ಏಕೈಕ ಆಂತ್ರೋಪಾಲಾಜಿಕಲ್ ಮ್ಯೂಸಿಯಂ"**[7] ವಿಸ್ಮಯಗಳಿಂದ ನಿಗೂಢತೆಯಿಂದ ಬೆರಗುಗೊಳಿಸುವ ಸೌಂದರ್ಯದಿಂದ ಪ್ರವಾಸಿಗರನ್ನು ಮೋಡಿ ಮಾಡುವ ಅಂಡಮಾನಿನ ನಿಸರ್ಗ ನಿತ್ಯ ನೂತನ ನಿರಂತರ ಆಕರ್ಷಕ.

ಕೆ.ಟಿ. ಗಟ್ಟಿಯವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವ ಚರ್ಚೆಯಾಗಿರುವ ವಿಷಯಗಳಲ್ಲಿ ಅಂಡಮಾನಿನ ಬುಡಕಟ್ಟು ಜನಾಂಗಗಳೂ ಕೂಡ ಮುಖ್ಯವಾದವು. ಪ್ರಪಂಚವು ಇಂದು ಶರವೇಗದಂತೆ ಆಧುನಿಕತೆಯ ಕಡೆಗೆ ದಾಪುಗಾಲು ಹಾಕುತ್ತಿದ್ದರೂ ಅಂಡಮಾನಿನ ಬುಡಕಟ್ಟು ಜನಾಂಗದವರು ಹೇಗೆ ಇನ್ನು ತಮ್ಮ ಮೂಲಸ್ಥಿತಿಯಲ್ಲೇ ಉಳಿದಿದ್ದಾರೆ ? ಎಂಬ ಪ್ರಶ್ನೆ ಓದುಗರಲ್ಲಿ ಆಶ್ಚರ್ಯವನ್ನುಂಟು ಮಾಡದೆ ಇರದು. ಈ ಜನಾಂಗದ ಅಧ್ಯಯನದ ಮುಖಾಂತರ ಮಾನವನ ಪೂರ್ವ ಬದುಕಿನ ವಿವರಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ನನ್ನ ಅಧ್ಯಯನದ ನಾಲ್ಕು ಕೃತಿಗಳಲ್ಲಿಯೂ ಕೂಡ ಇಲ್ಲಿನ ಬುಡಕಟ್ಟು ಜನಾಂಗದವರು ತಮ್ಮ ಅಸ್ಮಿತೆಯನ್ನು ಕಾಪಾಡಿಕೊಳ್ಳಲು ಹೇಗೆ ಸೆಣಸಾಡುತ್ತಿದ್ದಾರೆ ಎಂಬ ಅಂಶಗಳು ಕುತೂಹಲವನ್ನು ಉಂಟು ಮಾಡುತ್ತವೆ.

ಅಂಡಮಾನಿನಲ್ಲಿ ಪ್ರಮುಖವಾಗಿ ಕಂಡು ಬರುವ ಜನಾಂಗಗಳೆಂದರೆ ಗ್ರೇಟ್ ಅಂಡಮಾನೀಸ್, ಸೆಂಟಿನಲೀಸ್, ಜಾರವಾ, ಓಂಗೀಸ್ ಎಂಬ ನಾಲ್ಕು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ. ಮೂಲದಲ್ಲಿದ್ದ "ಒಂದೇ ಒಂದು ಗುಂಪು ಯಾವುದೋ ಕಾರಣಕ್ಕೆ ವಿಭಜನೆ ಹೊಂದಿ ಬೇರೆ ಬೇರೆ ಕಡೆ ನೆಲೆಸಿ ಬೇರೆ ಬೇರೆ ಬುಡಕಟ್ಟುಗಳಾಗಿ ರೂಪುಗೊಂಡಿರಬಹುದು ಎನ್ನಬಹುದಾಗಿದೆ".

ಇನ್ನೂರು ವರ್ಷಗಳ ಹಿಂದೆ ಆಧುನಿಕ ಮಾನವನ ಸಂಪರ್ಕಕ್ಕೆ ಬಂದ 'ದಕ್ಷಿಣ ಅಂಡಮಾನ್ ದ್ವೀಪ' ಮತ್ತು 'ತೀರದ ಇತರ ದ್ವೀಪ'ಗಳಲ್ಲಿ ವಾಸವಾಗಿದ್ದ **'ಜಾರವಾ'** ಗುಂಪನ್ನು ಬ್ರಿಟೀಷ್ ನೆಲಸಿಗರು **'ಗ್ರೇಟ್ ಅಂಡಮಾನೀಸ್'** ಎಂದು ಹೆಸರಿಸಿದರು. ಉತ್ತರ ಸೆಂಟಿನಲ್ ದ್ವೀಪವಾಸಿ, ಜಾರವರನ್ನು **ಸೆಂಟೀನಲೀಸ್** ಎಂದು ಕರೆದರು. ದಕ್ಷಿಣ ಅಂಡಮಾನ್ ಬಾರಾಟಾಂಗ್ ಮತ್ತು ಮಧ್ಯ ಅಂಡಮಾನಿನ ನಿವಾಸಿಗಳನ್ನು **ಜಾರವಾ**ಗಳೆಂದೂ, ಲಿಟಲ್

ಅಂಡಮಾನ್‌ನಲ್ಲಿರುವವರನ್ನು ಓಂಗೇಗಳೆಂದು ಕರೆದು ಎಂದು ಕೆ.ಟಿ. ಗಟ್ಟಿಯವರು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ. ಯಾವುದೇ ಒಂದು ಪ್ರವಾಸ ಕೃತಿಯಲ್ಲಿ ಈ ರೀತಿಯ ಮಾನವಶಾಸ್ತ್ರದ ವಿವರಗಳು ದಾಖಲಾಗುವುದು ಅತಿವಿರಳ. ಪ್ರವಾಸದ ಮನಃಸ್ಥಿತಿಯು ಹೆಚ್ಚು ಹೆಚ್ಚಾಗಿ ಸುತ್ತುವುದು, ಮನರಂಜನೆಯನ್ನು ಪಡೆಯುವುದು ಮುಂತಾದ ಸೀಮಿತ ವಿವರಗಳಲ್ಲಿಯೇ ಕಳೆದು ಹೋಗುವ ಅಪಾಯಗಳೇ ಹೆಚ್ಚು. ಆದರೆ ಈ ಕೃತಿಯು ಮಾನವಶಾಸ್ತ್ರದ ಓನ್ನೆಲೆಯಲ್ಲಿ ಅಧ್ಯಯನವನ್ನು ನಡೆಸಿ ಆಧುನಿಕ ಮಾನವರಿಗೆ ಬೇಕಾದ ಅಗತ್ಯ ವಿವರಗಳನ್ನು ಒದಗಿಸಿಕೊಡುವಲ್ಲಿ ಗೆಲ್ಲುತ್ತದೆ ಎಂದರೆ ತಪ್ಪಾಗುವುದಿಲ್ಲ. ಗಟ್ಟಿಯವರು ಇಲ್ಲಿನ ಜನಾಂಗಗಳ ಬಗ್ಗೆ ಸರಿಯಾದ ಮಾಹಿತಿಗಳನ್ನು ಒದಗಿಸಿಕೊಡುತ್ತಾ ಅವರು ಬದುಕಿದ್ದ ರೀತಿ, ಜೀವನಕ್ರಮ, ಸಂಸ್ಕೃತಿ, ಆಚಾರ-ವಿಚಾರ, ವಿಧಿನಿಷೇಧಗಳ ಬಗ್ಗೆ ಸವಿವರವಾಗಿ ಚರ್ಚಿಸಿ ಬುಡಕಟ್ಟುಗಳ ಜೀವನ ಕ್ರಮದ ಮೇಲೆ ಬೆಳಕನ್ನು ಚೆಲ್ಲುವ ಕಾರ್ಯವನ್ನು ಮಾಡಿದ್ದಾರೆ.

ಜಾರವಾಗಳ ಬಗ್ಗೆ ಗಟ್ಟಿಯವರು ನೀಡಿರುವ ವಿವರಗಳು ಇಲ್ಲಿವೆ. 'ಈಗಲೂ ಕೂಡ ಜಾರವಾಗಳು ಶುದ್ಧ ಆದಿಮಾನವರಂತಿದ್ದಾರೆ. ಸತತ ಇನ್ನೂರು ವರ್ಷಗಳಿಂದ ಜಾರವಾಗಳ ಬಗ್ಗೆ ಅಧ್ಯಯನವನ್ನು ನಡೆಸಿದರೂ ಹೆಚ್ಚೇನು ಅವರ ಬಗ್ಗೆ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ' ಎಂಬ ಅಂಶವನ್ನು ದಾಖಲಿಸುತ್ತಾರೆ. ಎಷ್ಟೋ ಮಂದಿ ಸಂಶೋಧಕರು ಅವರ ಬಳಿ ತೆರಳಿ ಅಧ್ಯಯನವನ್ನು ಮಾಡಲು ಹೋಗಿ ಸೋತಿದ್ದಾರೆ ಎಂದು ದಾಖಲಿಸುತ್ತಾರೆ. ಇಲ್ಲಿ ಉಲ್ಲೇಖಿಸಬಹುದಾದ ಅಂಶವೆಂದರೆ ಜಾರವಾಗಳು ತಮ್ಮ 'ಅಸ್ಮಿತೆಯ' ಬಗ್ಗೆ ಇರಿಸಿಕೊಂಡಿರುವ ಪ್ರಬಲವಾದ ನಂಬಿಕೆ.

.ಇಲ್ಲಿ ಕನ್ನಡದ ಖ್ಯಾತ ವಿಮರ್ಶಕರಾದ ಡಿ.ಆರ್. ನಾಗರಾಜರ **ಸಂಸ್ಕೃತಿ ಕಥನ**ದ 'ಕನ್ನಡ ಸಂವರ್ಧನೆ' ಎಂಬ ತಮ್ಮ ಲೇಖನದಲ್ಲಿ ಸಂಸ್ಕೃತಿಯ ಬಗ್ಗೆ ಚರ್ಚಿಸುತ್ತಾ ಹಲವಾರು ಮಹತ್ವದ ವಿಷಯಗಳ ಕಡೆಗೆ ಬೆಳಕು ಚೆಲ್ಲಿದ್ದಾರೆ. 'ಸಂಸ್ಕೃತಿಯೊಂದು ಹೊರಗಿನವರೆಗೆ ಆಕರ್ಷಕವಾಗಲು ತನ್ನನ್ನು ತಾನು ವಾಣಿಜ್ಯೀಕರಿಸಿಕೊಳ್ಳುವುದು ಸುಲಭ. ಆದರೆ ಅದು ರೋಗದ ಮಾರ್ಗ. ತನ್ನ ಕಲೆಗಳನ್ನು ಜೀವನ ಕ್ರಮದ ಉತ್ಸವಗಳನ್ನು ವಾಣಿಜ್ಯೀಕರಿಸಿ ಅದನ್ನು ರಫ್ತು ಮಾಡಲು ಪ್ರಯತ್ನಿಸುವುದು ಅಗ್ಗದ ದಾರಿ. ಇಲ್ಲಿ ಮುಖ್ಯ ಸಮಸ್ಯೆ ಎಂದರೆ ನಾಡಿನ ಆತ್ಮಗೌರವವನ್ನು ಉಳಿಸಿಕೊಳ್ಳುವುದು. ಕೇರಳ, ಕಾಶ್ಮೀರ ಆದಿವಾಸಿ ಜನಾಂಗಗಳಲ್ಲಿ ಈಗಾಗಲೇ ಈ ರೀತಿಯ ಸಾಂಸ್ಕೃತಿಕ ವಾಣಿಜ್ಯೀಕರಣದ ಅಪಾಯಗಳು ಎದ್ದುಕಾಣುತ್ತವೆ. ಇದನ್ನು 'ಸಾಂಸ್ಕೃತಿಕ ಸರಕೀಕರಣದ ದಾರಿ' ಎಂದು ಕರೆಯಬಹುದು'. ಡಿ.ಆರ್. ನಾಗರಾಜ್‌ರವರು ಸಂಸ್ಕೃತಿಯ ಬಗ್ಗೆ ಆಳವಾಗಿ ಚಿಂತನೆಯನ್ನು ನಡೆಸಿ ಸಂಸ್ಕೃತಿ ಮತ್ತು ವಾಣಿಜ್ಯೀಕರಣದ ನೇತ್ಯಾತ್ಮಕ ಮುಖಾಮುಖಿಯನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ.

ಸಂಸ್ಕೃತಿ ಯಾವಾಗಲೂ ಕೂಡ ತನ್ನ 'ಅಸ್ಮಿತೆ'ಯನ್ನು ಕಾಪಾಡಿಕೊಳ್ಳುವತ್ತ ನೈಜವಾದ ಗಮನವನ್ನು ಹರಿಸಬೇಕು. ಇಲ್ಲದೇ ಹೋದರೆ 'ಸಾಂಸ್ಕೃತಿಕ ದಿವಾಳಿತನ'ವು ಎದುರಾಗಬಹುದು ಎನ್ನುವಂತಹ ಗಂಭೀರವಾದ ಸಂದೇಶವನ್ನು ಡಿ.ಆರ್. ನಾಗರಾಜ್‌ರವರು ರವಾನಿಸಿದ್ದಾರೆ. ಸಂಸ್ಕೃತಿಯು ವಾಣಿಜ್ಯೀಕರಣಗೊಂಡಾಗ ಮುಖ್ಯವಾಹಿನಿಗೆ ತನ್ನನ್ನು ತಾನು ತೆರೆದುಕೊಂಡಾಗ ಅದರ ಆತ್ಮಗೌರವಕ್ಕೆ ಧಕ್ಕೆ ಒದಗಿಬರುತ್ತದೆ ಎಂಬಂತಹ ಎಚ್ಚರದ ನುಡಿಗಳು ಇಲ್ಲಿವೆ.

ಈ ವಿಷಯವನ್ನು ಇಲ್ಲಿ ವಿವರವಾಗಿ ಚರ್ಚಿಸಲು ಮೂಲಕಾರಣ 'ಜಾರವಾಗಳು'. ತಮ್ಮತನವನ್ನು ಬಿಟ್ಟುಕೊಡದೇ ಬದುಕುತ್ತಿರುವ ಅವರ ಜೀವನ ವಿಧಾನ. ಆಧುನಿಕ ಜೀವನಶೈಲಿಗೆ ಇಂದಿನ ಮಾನವನು ಹೊಂದಿಕೊಂಡು ಸಾಗುತ್ತಿರುವ ಸಂದರ್ಭಗಳಲ್ಲಿ ಜಾರವಾಗಳ ಅಸ್ಮಿತೆಯ ಪ್ರಶ್ನೆ ಇಲ್ಲಿ ಮುಖ್ಯವೆನಿಸುತ್ತದೆ. ಡಾರ್ವಿನ್‌ನ ವಿಕಾಸವಾದ ಕ್ರಮವನ್ನು ಇಲ್ಲಿ ಚರ್ಚಿಸುತ್ತಾ ವಿಕಾಸಕ್ರಮವು ಮಾನವನ 'ಅಭ್ಯುದಯಕ್ಕೆ' ಹೇಗೆ ಸಹಾಯಕವಾಗಿದೆ ಎಂಬುದು ಕೂಡ ಮುಖ್ಯವಾಗಿದೆ. ಡಾರ್ವಿನ್‌ನ ವಿಕಾಸ ಕ್ರಮವು ಮಾನವನ ಹಂತ ಹಂತದ ವಿವರಗಳನ್ನು ಚರ್ಚಿಸುತ್ತದೆ. ಆದರೆ ಮಾನವ ವಿಕಾಸವಾದಂತೆಲ್ಲಾ ಅಭಿವೃದ್ಧಿಯ ಪಥದ ಕಡೆಗೆ ಸಾಗಿದಂತೆಲ್ಲಾ 'ಅಂತಿಮ ಘಟ್ಟ' ಯಾವುದು? ಎಂಬುದು ಕೂಡ ಮುಖ್ಯವಾಗುತ್ತದೆ. ಇದು ತಂತ್ರಜ್ಞಾನಕ್ಕೆ ಸಂಬಂಧಪಟ್ಟಂತೆ ೨ಜಿ, ೩ಜಿ, ೪ಜಿ, ೫ಜಿ ಹೀಗೆ ಸರಣಿ ಮುಂದುವರೆಯುತ್ತದೆ. ಆದರೆ ಕೊನೆಯ ಜಿ ? ಯಾವುದು ಎಂಬ ಪ್ರಶ್ನೆ ಉಂಟಾಗುತ್ತದೆ ! ಆಧುನಿಕತೆ ಬೆಳೆದು ತಂತ್ರಜ್ಞಾನವು ಮುಂದುವರೆದಂತೆಲ್ಲಾ ಅದಕ್ಕೆ ಒಂದು ಕೊನೆ ಎಂಬುದು ಇರಲೇಬೇಕು. ಮಾನವ ಕುಲವು ಒಂದು ಅಂತ್ಯವನ್ನು ತಲುಪುತ್ತದೆಯೇ ಎಂಬ ಪ್ರಶ್ನೆ ಇಲ್ಲಿ ಮುಖ್ಯವಾಗುತ್ತದೆ. ಆಧುನೀಕತೆಗೆ ತೆರೆದುಕೊಂಡ ಮನುಷ್ಯ ತಂತ್ರಜ್ಞಾನವನ್ನು ತನ್ನ ಉಸಿರಾಗಿಸಿಕೊಂಡು ಬದುಕುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಆತನನ್ನು ಕಾಡುತ್ತಿರುವ ಭಯ ಎಂತಹದ್ದು ಎಂಬುದು ಬಹು ಮುಖ್ಯ ಅಂಶವಾಗಿದೆ.

ದಿನ ಬೆಳಗಾದರೆ ಟಿ.ವಿ. ಚಾನಲ್‌ಗಳಲ್ಲಿ ಭೂಕಂಪ, ಪ್ರವಾಹ, ಸುನಾಮಿ ಇವುಗಳ ಭಯದಲ್ಲಿ ಬದುಕುತ್ತಿರುವ ಆಧುನಿಕ ಮನುಷ್ಯನಿಗೆ ಹೋಲಿಸಿ ನೋಡಿದರೆ, ಇಂತಹ ಭಯಗಳನ್ನು ಮೀರಿ ಬದುಕುತ್ತಿರುವ ಬುಡಕಟ್ಟು ಜನಾಂಗಗಳು ನೂರಕ್ಕೆ ನೂರರಷ್ಟು ಮೇಲೆನಿಸುತ್ತವೆ. ಇಂತಹ ಮೂಲಭೂತ ಅಂಶಗಳೂ ಕೂಡ ಈ ಅಧ್ಯಯನದಲ್ಲಿ ಬಹುಮುಖ್ಯವಾದ ಪ್ರಶ್ನೆಗಳಾಗಿವೆ. ಇಷ್ಟೆಲ್ಲಾ ವಿವರವಾದ ಚರ್ಚೆಗೆ ನನ್ನನ್ನು ಈಡು ಮಾಡಿದ್ದು ಸಂಸ್ಕೃತಿಯ ಚಿಂತನೆ.

ಜಾರವಾಗಳು ಬಿಲ್ಲುಬಾಣಗಳಿಂದಲೇ ತಮ್ಮತನವನ್ನು ಕಾಯ್ದುಕೊಳ್ಳಲು ಹೆಣಗುತ್ತಿದ್ದಾರೆ ಎಂದರೆ ಅವರಿಗೆ ಅಸ್ತಿತ್ವದ ಬಗ್ಗೆ ಇರುವ ಕಾಳಜಿ ಎಂತಹದು ಎಂಬುದು ನಮಗೆ

ವೇದ್ಯವಾಗುತ್ತದೆ. ಇಂತಹ 'ಅಸ್ತಿತ್ವದ' ಪಾಠವನ್ನು ನಾಗರೀಕ ಮನುಷ್ಯ 'ಜಾರವಾ'ಗಳಿಂದ ಕಲಿಯಲೇಬೇಕು.

ತಮ್ಮ ಅಸ್ತಿತ್ವಕ್ಕಾಗಿ ಸೆಣಸಾಡುತ್ತಿರುವ ಜಾರವಾಗಳನ್ನು ಕೂಡ ಹತ್ತಿಕ್ಕುವ ಅವರ ಹೋರಾಟಗಳನ್ನು ವಿಫಲಗೊಳಿಸುವ ಸಂಚು ಹೇಗೆ ನಡೆಯುತ್ತಿದೆ ಎಂಬುದನ್ನು ತೇಜಸ್ವಿರವರ ಪ್ರವಾಸ ಕೃತಿಯಾದ 'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್' ನಲ್ಲಿ ಕಾಣಬಹುದು.

ಅಂಡಮಾನಿನ ದ್ವೀಪಗಳೆಲ್ಲಾ ಸಂಪರ್ಕಿಸುವಂತೆ ಒಂದು ರಸ್ತೆಯನ್ನು ನಿರ್ಮಿಸಲು ಆರಂಭಿಸುತ್ತಾರೆ. ಇದನ್ನು **'ದಿ ಗ್ರೇಟ್ ಅಂಡಮಾನ್ ಟ್ರಂಕ್ ರೋಡ್'** ಎಂದು ಕರೆಯುತ್ತಾರೆಂದು ತೇಜಸ್ವಿಯವರು ವಿವರಿಸಿದ್ದಾರೆ. ರಸ್ತೆ ಮಾಡಲು ದಟ್ಟಕಾಡಿನ ನಡುವೆ ಬುಲ್‌ಡೋಜ಼ರ್‌ಗಳನ್ನು ಬಳಸಿ ನೆಲಮಟ್ಟ ಮಾಡುತ್ತಿರುವುದು ಕಂಡಿತು. ಈ ಕೆಲಸಕ್ಕೆ ಅಂಡಮಾನಿನ ಜಾರವಾ ಕಾಡು ಜನರಿಂದ ಪ್ರತಿರೋಧ ಬರುತ್ತದೆಂದೂ, ರಸ್ತೆ ಕೆಲಸಗಾರರಲ್ಲಿ ಕೆಲವರನ್ನು ವಿಷಪೂರಿತ ಬಾಣಗಳಿಂದ ಕೊಂದಿದ್ದಾರೆಂದೂ ಹೇಳಿದರು. ಅದಕ್ಕಾಗಿಯೇ ಆಯುಧ ಸಜ್ಜಿತ ಕಾವಲುಗಾರರ ಬೆಂಗಾವಲಲ್ಲಿ ಕೆಲಸ ನಡೆಯುತ್ತಿತ್ತು. ಪ್ರಶಾಂತ್ ಹೇಳಿದರು 'ಜಾರವಾಗಳು ಪ್ರತಿಭಟಿಸುತ್ತಿರುವುದು ನಿಜ ಹಾಗೂ ಸಹಜ ಆದರೆ ಈವರೆಗೆ ನಮ್ಮ ಕಾವಲುಗಾರರೇ ಅನೇಕ ಜಾರವಾ ಜನಗಳನ್ನು ಹೊಂದಿದ್ದಾರೆ. ಸುಮಾರು ೭೦ ಜನರನ್ನು ಈವರೆಗೆ ಕೊಂದಿದ್ದಾರೆ, ಅನಧಿಕೃತವಾಗಿಯೂ ಸುಮಾರು ೭೦ ಜನರನ್ನು ಹೊಂದಿದ್ದಾರೆ ಎಂದು ಹೇಳಲಾಗುತ್ತಿದೆ. ಈ ಕೊಲೆಗಳು ಹೀಗೆ ಮುಂದುವರೆದರೆ ಟ್ರಂಕ್ ರಸ್ತೆ ಪೂರ್ಣವಾಗುವ ವೇಳೆಗೆ ಅಂಡಮಾನಿನಲ್ಲಿ ಈಗ ೩೦೦ ಜನರಿರುವ ಜಾರವಾಗಳು ನಾಮಾವಶೇಷವಾಗಬಹುದು' ಎಂದು ತೇಜಸ್ವಿಯವರು ತಮ್ಮ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ.[*೧]

ಮೇಲಿನ ದೀರ್ಘವಾದ ವಿವರಣೆಯ ಮುಖಾಂತರ ವೇದ್ಯವಾಗುವ ಸಂಗತಿಯೆಂದರೆ ಆಧುನಿಕತೆಯು ಹೇಗೆ ಆದಿವಾಸಿಗಳನ್ನು ನಾಶಮಾಡುತ್ತದೆ ಎಂಬ ವಿವರಗಳನ್ನು ಕಾಣಬಹುದು. ಇಲ್ಲಿ ಜಾರವಾಗಳು ಹೋರಾಟ ಮಾಡುತ್ತಿರುವುದು ಸಹಜವೇ ಆಗಿದೆ. ತಮ್ಮ ನೆಲೆಯನ್ನು ಬಿಟ್ಟುಕೊಡಲು ಜಾರವಾಗಳ ಹೋರಾಟ ಯಾವ ಆಧುನಿಕ ಹೋರಾಟಕ್ಕಿಂತಲೂ ಕಡಿಮೆ ಇಲ್ಲ ಎಂದು ಹೇಳಬಹುದು. ಜಾರವಾಗಳು ಹೇಗೆ ಆಧುನಿಕತೆಯನ್ನು ವಿರೋಧಿಸುತ್ತಾರೆ ಎಂಬುದಕ್ಕೆ ಕೆ.ಟಿ. ಗಟ್ಟಿಯವರ ಕೃತಿಯಲ್ಲಿ ಹಲವು ಉದಾಹರಣೆಗಳನ್ನು ಕಾಣಬಹುದು. 'ಒಮ್ಮೆ ಅಂಡಮಾನಿನ ಆಡಳಿತಾಧಿಕಾರಿಯಾಗಿದ್ದ **ಕಾರ್ಬೆನ್** ಎಂಬುವವನು ಜಾರವಾರಿಗೆ ಓದು ಬರಹ ಮತ್ತು ಶಿಕ್ಷಣ ನೀಡಿ ನಾಗರೀಕರನ್ನಾಗಿ ಮಾಡಬೇಕೆಂದು ನಿರ್ಧರಿಸಿದ. **'ಅಂಡಮಾನ್ ಹೋಂ'** ಎಂಬ ಸಂಸ್ಥೆಯನ್ನು ಸ್ಥಾಪಿಸಿದ. ಕರಾವಳಿ ಪ್ರದೇಶದಲ್ಲಿರುವ ಜಾರವಾಗಳ ಮನವೊಲಿಸಿ

**ಅಡಿಟಿಪ್ಪಣಿ: *೧.ನಿಸರ್ಗ ಕನ್ಯೆ ಅಂಡಮಾನ್– ಕೆ.ಟಿ.ಗಟ್ಟಿ, ಮುನ್ನುಡಿ.**

ಅಂಡಮಾನ್ ಹೋಂನಲ್ಲಿ ವಾಸಿಸುವಂತೆ ಮಾಡಿದನಂತೆ. ಆದರೆ ಮಳೆಬಿಸಿಲಿಗೆ ಸದಾ ನಗ್ನವಾಗಿರುವ ಜಾರವಾಗಳಿಗೆ ಬಟ್ಟೆ ಹಿಂಸೆ ಎನಿಸಿತು. ಮನೆ ಸೆರೆಮನೆಯಂತೆ ಅವರಿಗೆ ಕಂಡು ಬಂದಿತು. ಸೋಪು, ಆಹಾರ, ಔಷಧಿ ಎಲ್ಲವೂ ಕೂಡ ಅವರ ದೇಹಶಕ್ತಿಯನ್ನು ಕುಂದಿಸಿತು. ಈ ರೀತಿಯ ಆಧುನಿಕ ಜೀವನ ಕ್ರಮದಿಂದ ಹಲವಾರು ಜಾರವಾಗಳು ಸತ್ತರು. ಕೆಲವು ಜಾರವಾಗಳು ನಾಡನ್ನು ಬಿಟ್ಟು ತೆರಳಿದರು ಎಂಬಂತಹ ವಿವರಗಳನ್ನು ಅಧ್ಯಯನ ಮಾಡಿದಾಗ, ಏಕೆ ಜಾರವಾಗಳು ನಾಗರೀಕತೆಯನ್ನು, ಆಧುನಿಕರನ್ನು ದ್ವೇಷಿಸುತ್ತಾರೆ? ಎಂಬುದಕ್ಕೆ ಹಲವಾರು ಕಾರಣಗಳು ನಮಗೆ ದೊರೆಯುತ್ತವೆ. ಹೀಗೆ ಹತ್ತಾರು ಕಾರಣಗಳಿಂದ ಜಾರವಾಗಳು ಆಧುನಿಕರನ್ನು ದ್ವೇಷಿಸುತ್ತಾರೆ.

ಜಾರವಾ, ಓಂಗೆಗಳನ್ನು ಆಧುನೀಕರಣಗೊಳಿಸುವ ವಿಚಾರದಲ್ಲಿ ಒಮ್ಮೆ ಜವಹರಲಾಲ್ ನೆಹರೂರವರು ಹೇಳಿದ್ದರು. "ಅವರನ್ನು ನಮ್ಮನ್ನು ಹೋಲುವ ದ್ವಿತೀಯ ದರ್ಜೆಯ ಪ್ರಜೆಗಳನ್ನಾಗಿಸುವುದರಲ್ಲಿ ಅರ್ಥವಿಲ್ಲ. ಅವರು ತಮ್ಮ ಪಾಡಿಗೆ ಹಾಡಿ, ಕುಣಿದು ಆನಂದವಾಗಿರುವರು. ಸ್ಟಾಕ್ ಎಕ್ಸೇಂಜ್ ಆಫೀಸುಗಳಲ್ಲಿ ಕುಳಿತು ಒಬ್ಬರು ಇನ್ನೊಬ್ಬರ ಮೇಲೆ ಉರಿ ಕಾರುತ್ತಾ ನಾಗರೀಕರೆಂದು ಕರೆದುಕೊಳ್ಳುವ ಜನಗಳಂತೆ ಅಲ್ಲ. ನಾವು ಅವರ ಜೀವನ ವಿಧಾನಗಳಲ್ಲಿ ಖಂಡಿತ ಹಸ್ತಕ್ಷೇಪ ಮಾಡಕೂಡದು. ಅವರ ಬದುಕನ್ನು ಅವರದೇ ಆದ ರೀತಿಯಲ್ಲಿ ಏನು ಮಾಡಬಹುದು ಅದನ್ನು ಮಾತ್ರ ಮಾಡಬೇಕು. ಅವರು ತಮ್ಮ ಬುದ್ಧಿಶಕ್ತಿಯಂತೆ ಅವರ ಸಂಪ್ರದಾಯದಂತೆ ಜೀವಿಸಲಿ"* ಎಂದು ಜಾರವಾಗಳನ್ನು, ಓಂಗೆಗಳನ್ನು ಅವರು ಇಚ್ಛೆ ಬಂದಂತೆ ಬದುಕಲು ಅವಕಾಶ ಮಾಡಿಕೊಡಿ ಎಂದು ನೆಹರೂರವರು ವಿವರಿಸಿದ್ದಾರೆ.*೧

ಯಾವುದೇ ಒಂದು ಜನಾಂಗಕ್ಕೆ ತನ್ನದೇ ಆದ ಮೂಲಭೂತ ಆಚರಣೆಗಳು, ವಿಧಿ ನಿಷೇಧಗಳು, ಬದುಕಿನ ಕ್ರಮಗಳು, ಆಚಾರ-ವಿಚಾರ ಇವುಗಳನ್ನು ತುಂಬಾ ಹಿಂದಿನಿಂದ ಅವರು ಪಾಲನೆ ಮಾಡುತ್ತಾ ತಮ್ಮ ಇರವನ್ನು ಸಾಬೀತುಪಡಿಸುತ್ತಾ ಬದುಕುತ್ತಿರುತ್ತಾರೆ.

ಆಧುನಿಕ ಜೀವನ ಕ್ರಮವು ಅವರಿಗೆ ಹೊರೆಯೆನಿಸಿ ಅವನ್ನು ಒಪ್ಪಿಕೊಳ್ಳಲಾಗದಂತಹ ಸಂದರ್ಭದಲ್ಲಿ ಪ್ರತಿರೋಧವನ್ನುಂಟು ಮಾಡುತ್ತಾರೆ. ಆ ಪ್ರತಿರೋಧವು ದಿನಗಳೆದಂತೆ ಹಿಂಸೆಯ ಮಾರ್ಗವನ್ನು ಹಿಡಿದು ಆ ಉಗ್ರಸ್ವರೂಪವನ್ನು ತಮ್ಮ ಅಸ್ತಿತ್ವಕ್ಕಾಗಿ ತಮ್ಮನ್ನು ಬಲಿಕೊಡುವ ಸಂದರ್ಭವೂ ಕೂಡ ಎದುರಾಗುತ್ತದೆ.

ರಹಮತ್‌ರವರು ತಮ್ಮ ಕೃತಿಯನ್ನು ಅರ್ಪಿಸಿರುವುದು **'ಬಿಲ್ಲುಬಾಣಗಳ ಮೂಲಕ ತಮ್ಮತನವನ್ನು ಕಾದುಕೊಳ್ಳಲು ಸೆಣಸುತ್ತಿರುವ ಜಾರವಾಗಳಿಗೆ'** ಎಂದು ನಿರೂಪಿಸಿದ್ದಾರೆ ಎಂದರೆ

ಅಡಿಟಿಪ್ಪಣಿ: *ನಿಸರ್ಗ ಕನ್ಯೆ ಅಂಡಮಾನ್; ಕೆ.ಟಿ.ಗಟ್ಟಿ. ಪುಟ. ೧೨೩,೧೨೪

ರಹಮತ್‌ರವರು ಕೂಡ 'ಆಧುನಿಕತೆಯು ಹೇಗೆ ಜಾರವಾಗಳನ್ನು ನಾಶಪಡಿಸುತ್ತದೆ ಎಂಬುದನ್ನು ಅರಿತಿದ್ದರು' ಎಂಬುದು ಅರ್ಥವಾಗುತ್ತದೆ.

**'ಜಾರವಾಗಳನ್ನು ನಾಗರೀಕರನ್ನಾಗಿಸುವ ಪ್ರಯತ್ನ ಮಾಡಬಾರದು. ಅವರನ್ನು ಅವರ ಪಾಡಿಗೆ ಬಿಡಿ'** ಎಂದು ಕೆಲವು ಮಾನವಶಾಸ್ತ್ರಜ್ಞರು ಹೇಳಿದ್ದಾರೆ. ಈ ಜನಾಂಗವನ್ನು ಆಧುನೀಕರಣಗೊಳಿಸಿದರೆ ಉಂಟಾಗುವಂತಹ ಅನಾಹುತಗಳನ್ನು ನಾವು ಹಿಂದಿನ ಭಾಗದಲ್ಲಿ ಸವಿಸ್ತಾರವಾಗಿ ಕಂಡಿದ್ದೇವೆ. ವಿಜಯಸುಬ್ಬರಾಜ್‌ರವರ ಕೃತಿಯಾದ 'ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ' ಎಂಬ ಕೃತಿಯಲ್ಲಿಯೂ ಕೂಡ ಜಾರವಾಗಳ, ಓಂಗೆಯರ, ಸೆಂಟಿನೆಲ್ಲರ, ನಿಕೋಬಾರಿಗಳ ಬಗ್ಗೆ ಸವಿವರವಾಗಿ ಚರ್ಚಿಸಿದ್ದಾರೆ.

**ವಿಜಯ ಸುಬ್ಬರಾಜ್**ರವರು ಅಂಡಮಾನಿನ ಬುಡಕಟ್ಟುಗಳ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ವಿವರಣೆಯನ್ನು ನೀಡುತ್ತಾರೆ. 'ಜಾರವಾಗಳು ಮತ್ತು ಓಂಗೆಗಳು ಆಧುನೀಕತೆಗೆ ತೆರೆದುಕೊಳ್ಳದೆ ಬದುಕುತ್ತಿದ್ದಾರೆ. ಆದರೆ ಶೊಂಪೇಯನ್ನರು, ಸೆಂಟಿನಲ್ಲರು, ನಿಕೋಬಾರಿಗಳು ಬದಲಾಗುತ್ತಿರುವ ನಾಗರೀಕತೆಗಳ ಪ್ರಭಾವಕ್ಕೆ ಒಳಗಾಗಿ ಶಿಕ್ಷಣ, ಉದ್ಯೋಗ ಮತ್ತು ಫ್ಯಾಶನ್‌ಗಳಿಗೆ ತೆರೆದುಕೊಂಡಿದ್ದಾರೆ. ಮಿಕ್ಕ ಜನಜಾತಿಗಳು ಸರ್ಕಾರದ ತಡೆಯಿಲ್ಲದ ಪ್ರಯತ್ನಗಳಿಂದಲೂ ಬದಲಾಗದೆ ದಟ್ಟವಾದ ಕಾಡುಗಳಲ್ಲಿ ಬದುಕುತ್ತಿದ್ದಾರೆ' ಎಂದು ಅಂಡಮಾನಿನ ಜನಾಂಗಗಳ ಬಗ್ಗೆ ದಟ್ಟವಾದ ವಿವರಗಳನ್ನು ದಾಖಲಿಸಿದ್ದಾರೆ.[*೧]

ಸ್ತ್ರೀ ಕೇಂದ್ರಿದ ನೆಲೆಯಲ್ಲಿ ವಿಜಯ ಸುಬ್ಬರಾಜ್‌ರವರು ಅಲ್ಲಿನ ಜನಾಂಗಗಳನ್ನು ಕಾಣಲು ಯತ್ನಿಸಿದ್ದಾರೆ. ಅದನ್ನು ಕುರಿತಾದಂತೆ ಕೆಲವು ವಿವರಗಳನ್ನು ಮುಂದಿನ ಭಾಗದಲ್ಲಿ ಕಾಣಬಹುದು.

"ಓಂಗೆಗಳು ತಮ್ಮ ಗುಂಪಿನೊಳಗೆ ಮದುವೆಯಾಗುತ್ತಾರೆ. ಮದುವೆ ವಯಸ್ಸು ಮುಖ್ಯವಲ್ಲ, ಶಾಂತಿಪ್ರಿಯರಾಗಿ ಬಾಳುತ್ತಾರೆ, ತಾಯ್ತನದ ತುಡಿತ ಹೆಚ್ಚು, ತುಂಬು ಬಸುರಿಯರು ಕಾಡಿನೊಳಗೆ ಪ್ರವೇಶಿಸಬಾರದೆಂಬ ಕಟ್ಟಳೆ, ದುಷ್ಟಶಕ್ತಿಗಳ ಪ್ರಭಾವ ಬೀಳದಿರಲೆಂಬುದೇ ಈ ಕಟ್ಟಳೆಯ ಹಿಂದಿನ ಕಾಳಜಿ. ಅವರ ನಂಬಿಕೆಯಂತೆ **ಓಂಕೋ ಚಾಕ್ವೆ ಆತ್ಮ** ಲಿಟಲ್ ಅಂಡಮಾನಿನ ಆಕಾಶದಲ್ಲಿರುವುದು, ಹಂದಿಮಾಂಸ, ಜೇನು, ಆಮೆ ಇತ್ಯಾದಿ ಆಹಾರ ಪದಾರ್ಥಗಳ ಮೂಲಕ ಬಸುರಿ ಹೆಂಗಸಿನ ಗರ್ಭ ಸೇರುತ್ತದೆ. ಈ ಆತ್ಮವೇ ಮಗುವಿನ ಆತ್ಮವಾಗುತ್ತದೆ.[*೧]

ಅಡಿಟಿಪ್ಪಣಿ: " ಕೆ.ಟಿ. ಗಟ್ಟಿ ನಿಸರ್ಗ ಕನ್ಯೆ ಅಂಡಮಾನ್ :ಪುಟ. ೧೨೪

೧. ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ: ಡಾ.ವಿಜಯಾ ಸುಬ್ಬರಾಜ್. ಪುಟ.೫೧, ೫೬

ಹೀಗೆ ವಿಜಯಸುಬ್ಬರಾಜ್‌ರವರು ಸ್ತ್ರೀ ಕೇಂದ್ರಿತ ಕಥನದ ಮೂಲಕ ಅಂಡಮಾನನ್ನು ಪರಿಚಯಿಸಲು ಯತ್ನಿಸಿದ್ದಾರೆ. ಸ್ತ್ರೀ ಭಾಗದ ದೃಷ್ಟಿಕೋನದಿಂದಲೂ ವಿಜಯ ಸುಬ್ಬರಾಜ್‌ರವರ ಚಿಂತನಾ ಕ್ರಮವು ಮುಖ್ಯವೆನಿಸುತ್ತದೆ. ಈ ಅಧ್ಯಯನದಲ್ಲಿ ಈ ಲೇಖಕಿಯ ಚಿಂತನಾ ಕ್ರಮವು ಮಾನವೀಯತೆ ನೆಲೆಯಲ್ಲಿ ಸಾಕಾರಗೊಂಡಿರುವುದನ್ನು ಕಾಣಬಹುದು.

ಜಾರವಾಗಳ ರೀತಿಯಲ್ಲಿಯೇ ಅತ್ಯಂತ ನಿಗೂಢವಾಗಿ ಉಳಿದಿರುವರೆಂದರೆ ಸೆಂಟಿನೆಲೀಸ್ ಜನಾಂಗದವರು. ಜಾರವಾರಂತೆಯೇ ಇವರು ವಸ್ತ್ರದ ಪ್ರಲೋಭನೆಗೆ ತುತ್ತಾಗುವುದಿಲ್ಲ. ಆಧುನಿಕ ಮಾನವರು ದಾಳಿ ಇಟ್ಟರೆ ಇವರು ಕಾಡಿನಲ್ಲಿ ಓಡಿ ಅದೃಶ್ಯರಾಗುತ್ತಾರೆ. ಹೀಗೆ ಅವರನ್ನು ಕಾಡಿನಲ್ಲಿ ಓಡಿಸಿ ಅವರ ಬಗ್ಗೆ ಅಧ್ಯಯನವನ್ನು ಕೈಗೊಳ್ಳುತ್ತೇವೆ. ಈ ರೀತಿಯಾಗಿ ಹಲವಾರು ಬುಡಕಟ್ಟುಗಳು ಅಧ್ಯಯನದ ಮುಖಾಂತರ ಅಲ್ಲಿನ ಸಂಸ್ಕೃತಿಯನ್ನು ಅರಿಯುವುದಕ್ಕೆ ಸಹಾಯಕವಾಗುತ್ತದೆ.

ಅಂಡಮಾನಿನ ಸಂಸ್ಕೃತಿಯು ಹೇಗೆ ನಾಲ್ಕು ಕೃತಿಗಳಲ್ಲಿ ಭಿನ್ನವಾಗಿ ವ್ಯಕ್ತವಾಗಿದೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಸಂಸ್ಕೃತಿಯ ಭಿನ್ನ ಅಂಶಗಳು ಹೇಗೆ ಕೃತಿಗಳಲ್ಲಿ ತಮ್ಮ ಇರವನ್ನು ಸಾಬೀತುಪಡಿಸಿವೆ ಎಂಬುದನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

# ಅಧ್ಯಾಯ - ೦೯

## ಪ್ರಸ್ತುತ ಸಂದರ್ಭದಲ್ಲಿ ಪ್ರವಾಸಿ ಕಥನಗಳು ತಳೆಯಬೇಕಾದ ನಿಲುವುಗಳು :

ಕನ್ನಡದ ಆದಿಕವಿ ಪಂಪನನ್ನು ಗಮನಿಸಿ. ಅವನು ರಾಜಾಸ್ಥಾನದಲ್ಲಿದ್ದ, ಅರಿಕೇಸರಿಯ ಜೊತೆ ಅನೇಕ ಕಡೆ ಪ್ರವಾಸ ಕೈಗೊಂಡಿದ್ದ. ಅದು ಯುದ್ಧಯಾತ್ರೆ ಇರಬಹುದು, ತೀರ್ಥಯಾತ್ರೆ ಇರಬಹುದು, ಪ್ರವಾಸವೇ ಆಗಿರಬಹುದು. ಹೀಗೆಲ್ಲ ಸುತ್ತಾಡಿದ ಅವನು ತನ್ನ ಕೆಲವು ಅನುಭವಗಳನ್ನು ಕಾವ್ಯಗಳಲ್ಲಿ ತಕ್ಕಮಟ್ಟಿಗೆ ಕೊಟ್ಟಿದ್ದಾನೆ. ಈ ದೃಷ್ಟಿಯಲ್ಲಿ ವಿವೇಚಿಸುವಾಗ, ಪಂಪಭಾರತದಲ್ಲಿ ಬಂದಿರುವ ಬನವಾಸಿಯ ವರ್ಣನೆಯಯೇ ಕನ್ನಡದಲ್ಲಿ ಪ್ರವಾಸ ಸಾಹಿತ್ಯದ ಮೊತ್ತಮೊದಲ ದಾಖಲೆ ಎನಿಸುತ್ತದೆ. ಪಂಪ ಬನವಾಸಿಯವನಲ್ಲ. ಅವನು ಉತ್ತರ ಕರ್ನಾಟಕದಲ್ಲಿ ಹುಟ್ಟಿದವನು, ಆಂಧ್ರಪ್ರದೇಶದಲ್ಲಿ ಇದ್ದವನು. ಆದರೆ ಅವನು ಯಾವಾಗಲೋ ಒಮ್ಮೆ ಬನವಾಸಿ ಪ್ರಾಂತ್ಯಕ್ಕೆ ಹೋಗಿ, ಅದರ ಸೌಂದರ್ಯಕ್ಕೆ ಮನಸೋತು ಪದ್ಯಗಳನ್ನು ಬರೆದಿದ್ದಾನೆ. ಆಗ ವ್ಯಕ್ತಿ ನಿಷ್ಠವಾದಂಥ ಭಾವಗೀತ ಪ್ರಕಾರ ಇರಲಿಲ್ಲ. ತನ್ನ ಅನುಭವಗಳೇನಿದ್ದರೂ ಅವನ್ನು ವಸ್ತುನಿಷ್ಠವಾದ ಮಹಾಕಾವ್ಯದಲ್ಲಿ ಮಾತ್ರ ಪ್ರಕಟಮಾಡುವುದು ಅವನಿಗೆ ಸಾಧ್ಯವಾಗಿತ್ತು. ಆದ್ದರಿಂದ ಪಂಪ ಆ ಪದ್ಯಗಳನ್ನು ತನ್ನ ಭಾರತದಲ್ಲಿ ಸೇರಿಸಿದ್ದಾನೆ. ಆದರೂ ಈಗ ನಾವು ಪ್ರವಾಸ ಸಾಹಿತ್ಯ ಎಂದು ಕರೆಯುತ್ತಿರುವಂಥ ಸಾಹಿತ್ಯ ಪ್ರಕಾರ ಇತ್ತೀಚನದು ಎಂದು ಒಪ್ಪಿಕೊಳ್ಳಬೇಕು.

ಪ್ರವಾಸ ಸಾಹಿತ್ಯದ ಪ್ರಯೋಜನವೇನು? ಇದು ನಮಗೆ ಹೊಸ ಹೊಸ ಪ್ರಪಂಚಗಳ ಪರಿಚಯ ಮಾಡಿಕೊಡುತ್ತದೆ. ಪ್ರವಾಸ ಸಾಹಿತ್ಯದಿಂದ ಹೊಸ ಹೊಸ ಪ್ರಪಂಚಗಳ ಸಾಕ್ಷಾತ್ಕಾರವಾಗಬೇಕಿದ್ದರೆ, ಪ್ರವಾಸದ ಚಿತ್ರಣ ಸಮರ್ಥವಾಗಿರಬೇಕು, ಪರಿಣಾಮಕಾರಿಯಾಗಿರಬೇಕು ಮತ್ತು ಜೀವಂತವೂ ಆಗಿರಬೇಕು. ಪ್ರವಾಸ ಸಾಹಿತ್ಯದ ಓದುಗನೂ ಕಲ್ಪನಾಶಕ್ತಿಯುಳ್ಳವನಾಗಿರಬೇಕು. ಪ್ರವಾಸ ಕಥನ ಎಷ್ಟೇ ಚೆನ್ನಾಗಿರಲಿ, ಕಲ್ಪನಾ ದರಿದ್ರನಾದ ಓದುಗ ಅದನ್ನು ಸಂಪೂರ್ಣವಾಗಿ ಆಸ್ವಾದಿಸಲಾರ, ಅದರ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲಾರ, ಓದುಗನಲ್ಲಿ ಸ್ವಲ್ಪ ಕಲ್ಪನಾಶಕ್ತಿಯಿದ್ದಲ್ಲಿ, ಮೂಲಲೇಖಕನಿಗಿಂತಲೂ ಚೆನ್ನಾಗಿಯೇ ಅವನು ಪ್ರವಾಸಾನುಭವಗಳನ್ನು ತನ್ನದನ್ನಾಗಿ ಮಾಡಿಕೊಳ್ಳಲು ಸಾಧ್ಯ. ಪ್ರವಾಸ ಸಾಹಿತ್ಯದಲ್ಲಿ ಎರಡು ಬಗೆ: ಒಂದು ಪ್ರೇರಕ. ಎಂದರೆ, ಮೂಲ ವಸ್ತುವನ್ನು ನಾವೇ ಸ್ವತಃ ನೋಡಬೇಕು ಎನ್ನುವ ಕುತೂಹಲವನ್ನು ಉಂಟುಮಾಡುವಂಥ ಸಾಹಿತ್ಯ. ಈ ಬಗೆಯ ಸಾಹಿತ್ಯ ಸ್ವಲ್ಪ ಕೆಳಮಟ್ಟದಲ್ಲಿ ನಿಲ್ಲುತ್ತದೆ ಎಂದು ಹೇಳಬಹುದು. ಇದು ಸುಮ್ಮನೆ ಓದುಗರನ್ನು ಪ್ರಚೋದಿಸುತ್ತದೆ, ಅಷ್ಟೇ! ಎರಡನೆಯ ಬಗೆಯೇ ಪೂರಕ ಸಾಹಿತ್ಯ. ಪೂರಕ ಎಂದರೆ ನಮ್ಮ ಕುತೂಹಲವನ್ನು ಪೂರೈಸತಕ್ಕದ್ದು: ನೋಡಬೇಕಾಗಿಯೇ ಇಲ್ಲ, ಅಷ್ಟು ಚೆನ್ನಾಗಿ ಕಣ್ಣಿಗೆ

ಕಟ್ಟುವಂತೆ ವರ್ಣಿಸಿದ್ದಾನೆ. ಸಾಕ್ಷಾತ್ಕರಿಸುವಂತೆ ಮಾಡಿದ್ದಾನೆ ಎಂದು ಅನಿಸುವಂಥ ಸಾಹಿತ್ಯ ಇದೇ ನಿಜವಾಗಿ ಉತ್ತಮ ಮಟ್ಟದ ಪ್ರವಾಸ ಸಾಹಿತ್ಯ..

- ಪ್ರವಾಸದಿಂದ ಮೋಕ್ಷ ಪಡೆಯುವ ಪರಿಕಲ್ಪನೆಯೂ ಕೂಡ ಪ್ರಾರಂಭದಲ್ಲಿ ಚಾಲ್ತಿಯಲ್ಲಿತ್ತು. ಆದರೆ ಅಂತಹ ಕಟ್ಟುಪಾಡುಗಳನ್ನು ಮುರಿದು ತನ್ನ ಸ್ವರೂಪವನ್ನ ಬದಲಾಯಿಸಿ ಕೊಂಡಿರುವ ಪ್ರಸ್ತುತ ಸಂದರ್ಭದಲ್ಲಿ ಪ್ರವಾಸಿ ಸಾಹಿತ್ಯ ಸಾಗಬೇಕಾದ ಹಾದಿ ಯಾವುದು ಎಂಬುದೂ ಕೂಡ ಒಂದು ಸಮಸ್ಯೆಯಾಗಬಹುದು.

- ಪ್ರವಾಸಿ ಸಾಹಿತ್ಯ ಅನುಭವ ಕಥನಗಳಾಗಿ ಉಳಿಯುವ ಸಾಧ್ಯತೆಗಳೇ ಹೆಚ್ಚು. ಅಂತಹ ಸಂದರ್ಭದಲ್ಲಿ 'ಚಾರಿತ್ರಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರವಾಸ ಸಾಹಿತ್ಯದ ಕೃತಿಗಳು ಕಟ್ಟಿಕೊಡುವ ಸೃತಿ' ಎಂಥಹುದು ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸುವ ಅವಶ್ಯಕತೆ ಇರದೇ ಇರದು.

- ಅನುಭವ, ವರ್ಣನೆಯನ್ನು ಮೀರಿದ ವಿಶ್ಲೇಷಣಾ ಕ್ರಮ ಮತ್ತು ಅಂತರ್ ಶಿಸ್ತೀಯ ಅಧ್ಯಯನ ಕ್ರಮಗಳು ಪ್ರವಾಸ ಸಾಹಿತ್ಯಕ್ಕೆ ಅನ್ವಯವಾಗಬೇಕಾದ ತುರ್ತು ಇಂದು ಎದುರಾಗಿದೆ ಎಂದು ಹೇಳ ಬಹುದು. ಐತಿಹಾಸಿಕವಾಗಿಯೂ ಕೂಡ ಪ್ರವಾಸ ಎನ್ನುವುದು ಬಹಳ ಮಹತ್ವದ ಪ್ರಕ್ರಿಯೆಯಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಕಂಡುಬರುತ್ತಿದ್ದ ಪ್ರವಾಸಗಳೆಲ್ಲವೂ ಕೂಡ ವ್ಯಾಪಾರದ ಮತ್ತು ಲಾಭದ ದೃಷ್ಟಿಕೋನವನ್ನು ಒಳಗೊಂಡಿರುತ್ತಿತ್ತು. ಅಂಥಹ ಪ್ರವಾಸಿಗಳು ಯಾವುದೇ ಸ್ಥಳವನ್ನು ಸಂದರ್ಶನ ಮಾಡಿದರೂ ಕೂಡ 'ಲಾಭದ ಕಣ್ಣು'ಗಳಿಂದಲೇ ನೋಡುತ್ತಿದ್ದರು ಎಂಬುದು ಗಮನಾರ್ಹ. ಜೊತೆಗೆ ಈ ವ್ಯಾಪಾರಿ ಮನೋಧರ್ಮವು ಅಂದಿನ ರಾಜಕಾರಣವನ್ನು ಸೂಚಿಸುತ್ತದೆ. ಅಂತಹ ಪ್ರವಾಸಿಗರ ಅಧ್ಯಯನವೂ ಕೂಡ ಏಕಮುಖಿ ದೃಷ್ಟಿಕೋನವಲ್ಲದೇ ಬೇರೇನನ್ನೂ ಕಟ್ಟಿಕೊಡಲು ಸಾಧ್ಯವಿಲ್ಲ.

- ಪ್ರವಾಸ ಕಥನಗಳು ವರದಿಗಳಾಗುವ ಅಪಾಯವನ್ನು ಮೀರಿ ಬೆಳೆದಾಗ ಇಂತಹ ಪ್ರವಾಸ ಕಥನಗಳು "ಆತ್ಮಕೇಂದ್ರಿತ"ವಾದಾಗ ಮತ್ತು ಸ್ವಯಂ ಪ್ರತಿಷ್ಠೆಯನ್ನು ಮಂಡಿಸುವ ಸಾಧನಗಳಾಗಿ ಬಳಕೆಯಾದಾಗ ಹೆಚ್ಚಿನದೇನನ್ನೂ ಕೊಡಲು ಸಾಧ್ಯವಾಗಲಾರದು. ಈ ಮೂಲಾಂಶಗನ್ನು ಮೀರುವ ತುರ್ತು ಇಂದಿನ ಪ್ರವಾಸಿ ಸಾಹಿತ್ಯಕ್ಕೆ ಇದೆ. ನಾನು ಆಯ್ಕೆ ಮಾಡಿಕೊಂಡಿರುವ ಪ್ರವಾಸಿ ಕಥನಗಳು ಮೇಲಿನ ಅಂಶಗಳನ್ನು ಎಷ್ಟರ ಮಟ್ಟಿಗೆ ಮೀರುತ್ತವೆ ಎಂಬುದು ಈ ಅಧ್ಯಯನದಲ್ಲಿ ಬಹು ಮುಖ್ಯ ಪ್ರಶ್ನೆಯಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಪ್ರವಾಸ ಸಾಹಿತ್ಯಗಳ ಸ್ಥಾನ- ಧೋರಣೆ ಎಂತಹದೂ ಎಂಬುದು ಬಹುಮುಖ್ಯ

# ಅಧ್ಯಾಯ - ೧೦

## ಈ ಅಧ್ಯಯನದ ಫಲಿತಗಳು :

ಯಾವುದೇ ಸಂಶೋಧನೆಯು ಒಂದು ತಾರ್ಕಿಕ ಅಂತ್ಯವನ್ನು ಕಾಣಲು ಸಾಧ್ಯವಾಗುವುದು ಫಲಿತಗಳ ಮೂಲಕವೇ. **'ಫಲಿತಗಳು ಎಷ್ಟರ ಮಟ್ಟಿಗೆ ಒಂದು ಸಂಶೋಧನೆಯ ಯಶಸ್ಸನ್ನು ನಿರ್ಧರಿಸುತ್ತವೆ'** ಎಂಬುದು ಕೂಡ ಮುಖ್ಯವಾದ ಅಂಶವಾಗುತ್ತದೆ. ಸಂಶೋಧನೆ ಎನ್ನುವುದು ಶೂನ್ಯದಿಂದ ಸೃಷ್ಟಿಯಾಗುವುದಿಲ್ಲ. ಅದೊಂದು ನಿರಂತರ ಪ್ರಕ್ರಿಯೆ ಈ ಪ್ರಕ್ರಿಯೆಯು ಸಂಶೋಧಕನ ಶೋಧನೆಯನ್ನು ಅವಲಂಬಿಸಿವೆ. ಸಂಶೋಧನೆಯ ಸತ್ಯದ ನೆಲೆಯಲ್ಲಿಯೇ ವ್ಯಾಖ್ಯಾನಗೊಳ್ಳಬೇಕು ಎಂಬ ಅಂಶವೂ ಕೂಡ ಸಂಶೋಧನೆಯಲ್ಲಿ ಮುಖ್ಯವೆನಿಸುತ್ತದೆ. ಯಾವುದೇ ಒಂದು ವಿಷಯವನ್ನು ಸಂಶೋಧನೆಗೆ ಆರಿಸಿಕೊಂಡಾಗ ಸಂಶೋಧನಾ ಕ್ಷೇತ್ರದ 'ಪರಿಕಲ್ಪನೆ' ಮುಖ್ಯವೆನಿಸುತ್ತದೆ. ಇಂತಹ ಪ್ರಾರಂಭಿಕ ಯತ್ನಗಳು ಸಫಲವಾಗದಿದ್ದರೆ ಸಂಶೋಧನಾ ಫಲಿತಗಳು ಫಲಪ್ರದಾಯಕವಾಗಿರುವುದಿಲ್ಲ.

ಸಂಶೋಧನಾ ವಿಷಯಗಳು ಅದುವರೆಗೆ ನಡೆದಿರುವಂತಹ ಸಂಶೋಧನ ವಿಷಯಗಳ ಬಗ್ಗೆ ಗಮನಹರಿಸಿರಬೇಕು. ಸಂಶೋಧನೆಗೆ ಯಾವುದೇ ವಿಷಯವನ್ನು ಆರಿಸಿಕೊಂಡ ಸಂದರ್ಭದಲ್ಲಿ ಆ ವಲಯದಲ್ಲಿ ಆಗಿರುವಂತಹ ಅಧ್ಯಯನಗಳು ಯಾವ ಬಗೆಯವು? ಸಂಬಂಧಪಟ್ಟ ವಿಷಯಕ್ಕೆ ಆರೋಗ್ಯಪೂರ್ಣವಾದ ಫಲಿತಗಳನ್ನು ಕೊಡುವಲ್ಲಿ ನಡೆಸಿರುವ ಸಂಶೋಧನೆಯು ಯಶಸ್ವಿಯಾಗಿದೆಯೇ? ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಇದರ ಜೊತೆಗೆ ಇದುವರೆಗಿನ ಅಧ್ಯಯನಗಳು ಎತ್ತಿರುವಂತಹ ಪ್ರಶ್ನೆಗಳಿಗೆ ಎಷ್ಟರ ಮಟ್ಟಿಗೆ ಆ ವಲಯದಲ್ಲಿ ಹೆಚ್ಚಿನ ಅಧ್ಯಯನವನ್ನು ಕೈಗೊಳ್ಳುವಲ್ಲಿ ಅವುಗಳು ಸಹಾಯಕವಾಗಬಹುದು ಎಂಬುದು ಕೂಡ ಫಲಿತದ ಮುಖ್ಯ ಉದ್ದೇಶವಾಗಿದೆ.

ಪ್ರವಾಸ ಕಥನ ಎಂಬಂತಹ ವಲಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಾಗ ಪ್ರವಾಸದ ನಿರ್ವಚನ, ಅಧ್ಯಯನಗಳ ಸಮೀಕ್ಷೆ ಈ ಅಂಶಗಳು ಮುಖ್ಯವೆನಿಸಿದರೂ ಇದುವರೆಗೆ ನಡೆದಿರುವಂತಹ ಅಧ್ಯಯನಗಳನ್ನೊಳಗೊಂಡ ಪ್ರಯಾಣಗಳು ಪೂರ್ವಾಗ್ರಹ ಪೀಡಿತವಾಗಿರುತ್ತವೆ ಅಥವಾ ಸಂಶೋಧನಾರ್ಥಿಯ ದೃಷ್ಟಿಯಿಂದ ಆ ವಿಷಯಕ್ಕೆ ನ್ಯಾಯ ಒದಗಿದೆಯೇ? ಎಂಬುದು ಕೂಡ ಇಲ್ಲಿ ಮುಖ್ಯವಾಗುತ್ತದೆ. ಪ್ರವಾಸ ಎನ್ನುವಂತಹ ಪರಿಕಲ್ಪನೆ ಕನ್ನಡದ ಸಾಹಿತ್ಯದ ಮಟ್ಟಿಗೆ ಹಳೆಯದೇ ಆದರೆ ಕಾಲಘಟ್ಟವು ಬದಲಾದಂತೆ ಈ ಪರಿಕಲ್ಪನೆಯೂ ಕೂಡ ಬದಲಾಗುತ್ತಾ ಸಾಗುತ್ತಿವೆ. ಇಂತಹ ಸ್ಥಿತ್ಯಂತರಗಳನ್ನು ನಾವು ಗುರುತಿಸುವ ಸಂದರ್ಭಗಳಲ್ಲಿ ಈ ಪ್ರಕ್ರಿಯೆಯ ಹಿಂದಿರುವ ರಾಜಕಾರಣ ಎಂತಹುದು ಎಂಬುದು ಮುಖ್ಯವಾಗುತ್ತದೆ. ಯಾವುದೇ

ಸಂಶೋಧನೆಗಳು ತನ್ನ ಹಿಂದಿನ ಸಂಶೋಧನೆಗಳ **'ಪಡಿಯಚ್ಚು'**ಗಳಾಗದೆ ತಮ್ಮತನವನ್ನು ಉಳಿಸಿಕೊಳ್ಳಲು ಶತಾಯಗತಾಯ ಪ್ರಯತ್ನಿಸುತ್ತಿರಬೇಕು. ಒಂದಾದರು ಮೌಲ್ವಿಕವಾದಂತಹ ಪ್ರಶ್ನೆಗಳನ್ನು ಎತ್ತಿದರೆ ಆ ಸಂಶೋಧನೆ ಯಶಸ್ವಿಯಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

ಪ್ರವಾಸದ ಪರಿಕಲ್ಪನೆಯನ್ನು ಕುರಿತಂತೆ ಪ್ರಾರಂಭದ ಕಾಲಘಟ್ಟದಲ್ಲಿ ಇದ್ದಂತಹ ಚಿಂತನೆಯು ಕಾಲಾನಂತರ ಬದಲಾಗುವ ಬಗೆಯನ್ನು ಕಂಡರೆ ಸೋಜಿಗವೆನಿಸುತ್ತದೆ. ಪ್ರವಾಸವೆಂದರೆ **'ತೀರ್ಥಯಾತ್ರೆ'** ಎನ್ನುವಂತಹ ಮೂಲಭೂತ ತಿಳುವಳಿಕೆ ಇದ್ದಂತಹ ಸಂದರ್ಭದಲ್ಲಿ ಆ ಕಾಲಘಟ್ಟದ ಕೃತಿಗಳು ಹೆಚ್ಚಿನದೇನನ್ನೂ ಓದುಗರಿಗೆ ಕೊಟ್ಟಿರಲಾರವೇನೋ? ಆದರೆ ನಂತರದ ಕಾಲಘಟ್ಟದಲ್ಲಿ ರಚನೆಯಾದಂತಹ ಹೊಸದಿಗಂತಗಳನ್ನು ಶೋಧಿಸುವ ತೇಜಸ್ವಿಯವರ **'ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್'** ಎಂಬ ಪ್ರವಾಸ ಕಥನವಿರಬಹುದು, ಸೂಕ್ಷ್ಮ ನೆಲೆಯ ವಿಮರ್ಶಕರಾದ ರಹಮತ್ ತರೀಕೆರೆಯವರ **'ಅಂಡಮಾನ್ ಕನಸು'** ಹಾಗೂ ಕೆ.ಟಿ. ಗಟ್ಟಿಯವರ **'ನಿಸರ್ಗ ಕನ್ಯೆ ಅಂಡಮಾನ್'** ಮತ್ತು ಖ್ಯಾತ ಲೇಖಕಿಯಾದ ವಿಜಯ ಸುಬ್ಬರಾಜ್‌ರವರ **'ಸ್ವರ್ಗದ್ವೀಪದ ಕನಸುಗಳ ಬೆನ್ನೇರಿ'**–ಈ ಕೃತಿಗಳ ಸಾಮಾನ್ಯ ಅಂಶ **'ಅಂಡಮಾನ್'**. ಪ್ರವಾಸ ಕೃತಿಗಳು ಈ ಪ್ರದೇಶವನ್ನು ಗ್ರಹಿಸಿರುವ ಕ್ರಮ ಪ್ರವಾಸ ಸಾಹಿತ್ಯದ ಮಟ್ಟಿಗೆ ವಿಭಿನ್ನವೇ ಸರಿ.

ಕೆ.ಟಿ. ಗಟ್ಟಿಯವರು ಕ್ಷೇತ್ರ ಕಾರ್ಯದ ಮುಖಾಂತರ ಅಂಡಮಾನಿನ ಪೂರ್ವ ಇತಿಹಾಸವನ್ನು ಶೋಧಿಸಲು ಹೊರಟರೇ ಅಥವಾ ತೇಜಸ್ವಿಯವರು ಗತ ಮತ್ತು ವರ್ತಮಾನವನ್ನು ಮುಖಾಮುಖಿ ಮಾಡುತ್ತಾ ಅಥವಾ ವೈಜ್ಞಾನಿಕ ದೃಷ್ಟಿಕೋನದಿಂದಲೇ ಅಂಡಮಾನನ್ನು ದರ್ಶಿಸುವ ಕಾರ್ಯವನ್ನು ಕೈಗೊಂಡಿದ್ದಾರೆ. ರಹಮತ್ ತರೀಕೆರೆ ವಿಮರ್ಶಕರಾಗಿದ್ದರೂ ಅವರ ಕವಿಮನಸ್ಸು ಈ ಪ್ರವಾಸಿ ಕಥನದಲ್ಲಿ ತನ್ನ ಕಾರ್ಯವನ್ನು ಯಾವ ರಮ್ಯಕವಿಗೂ ಕಡಿಮೆ ಇಲ್ಲದಂತೆ ನಿರ್ವಹಿಸಿದೆ. ಅದೇ ರೀತಿ ವಿಜಯಸುಬ್ಬರಾಜರ 'ಸ್ವರ್ಗದ್ವೀಪದ ಕನಸಿನ ಬೆನ್ನೇರಿ' ಈ ಕೃತಿಯು ಕೂಡ ಭಿನ್ನವಾದ ಅಂಡಮಾನನ್ನು ಓದುಗರ ಮುಂದೆ ತೆರೆದಿಡುತ್ತದೆ. ಒಟ್ಟಾರೆಯಾಗಿ ಅಂಡಮಾನ್ ಕುರಿತ ಈ ನಾಲ್ಕು ಕೃತಿಗಳಲ್ಲಿ ಮೂಲ ನೆಲೆಯಾದ ಅಂಡಮಾನ್ ತನ್ನ ಇರವನ್ನು ಯಾವ ನೆಲೆಯಲ್ಲಿ ಸಾಭೀತುಪಡಿಸುತ್ತಿದೆ? ಎಂಬ ಫಲಿತ ಇಲ್ಲಿ ನನಗೆ ಮುಖ್ಯವೆನಿಸುತ್ತದೆ. ನಾಲ್ಕು ಕೃತಿಗಳನ್ನು ಒಂದರ ಪಕ್ಕದರಲ್ಲೊಂದಿಟ್ಟು ಒಂದೊಂದನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಿ ಗುಣಾದೋಷಗಳನ್ನು ಚರ್ಚಿಸದೆ ಅಂಡಮಾನ್ ಎನ್ನುವ ಕೇಂದ್ರಸ್ಥಾನದ ಮುಖಾಂತರ ನಾಲ್ಕು ಕೃತಿಗಳು ಯಾವ ಬಿಂದುವಿನಲ್ಲಿ ಸಂದಿಸುತ್ತವೆ ಎಂಬುದು ಇಲ್ಲಿನ ಮುಖ್ಯ ಅಂಶವಾಗಿದೆ.

ಪ್ರವಾಸ ಕೃತಿಗಳು ಕೇವಲ ಮನರಂಜನೆಯ ಮೂಲ ಉದ್ದೇಶವನ್ನು ಮೀರಿ ಸಂಸ್ಕೃತಿಗಳ ಚರ್ಚೆ, ಇತಿಹಾಸ ಚರ್ಚೆ, ಜೈವಿಕ ಶಾಸ್ತ್ರದ ಅಧ್ಯಯನ, ಮಾನವ ಶಾಸ್ತ್ರದ ಅಧ್ಯಯನ, ಪ್ರಾಣಿಶಾಸ್ತ್ರದ ಅಧ್ಯಯನ ಹೀಗೆ ಅನೇಕ ಜ್ಞಾನ ಶಾಖೆಗಳಾಗಿ ಅಂಡಮಾನಿನ ಮಹತ್ವವನ್ನು ಯಾವ ರೀತಿಯಲ್ಲಿ ಹೆಚ್ಚಿಸಿವೆ ಎಂಬುದನ್ನು ಇಲ್ಲಿ ಚರ್ಚೆಗೆ ಅತಿಮುಖ್ಯ ವಸ್ತುವಾಗಿ ಕಾಣಸಿಗುತ್ತವೆ. ರಹಮತ್ ತರೀಕೆರೆಯವರ ಕೃತಿಯು ಹೆಚ್ಚಾಗಿ ಪ್ರಾಕೃತಿಕ ನೆಲೆಯಲ್ಲಿ ಅನಾವರಣಗೊಂಡು ಭಿನ್ನವಾಗಿ ಕಾಣಿಸಿಕೊಂಡಿದೆ ಅದೇ ರೀತಿ ಪೂರ್ಣಚಂದ್ರ ತೇಜಸ್ವಿಯವರ ಕೃತಿಯು ಬಿಂಬಿಸುವ ಜೀವಶಾಸ್ತ್ರದ ವಿವರಗಳು, ಕನ್ನಡ ಪ್ರವಾಸ ಸಾಹಿತ್ಯದ ಮಟ್ಟಿಗೆ ಹೊಸ ಆಯಾಮಕ್ಕೆ ಅನುವು ಮಾಡಿಕೊಡುತ್ತದೆ. ತೇಜಸ್ವಿಯವರನ್ನು ಹೊರತು ಪಡಿಸಿದರೆ ಆ ರೀತಿಯ ಜೀವಶಾಸ್ತ್ರೀಯ ಅಧ್ಯಯನ ಬೇರೆ ಲೇಖಕರಿಗೆ ಅಸಾಧ್ಯವಾಗುತ್ತಿತ್ತೇನೋ ಎಂಬ ಅನುಮಾನವು ಕೂಡ ಬಹಳವಾಗಿ ಕಾಡುತ್ತದೆ. ತೇಜಸ್ವಿಯವರು ಬಾಲ್ಯದಿಂದ ಪರಿಭಾವಿಸಿದ ಪ್ರಕೃತಿಯ ಭಿನ್ನ-ಭಿನ್ನ ಛಾಯೆಗಳು ಅವುಗಳ ನೆರಳಲ್ಲಿ ಈ ಕೃತಿಯು ತನ್ನ ವಿಸ್ತಾರವನ್ನು ಮತ್ತಷ್ಟು ವಿಸ್ತರಿಸಿಕೊಂಡಿದೆ ಕೆ.ಟಿ. ಗಟ್ಟಿಯವರು ಕಟ್ಟಿಕೊಡುತ್ತಿರುವ ಅಂಡಮಾನ್ ಇತಿಹಾಸವು ಅಂಡಮಾನ್‌ನಲ್ಲಿ ಗ್ರಹಿಸುವ ಹೊಸ ಹೊಸ ನೆಲೆಗಳನ್ನು ಓದುಗರಿಗೆ ತೆರೆದಿಟ್ಟಿವೆ. ಅದೇ ರೀತಿ ಅಂಡಮಾನಿನ ಬಗ್ಗೆ ಇದ್ದಂತಹ ಇತಿಹಾಸವು ಹೇಗೆ ತನ್ನ ಮಹತ್ವವನ್ನು ಜನತೆಗೆ ಸಾರಿ ಹೇಳುತ್ತಿವೆ ಎಂಬುದನ್ನು ಸೋದಾಹರಣವಾಗಿ ಗಟ್ಟಿಯವರು ತಮ್ಮ ಕೃತಿಯಲ್ಲಿ ಬಹುದೀರ್ಘವಾಗಿ ಚರ್ಚಿಸಿದ್ದಾರೆ. ವಿಜಯ ಸುಬ್ಬರಾಜ್‌ರವರು ಒಬ್ಬ ಮಹಿಳಾ ಲೇಖಕಿಯಾಗಿ ಅಂಡಮಾನ್‌ನ್ನು ಕಂಡಿರುವ ಬಗ್ಗೆಯೂ ಓದುಗರಲ್ಲಿ ರೋಚಕತೆಯನ್ನು ಮೂಡಿಸುತ್ತದೆ. ಮತ್ತು ಅಂಡಮಾನ್ ಪ್ರವಾಸಕ್ಕೆ ತೆರಳುವವರಿಗೆ ಹೊಸ ಉತ್ಸಾಹವನ್ನು ಮೂಡಿಸುವುದರಲ್ಲಿ ತನ್ನದೆ ಆದ ಪ್ರಾಮುಖ್ಯತೆಯನ್ನು ಹಾಗೂ ಗಮನಾರ್ಹ ಪಾತ್ರವನ್ನು ವಹಿಸುತ್ತದೆ ಎಂದರೆ ತಪ್ಪಾಗಲಾರದು.

ವಿಜಯಸುಬ್ಬರಾಜ್‌ರವರು ಅಂಡಮಾನ್‌ನ್ನು ತುಂಬು ಕಣ್ಣುಗಳಿಂದ ಕಂಡು ಆಸ್ವಾದಿಸಿ ಅಂಡಮಾನಿನ ಅಂತರಂಗವನ್ನು ಸ್ಪರ್ಶಿಸುವಂತಹ ಭಾಷೆಯಲ್ಲಿ ಇಡೀ ಅಂಡಮಾನಿನ ಸೌಂದರ್ಯರಾಶಿಯ ವರ್ಣನೆಗೆ ತೊಡಗಿರುವುದನ್ನು ಅವರ ಕೃತಿಯಲ್ಲಿ ಪ್ರಮುಖವಾಗಿ ಕಾಣಬಹುದಾಗಿದೆ ಎಂದರೆ ಬಹುಶಃ ಅತಿಶಯೋಕ್ತಿಯಾಗಲಾರದು. ಹೀಗೆ ಮೇಲಿನ ನಾಲ್ಕು ಕೃತಿಗಳು ಪ್ರವಾಸ ಸಾಹಿತ್ಯಕ್ಕೆ ಸಲ್ಲಿಸುತ್ತಿರುವ ಕೊಡುಗೆಯನ್ನು ಶ್ಲಾಘಿಸುತ್ತಾ ಅಂಡಮಾನ್‌ನ್ನು ಹೊಸ ಕಂಗಳ ಕಿರಣಗಳಿಂದ ನೋಡಲು ಪ್ರೇರೇಪಿಸುವ ಈ ಕೃತಿಗಳು ಸಾಕಷ್ಟು ಯಶಸ್ಸನ್ನು ಗಳಿಸಿವೆ ಎಂದರೆ ತಪ್ಪಾಗಲಾರದು. ಇದೇ ರೀತಿಯಾಗಿ ಈ ನಾಲ್ಕು ಪ್ರವಾಸ ಕೃತಿಗಳ ಜೊತೆಯಲ್ಲಿ ನಡೆಸಿರುವ ಅನುಸಂಧಾನದ ಕ್ರಮವು ಕಥನಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಹೊತ್ತುವ ಮೂಲಕ ವಿಶಿಷ್ಟವಾದ ಕೊಡುಗೆಯನ್ನು ನೀಡುವಲ್ಲಿ ಯಶಸ್ವಿಯಾಗಿವೆ ಎಂದರೆ ತಪ್ಪಾಗಲಾರದು.

ಇದುವರೆಗೆ ಪ್ರವಾಸ ಕಥನದ ಸ್ವರೂಪದ ಬಗ್ಗೆ ಕೆಲವು ಗುಣಾತ್ಮಕ ಅಂಶಗಳನ್ನು ವಿಚಾರ ಮಾಡಿದೆ. ಇನ್ನು ಮುಂದೆ ಒಂದೆರಡು ನಕರಾತ್ಮಕ ಅಂಶಗಳನ್ನೂ ಹೇಳಬಹುದು. ಪ್ರವಾಸವನ್ನು ಸಂತೋಷದಿಂದ ಸವಿಯಲು, ಹಾಗೆ ಸವಿದದ್ದನ್ನು ತಿಳಿಸಲು ಪ್ರವಾಸಿ ಹಾಗೂ ಪ್ರವಾಸ ಕಥನಕಾರ ಇಬ್ಬರಲ್ಲೂ ಈ ದೌರ್ಬಲ್ಯಗಳು ಇಣುಕಬಾರದು. ಪ್ರವಾಸಿಗೆ ಯಾವುದೇ ಬಗೆಯ ಪೂರ್ವಾಗ್ರನ ಅಥವಾ ತನ್ನ ಜೀವನ ದೃಷ್ಟಿ, ಜೀವನ ವಿಧಾನದ ಬಗ್ಗೆ ದುರಭಿಮಾನ ಇರಬಾರದು. ಅದು ಪ್ರವಾಸವನ್ನು ಆಹ್ಲಾದಕಾರಿಯಾಗಿಸುವುದರ ಬದಲು ಪ್ರಯಾಸವಾಗಿಬಹುದು. ಅಹಂಕಾರ ಅನುಭವದ ಸ್ವಾರಸ್ಯವನ್ನು ಹಾಳು ಮಾಡುತ್ತದೆ. ನಿರ್ಮಲವಾದ ಹೃದಯ, ಮುಕ್ತ ಮನಸ್ಸು, ಸ್ವಾರಸ್ಯ ಕಾಣುವ ಕಣ್ಣು ಇರಬೇಕು. ಪೂರ್ವಗ್ರಹ, ಇಷ್ಟಾನಿಷ್ಟಗಳು ಎಲ್ಲರಿಗೂ ಇರುತ್ತವೆ. ಆದರೆ ಅದು ಅಬ್ಸೆಷನ್-ಗೀಳಾಗಬಾರದು. ಅದು ಪ್ರವಾಸನುಭವಕ್ಕೆ ಅಡಚಣೆ ಮಾತ್ರವಲ್ಲ ಬರೆವಣಿಗೆಯ ಸ್ವಾರಸ್ಯವನ್ನು ಹಾಳು ಮಾಡುತ್ತದೆ. ಪ್ರೊ.ದೇ.ಜ.ಗೌ. ಅವರ 'ವಿದೇಶದಲ್ಲಿ ಎರಡು ವಾರ' ಪ್ರವಾಸ ಕಥನದಲ್ಲಿ ಉದ್ದಕ್ಕೂ ವಿದೇಶಿ ಶೌಚದ ಬಗೆಗಿನ ಅಸಹನೆ ಬಗೆ ಬಗೆಯಾಗಿ ನಿರೂಪಿತವಾಗಿದೆ. ಒಮ್ಮೆ ಪ್ರಾರಂಭದಲ್ಲಿ, ಭಾರತೀಯರಾದ ನಮ್ಮ ಪದ್ಧತಿ, ರೂಢಿಗೆ ಒಗ್ಗದ ಶೌಚಕ್ರಿಯೆ ನಗೆ ತರಬಹುದಾದರೂ ಮತ್ತೆ ಮತ್ತೆ ವರ್ಣಿತವಾದಾಗ ಬೇಸರತರುತ್ತದೆ. ಇಂಥದೇ ಪ್ರಸಂಗವನ್ನು ಬಿ.ಜಿ.ಎಲ್. ಸ್ವಾಮಿಯವರು 'ಅಮೆರಿಕದಲ್ಲಿ ನಾನು' ಕೃತಿಯಲ್ಲಿ ಪ್ರಾರಂಭದಲ್ಲಿ ಹಡಗಿನ ಕಮೋಡ್‌ಗಳ ಕಷ್ಟವನ್ನು ವಿನೋದ ಪ್ರಸಂಗವಾಗಿ ಪರಿವರ್ತಿಸಿ, ತಮ್ಮ ಹಾಸ್ಯ ದೃಷ್ಟಿಯಿಂದ ಸ್ವಾರಸ್ಯಪೂರ್ಣವಾಗಿ ವಿವರಿಸುತ್ತಾರೆ. ಅದಾದ ನಂತರ ಮತ್ತೆ ಆ ಬಗ್ಗೆ ಚಕಾರ ಎತ್ತುವುದಿಲ್ಲ. ಒಮ್ಮೆ ಪರಿಚಯಿಸಿ ಆಯಿತು, ಸಾಕು. ಹಾಗೇ ಕೆಲವರಲ್ಲಿ ಶಾಕಾಹಾರದ ತಳಮಳ. ವಿದೇಶಗಳಲ್ಲಿ ಸಸ್ಯಾಹಾರಿಗಳ ಪಾಡು ಸಹನೆಯ ಪರೀಕ್ಷೆಯಾಗುತ್ತದೆ. ಆದರೆ ಹೆಜ್ಜೆ ಹೆಜ್ಜೆಗೂ ಪುಟಪುಟಕ್ಕೂ ಅದೇ ತುಂಬಿಹೋಗಬಾರದು. ಅಂತೆಯೇ ಅತಿರಂಜಿತ ಮಾಂಸಾಹಾರ ವರ್ಣನೆ. ಸಹಜ ಸ್ವಾಭಾವಿಕ ವರ್ಣನೆ ನಿರೂಪಣೆ ಆಸಕ್ತಿ ಹೆಚ್ಚಿಸಬಲ್ಲುದೇ ಹೊರತು ತಗ್ಗಿಸುವುದಿಲ್ಲ.

ಅಂಕಿ-ಅಂಶ, ದಾಖಲೆ ಬಗ್ಗೆ ಅತಿವ್ಯಾಮೋಹವೂ ಕಥನಕ್ಕೆ ಭಂಗ ತರುತ್ತದೆ. ಈ ವಿವರ ಅಲ್ಪಸ್ವಲ್ಪ ಇದ್ದರೆ ಕುತೂಹಲ ಕೆರಳಿಸುತ್ತದೆ. ಬೆರಗು ಮೂಡಿಸುತ್ತದೆ. ಅತಿ ವಿವರ ದಾಖಲೆಯಾಗಿಬಿಡುತ್ತದೆ. ಎಚ್.ಎಲ್. ನಾಗೇಗೌಡ 'ನಾ ಕಂಡ ಪ್ರಪಂಚ', ಗೊರೂರರ 'ಅಮೆರಿಕದಲ್ಲಿ ಗೊರೂರು' ಕೃತಿಗಳಲ್ಲೂ ಈ ದೋಷ, ದೌರ್ಬಲ್ಯ ಕಾಣಸಿಗುತ್ತದೆ. ಪ್ರೇಕ್ಷಣೀಯ ಸ್ಥಳಗಳು ಅನುಭವಕ್ಕಾಗಿ ದಕ್ಕಬೇಕು. ಚರಿತ್ರೆ ಅಥವಾ ಭೂಗೋಳ ಶಾಸ್ತ್ರವಾಗಿಯಲ್ಲ. ಕೆಲವು ಪ್ರವಾಸ ಕಥನಗಳಲ್ಲಿ ಈ ಬಗೆಯ ವಿವರಗಳೇ ತುಂಬಿರುವುದನ್ನೂ ಕಾಣಬಹುದು. ವೈಭವೀಕರಣ

ಹೇಗೆ ದೋಷವಾಗಬಲ್ಲುದೋ ಹಾಗೆಯೇ ಅವ್ಯವಧಾನ, ನಿರ್ಲಕ್ಷ್ಯ, ನಿರಾಸಕ್ತಿಗಳೂ ಪ್ರವಾಸಿಗೂ, ಪ್ರವಾಸ ಕಥನದ ಆಕರ್ಷಣೆಗೂ ಧಕ್ಕೆಯುಂಟುಮಾಡಬಲ್ಲುವು.

ಪ್ರವಾಸಿ ಅಥವಾ ಪ್ರವಾಸ ಕಥನಕಾರನ ಭಿನ್ನ ದೃಷ್ಟಿಕೋನ, ವಿಶಿಷ್ಟ ವ್ಯಕ್ತಿತ್ವದ ಕಾರಣ ದೇಶವನ್ನು ಕುರಿತು ಪ್ರವಾಸ ಸಾಹಿತ್ಯ ಕೃತಿಗಳಲ್ಲೂ ವೈವಿಧ್ಯ ಕಂಡು ಬರುತ್ತದೆ. ಈ ವೈವಿಧ್ಯಕ್ಕೆ ಪ್ರವಾಸ ಹೋಗುವ ಉದ್ದೇಶಗಳೂ ಕಾರಣವಾಗುತ್ತವೆ. ಆ ದೃಷ್ಟಿಯಿಂದ ಸಾಹಿತ್ಯವನ್ನು ವರ್ಗೀಕರಿಸಲು ಪ್ರವಾಸ ಸಾಧ್ಯವಿದೆ.

ಒಂದು, ಪ್ರವಾಸಕ್ಕಾಗಿಯೇ ಪ್ರವಾಸ ಮಾಡುವ, ಬೇರೆ ದೇಶ, ಬೇರೆ ಜನ, ಬೇರೆ ಸಮಾಜ, ಪ್ರೇಕ್ಷಣೀಯ ಸ್ಥಳಗಳನ್ನು ನೋಡ ಹೋಗುವ ಪ್ರವಾಸಿಗಳ ಕಥನ. ಇವುಗಳಲ್ಲೂ ಎರಡು ಬಗೆಯನ್ನು ಕಾಣಬಹುದು. ಅಲ್ಪಾವಧಿಯಲ್ಲಿ 'ಯಾತ್ರಾ ವಿಶೇಷ' ಸೌಲಭ್ಯ ಪಡೆದವರು ಒಂದು ಬಗೆ. ಇದು ಪ್ರೇಕ್ಷಣೀಯ ಸ್ಥಳಗಳಿಗೆ ಆರಿಸಿದ ಸ್ಥಳಗಳಿಗೆ ವ್ಯವಸ್ಥಾಪಕರ ಮಾರ್ಗದರ್ಶನದಲ್ಲಿ ನಡೆವ ಪ್ರವಾಸ. ಕಣ್ಣ ಪಟ್ಟಿಯ ಕುದುರೆಯ ನೋಟ. ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡು ಹೋದರೂ ಕಾಲ, ಹಣದ ಒತ್ತಡಗಳಿಂದ, ಅವ್ಯವಧಾನ ಮತ್ತು ನೋಡುದ ದೃಷ್ಟಿಯಲ್ಲಿನ ಕಾರಣ ಇಂಥಲ್ಲಿ ಅನುಭವ ಆಳಕ್ಕೆ ಇಳಿಯುವುದಿಲ್ಲ. ಕೆಲವು ಪ್ರವಾಸಿಗರ ಮನಸ್ಸಿನ ತುಡಿತ, ಉದ್ದೇಶ, ವ್ಯಕ್ತಿತ್ವದ ದೆಸೆಯಿಂದ ಉತ್ತಮ ಪ್ರವಾಸಾನುಭವ ಸಾಧ್ಯ. ಆ ಪೂರ್ವ ಪಶ್ಚಿಮ, ಅಮೆರಿಕೆಯಲ್ಲಿ ಗೊರೂರು, ಅಮೆರಿಕದಲ್ಲಿ ನಾನು-ಶಾಂತಿ, ನಾ ಕಂಡ ಪ್ರಪಂಚ ಮುಂತಾದವು ಈ ಬಗೆಗೆ ಸೇರುತ್ತವೆ. ಜನ ಜೀವನಕ್ಕೆ ಆಳಕ್ಕೆ ಇಳಿಯಲು, ಸೂಕ್ಷ್ಮವಾಗಿ ಗ್ರಹಿಸಲು, ಕಂಡುದನ್ನು ಮೆಲುಕು ಹಾಕಿ ಅನುಭವಿಸಲು ಈ ಬರಹಗಾರರಿಗೆ ಸಾಧ್ಯ ಎನಿಸುತ್ತದೆ.

ಎರಡು, ಅಧ್ಯಯನ ಪ್ರವಾಸಕ್ಕೆ ಸಂಬಂಧಿಸಿದ್ದ. ಶಿಕ್ಷಣ ನಿಮಿತ್ತವಾಗಿ ಕೆಲವು ತಿಂಗಳು ಅಥವಾ ಒಂದೆರಡು ವರ್ಷ ವಿದೇಶಗಳಲ್ಲಿ ಇರುವ ಅವಕಾಶಗಳು ಬರಬಹುದು. ಮಕ್ಕಳು ಅಥವಾ ನೆಂಟರು ವಿದೇಶಗಳಲ್ಲಿ ನೆಲಸಿದ್ದಾಗ ಕೆಲಕಾಲ ಆರಾಮವಾಗಿ ಪ್ರವಾಸ ಅನುಭವಗಳಿಗಿಂತ ಭಿನ್ನಸ್ವರೂಪದ್ದಾಗಿರುತ್ತದೆ. ಅಧ್ಯಯನ ಪ್ರವಾಸಕ್ಕೆ ಸಂಬಂಧಿಸಿದಂತೆ ಹೊ. ಶ್ರೀನಿವಾಸಯ್ಯನವರು 'ನಾ ಕಂಡ ಜರ್ಮನಿ'ಯಲ್ಲಿ ಹೇಳುವ ಮಾತನ್ನು ಉಲ್ಲೇಖಿಸಬಹುದು: "ಹೋಟೆಲ್ಲುಗಳಲ್ಲಿ ಇದ್ದು ಬಂದರೆ ಜನರ ಜೀವನ ತಿಳಿಯುವುದಿಲ್ಲ." ಬಿ.ಜಿ.ಎಸ್. ಸ್ವಾಮಿಯವರ 'ಅಮೆರಿಕದಲ್ಲಿ ನಾನು', ಕೃಷ್ಣಾನಂದ ಕಾಮತ್ ಅವರ 'ನಾನೂ ಅಮೆರಿಕೆಗೆ ಹೋಗಿದ್ದೆ', ಎ.ಎನ್. ಮೂರ್ತಿರಾಯರ 'ಅಪರವಯಸ್ಕನ ಅಮೆರಿಕಾಯಾತ್ರೆ ಮುಂತಾದವು ಈ ವರ್ಗಕ್ಕೆ ಸೇರುತ್ತವೆ.

ಮೂರು, ಧಾರ್ಮಿಕಯಾತ್ರೆಗಳು. ಬಹುಶಃ ಪ್ರವಾಸದ ಮೂಲ ಕಾರಣ, ಮೂಲಸ್ವರೂಪದಲ್ಲಿ ಧಾರ್ಮಿಕ ಯಾತ್ರೆಗಳೇ ಪ್ರಾಚೀನವಾದವು. ಭಾರತೀಯರಿಗೆ ಇದು ಹೊಸತಲ್ಲ. ಪ್ರವಾಸಿಯ ಸ್ವಭಾವ, ಅನುಭವಗಳ ಆಳ ವಿಸ್ತಾರದ ಮೇಲೆ ಧಾರ್ಮಿಕ ಯಾತ್ರೆಯ ಕಥನ ಸ್ವಾರಸ್ಯ ಅವಲಂಬಿಸಿರುತ್ತದೆ. ಇಲ್ಲವೆ, ನಿರೂಪಣೆ ಶುಷ್ಕವಾಗುವ ಸಂಭವ ಹೆಚ್ಚು. ಸ್ವಾಮಿ ಸೋಮನಾಥಾನಂದರ ಸೊಗಸಾದ ಎರಡು ಪ್ರವಾಸ ಕಥನಗಳಿವೆ. ಅಮರನಾಥಯಾತ್ರೆ, ಹೈಮಾಚಲದ ಸಾನಿಧ್ಯದಲ್ಲಿ. ಈ ವರ್ಗಕ್ಕೆ ಸೇರುವ ಇನ್ನೊಂದು ಕೃತಿ ಡಾ॥ ಜಿ.ಎಸ್. ಶಿವರುದ್ರಪ್ಪನವರ 'ಗಂಗೆಯ ಶಿಖರಗಳಲ್ಲಿ' ಇದಕ್ಕೆ ವೈದೃಶ್ಯವಾಗಿ ಅವರದೇ ಇನ್ನೊಂದು ಪ್ರವಸ ಕಥನ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು'. ಒಂದರಲ್ಲಿ ಕವಿಯ ಹೃದಯ ಸ್ಪಂದನ, ವ್ಯಕ್ತಿತ್ವ ಮುದ್ರೆಯಿದ್ದರೆ, ಇನ್ನೊಂದು ಯಾರದೇ ಅನುಭವವಾಗಬಹುದಾದ ರೀತಿಯಲ್ಲಿದೆ.

ನಾಲ್ಕನೆಯ ಬಗೆಯನ್ನು ಇಲ್ಲಿ ಉದ್ದೇಶಪೂರ್ವಕವಾಗಿ ಉಲ್ಲೇಖಿಸುತ್ತಿದ್ದೇನೆ. ಕನ್ನಡದಲ್ಲಿ ಆ ಬಗೆಯ ಕೃತಿ ಬಂದಿಲ್ಲ. ಜಾನ್ ವೈಲ್ಸ್ ಎಂಬಾತನ 'ಡೆಲ್ಲಿ ಈಸ್ ಫಾರ್ ಎವೇ' ಎಂಬ ಕೃತಿ ವಿಚಿತ್ರ ಅನುಭವವನ್ನು ಕೊಡುತ್ತದೆ. ಭಾರತವನ್ನೇ ಕುರಿತ ಪ್ರವಾಸ ಕಥನವಾದರೂ ಆ ವಿದೇಶಿ ಪ್ರವಾಸಿ ಜೇಬಲ್ಲಿ ಹಣ ತಾರದೇ ಬಹುವಾಗಿ ಕಾಲು ನಡಿಗೆಯಿಂದ, ಅತ್ಯಂತ ಕಡಿಮೆ ದರ-ಮಟ್ಟದ ಹೋಟೆಲ್‌ಗಳಲ್ಲಿ ತಂಗಿ, ಹಳ್ಳಿಗಳನ್ನೂ ಹೊಕ್ಕು, ಪ್ರೇಕ್ಷಣೀಯ ಸ್ಥಳಗಳನ್ನು, ಪುರಾತನ ಸ್ಮಾರಕ, ಐತಿಹಾಸಿಕ ಸ್ಥಳಗಳನ್ನೂ ನೋಡುತ್ತ, ಅಂತೆಯೇ ಭಾರತದ ಬಹುಪಾಲು ಬಡವರ ಸಂಕಷ್ಟ ಬದುಕಿನ ಅನುಭವವನ್ನು ದೇಶವೆಲ್ಲ ಸುತ್ತಿ ಪಡೆಯುತ್ತಾನೆ. ಭಾರತದ ಬೆಳಕಿನಾಚೆಯ ಇನ್ನೊಂದು ಮುಖದ ದರ್ಶನವಾಗುತ್ತದೆ.

ಕೊನೆಯದಾಗಿ, ಪ್ರವಾಸ ಕಥನದ ವೈಶಿಷ್ಟ್ಯಕ್ಕೆ ಸಂಬಂಧಿಸಿದಂತೆ ಇನ್ನೊಂದು ಅಂಶದ ಕಡೆ ನಿಮ್ಮ ಗಮನ ಸೆಳೆಯಬೇಕಿದೆ. ಇದನ್ನು ಮತ್ತೊಂದು ಬಗೆ, ವರ್ಗ ಎಂದು ಭಾವಿಸಬೇಕಿಲ್ಲ. ಪ್ರವಾಸಿಯ ಅಭಿರುಚಿ, ಆಸಕ್ತಿ, ವೃತ್ತಿ, ಪ್ರವೃತ್ತಿಯ ಕಾರಣವಾಗಿ ಆತನ ವ್ಯಕ್ತಿತ್ವದ ಮುದ್ರೆ ಪ್ರವಾಸ ಕಥನದಲ್ಲಿ ಕಾಣಬರುತ್ತದೆ. ಆ ಕಾರಣವೇ ಅಮೆರಿಕೆಯನ್ನು ಕುರಿತು ಸುಮರು ಮೂವತ್ತು ಪುಸ್ತಕಗಳು ಇದ್ದರೂ ಕೆಲವಾದರೂ ತಮ್ಮ ವೈಶಿಷ್ಟ್ಯದಿಂದ ಒಂದೇ ದೇಶದ ಹಲವು ಮುಖಗಳ ಪರಿಚಯ ಮಾಡಿಕೊಡುತ್ತವೆ. ಎಷ್ಟೋ ವೇಳೆ ಇದು ಯಾರ ಪ್ರವಾಸ ಕಥನ ಎಂಬುದರಿಂದಲೇ ಕೃತಿಯ ಒತ್ತು, ವೈಶಿಷ್ಟ್ಯವನ್ನು ಹೇಳಬಹುದು.

ಹಿಂದೆ ಯಾರಾದರೂ ಕಾಶೀಯಾತ್ರೆಗೆ ಹೊರಡುತ್ತಾರೆ ಎಂದರೆ ಅವರು ವಯಸ್ಸಾದವರು ಜೀವನದ ಕೊನೆಯ ಪರ್ವದಲ್ಲಿ ಇದ್ದವರು ಎಂದು ಅರ್ಥವಾಗುತ್ತಿತ್ತು. ಅಂಥವರು ಯಾತ್ರೆಗೆ ಹೊರಟರೆ ಮನೆಯವರ ಸಂಬಂಧಿಕರ ಮನಸ್ಸುಗಳೆಲ್ಲಾ ತಳಮಳಗೊಳ್ಳುತ್ತಿದ್ದವು. ಒಳಗೊಳಗೇ ಕಣ್ಣೀರು ಹಾಕುತ್ತ ಅವರನ್ನು ಬೀಳ್ಕೊಡುತ್ತಿದ್ದರು. ಕಾರಣ ಆ ವ್ಯಕ್ತಿ ಸುರಕ್ಷಿತವಾಗಿ ಹಿಂತಿರುಗಿ

ಬರುತ್ತಾನೆ ಎನ್ನುವ ಭರವಸೆ ಇರುತ್ತಿರಲಿಲ್ಲ. ಅಂದಿನ ರಸ್ತೆಗಳು, ಸಾರಿಗೆ ವ್ಯವಸ್ಥೆಗಳು, ಊಟ, ಉಳಿದುಕೊಳ್ಳುವ ಇತರ ಸೌಲಭ್ಯಗಳು, ತೊಂದರೆಗಳು ಚಿಂತೆಗೆ ಎಡೆ ಮಾಡಿಕೊಡುತ್ತಿದ್ದವು. ಇಷ್ಟಕ್ಕೂ ತೀರ್ಥಯಾತ್ರೆಗಳಿಗೆ ವೃದ್ಧರೇ ಹೋಗಬೇಕೆನ್ನುವ ಕಲ್ಪನೆ ಇತ್ತು. ಇಂದು ಆ ಎಲ್ಲ ಆತಂಕಗಳನ್ನು ದೂರ ಮಾಡಲು ಯಾವ ವಯಸ್ಸಿನವರೂ ಎಲ್ಲಿ ಬೇಕೆಂದಲ್ಲಿಗೆ ಅಡ್ಡಾಡಬಹುದಾಗಿದೆ. ಅದಕ್ಕೆ ಕಾರಣ ಆರಾಮವಾಗಿ ಹೋಗಿಬರಲು ಬಸ್ಸು, ಕಾರು, ರೈಲು, ಹಡಗು, ವಿಮಾನ ಕೆಲವೇ ಗಂಟೆಗಳಲ್ಲಿ ಜಗತ್ತಿನ ಮೂಲೆ ಮೂಲೆ ತಲುಪವಂತಾಗಿದೆ. ಜಗತ್ತು ಕಿರಿದಾಗಿ ಕಾಣಿಸುತ್ತಿದೆ.

ಇಂದು ಜಗತ್ತಿನಾದ್ಯಂತ ಪ್ರವಾಸಿಗರು ದೇಶ ವಿದೇಶಗಳನ್ನು ನೋಡಲು ಕುತೂಹಲ ಬೆಳೆಸಿಕೊಳ್ಳುತ್ತಿದ್ದಾರೆ. ಇದರೊಳಗೆ ಅನೇಕ ಕಾರಣಗಳನ್ನು ಎದುರಿಗಿಟ್ಟುಕೊಂಡು ತಮ್ಮ ದೈಹಿಕ, ಆರ್ಥಿಕ, ಮಾನಸಿಕಗಳ ಹಿನ್ನೆಲೆಯಲ್ಲಿ ಸುತ್ತಾಡುತ್ತಿದ್ದಾರೆ. ಉದಾಹರಣೆಗೆ ವಿದ್ಯಾರ್ಥಿಗಳಾದರೆ ವಿದ್ಯಾಭ್ಯಾಸಕ್ಕೆ, ಉದ್ಯೋಗಿಗಳಾದರೆ ಉದ್ಯೋಗಕ್ಕೆ, ಸಂಬಂಧಿಗಳಿದ್ದರೆ ದೂರದೇಶದಲ್ಲಿರುವ ಮಗಳೋ ಸೊಸೆಯದೋ ಹೆರಿಗೆಯ ಸಂದರ್ಭಕ್ಕೆ, ರೋಗಿಗಳಿದ್ದರೆ ವಿಶ್ರಾಂತಿಗೆಂದು ವಿಹಾರಧಾಮಗಳಿಗೆ, ಹಣವಂತರಿದ್ದರೆ ಮನರಂಜನೆಗಾಗಿ, ಹೀಗೆ ಮುಂತಾದವುಗಳಿಗಾಗಿ ಎಂದು ಹೇಳಬಹುದು. ಪ್ರವಾಸದ ಅನೇಕ ಕಾರಣಗಳನ್ನು ನಾವು ಗುರುತಿಸುತ್ತಿದ್ದಂತೆಯೇ ಈಗ ರಾಷ್ಟ್ರ ಅಂತರಾಷ್ಟ್ರ ಮಟ್ಟದಲ್ಲಿ ಅದೊಂದು ದೊಡ್ಡ ಪ್ರವಾಸಿ ಜಾಲವೇ ಬೆಳೆಸಿ ಅದರಿಂದ ಕೋಟ್ಯಾಂತರ ಹಣಗಳಿಸುವ ಉದ್ದಿಮೆದಾರರು ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸುತ್ತಿದ್ದಾರೆನ್ನುವುದು ಆಶ್ಚರ್ಯಪಡುವ ಸಂಗತಿಯೇ ಆಗಿದೆ.

'ದೇಶ ನೋಡು, ಕೋಶ ಓದು' ಎಂಬ ಗಾದೆ ಮಾತು ನಮ್ಮಲ್ಲಿ ಪ್ರಸಿದ್ಧವಾಗಿದೆ. ಹಾಗೆಯೇ ಹಕ್ಕಿಯಂತೆ ಹಾರಾಡಿ ಹುಲ್ಲೆಯಂತೆ ನಡೆದಡಿ, ಮೀನಿನಂತೆ ತೇಲಾಡಿ ಹೊರನೋಟ ಹೊರ ಜಗತ್ತನ್ನು ಕಾಣು, ಅನುಭವಿಸು, ಆನಂದಿಸು, ವಿಚಾರಿಸು, ವಿಮರ್ಶಿಸು, ತರ್ಕಿಸು ಎಂದೂ ಹೇಳಬಹುದು. ನಮ್ಮ ಪ್ರಾಚೀನ ಭಾರತೀಯ ಪಂಡಿತರಿಗೆ ಕೋಶ ಓದುವ ಬರೆಯುವ ಪ್ರೀತಿಯೇ ಹೆಚ್ಚಾಗಿತ್ತು. ಪ್ರವಾಸಿಸುವ ಅದನ್ನು ಬರೆಯುವ ಪ್ರವೃತ್ತಿ ಅವರಲ್ಲಿ ಅಷ್ಟಾಗಿ ಕಾಣಿಸಿಲ್ಲವಾದರೂ ಅಲ್ಲಲ್ಲಿ ರಾಜರ ಜೊತೆಗೆ ದಂಡಯಾತ್ರೆಗಳಿಗೆ ಹೋದಾಗಿನ ಕೆಲವು ನಿಸರ್ಗ ಅನುಭವಗಳನ್ನು ಕಾವ್ಯದಲ್ಲಿ ಹೇಳಿದ್ದಾರೆ ಅಷ್ಟೆ.

# ಅಧ್ಯಾಯ – ೧೧

## ಸಾಧ್ಯತೆಗಳು

ಈ ಅಧ್ಯಯನದ ಕುರಿತಾದ ಸಾಧ್ಯತೆಗಳನ್ನು ವಿವರಿಸುವುದಾದರೆ ಪ್ರವಾಸ ಸಾಹಿತ್ಯವು ಹೊಸ ಹೊಸ ಸಾಧ್ಯತೆಗಳಿಗೆ ತನ್ನನ್ನು ತಾನು ತೆರೆದುಕೊಳ್ಳಬೇಕಾದ ಅನಿವಾರ್ಯತೆ ಯಾವ ಮಟ್ಟಿಗೆ ತನ್ನ ಸಾದೃಷ್ಯ ನೋಟಗಳಿಂದ ಇಲ್ಲಿ ಕಂಡು ಬಂದಿದೆ ಎಂಬುದು ಇಲ್ಲಿನ ಅಧ್ಯಯನದಲ್ಲಿ ಕಾಣಸಿಗುವ ಪ್ರಮುಖವಾದ ಅಂಶವಾಗಿದೆ.

ಪ್ರವಾಸದ ಕುರಿತಾದ ಮೂಲಭೂತ ಚಿಂತನೆಗಳನ್ನು ಮೀರಿ ತನ್ನದೇ ಆದ ಅಸ್ಮಿತೆಯನ್ನು ಉಳಿಸಿಕೊಳ್ಳುವಲ್ಲಿ **'ಪ್ರವಾಸ ಸಾಹಿತ್ಯ'**ವು ತನ್ನನ್ನು ತಾನು ಮತ್ತಷ್ಟು ಅನಾವರಣಗೊಳಿಸಿ ಕೊಳ್ಳುವಂತಹ ಸಾಗಬೇಕಾದ ಅನಿವಾರ್ಯತೆಯನ್ನು ಇಲ್ಲಿ ಗುರುತಿಸಬಹುದಾಗಿದೆ.

- ಪ್ರಸ್ತುತ ಸಂದರ್ಭದಲ್ಲಿ ಪ್ರವಾಸಕ್ಕೆ ಹೋಗಿಬಂದವರು ತಮ್ಮ ಅನುಭವಗಳನ್ನು ಅಂತರ್ಜಾಲ ತಾಣಗಳಲ್ಲಿ ಮತ್ತು ಬ್ಲಾಗ್‌ಗಳಲ್ಲಿ ಬರೆದು ಸಹೃದಯರೊಂದಿಗೆ ಹಂಚಿಕೊಳ್ಳುತ್ತಿದ್ದಾರೆಯೇ ಹೊರತು ಅದನ್ನು ಹೊರತುಪಡಿಸಿ ಪ್ರವಾಸ ಸಾಹಿತ್ಯದ ಕೃತಿಗಳು ಮುದ್ರಣಗೊಂಡು ಪ್ರವಾಸವನ್ನು ಕೂಡ ಸಾಹಿತ್ಯದ ಅಂಗವಾಗಿಯೇ ಪರಿಗಣಿಸುವ ಕ್ರಮ ಬೆಳೆಯಬೇಕು. ಪ್ರವಾಸ ಸಾಹಿತ್ಯದ ಮಟ್ಟಿಗೆ ತೌಲನಿಕ ಅಧ್ಯಯನಗಳು ಎಷ್ಟರ ಮಟ್ಟಿಗೆ ಮತ್ತೊಂದು ಭಿನ್ನ ನೋಟದ ಕ್ರಮವನ್ನು ಕಟ್ಟಿಕೊಡುವಲ್ಲಿ ತಮ್ಮದೇ ಆದ ವಿಶಿಷ್ಟ ಪಾತ್ರಗಳನ್ನು ವಹಿಸಬೇಕು.

- ಪ್ರವಾಸ ಕೃತಿಗಳ ವಿಷಯಕ್ಕೆ ಬಂದಾಗ ಮುಖ್ಯವಾಗುವ ಮತ್ತೊಂದು ಅಂಶವೆಂದರೆ ಪ್ರವಾಸವೆನ್ನುವುದು ಇಂದು ಪಿಕ್‌ನಿಕ್, ಜಾಲಿರೈಡ್, ರೇವ್ ಪಾರ್ಟಿಗಳಂತಹ ಆಧುನಿಕ ಪರಿಕಲ್ಪನೆಗಳ ನಡುವಿನಲ್ಲಿ ತಳೆಯಬೇಕಾದ ಸ್ವಚ್ಛನಿಲುವಿನ ಬಗ್ಗೆ ಚಿಂತನೆಯನ್ನು ಉಂಟು ಮಾಡುವಂತಹ ಆಯಾಮಗಳಾಗಿ ಕಂಡು ಬರಬೇಕಾಗಿದೆ.

- ಪ್ರವಾಸ ಕೃತಿಗಳು ಮನರಂಜನೆಯ ದೃಷ್ಟಿಕೋನದಿಂದ ರಚನೆಯಾಗದೆ ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕವಾಗಿಯೂ ಕೂಡ ತಮ್ಮದೇ ಆದ ಛಾಪನ್ನು ಒತ್ತುವಂತಹ ಕೃತಿಗಳಾಗಿ ರಚಿತಗೊಂಡು ಪ್ರವಾಸ ಸಾಹಿತ್ಯದ ಉತ್ಕೃಷ್ಟತೆಗೆ ನೆರವಾಗಬೇಕಾಗಿದೆ.

- ಪ್ರವಾಸ ಸಾಹಿತ್ಯದ ಕೃತಿಗಳು ಸಿದ್ದಮೌಲ್ಯಗಳನ್ನು ಒಳಗೊಂಡು ವಿವರಗಳಲ್ಲಿ ನರಳುವ ಬದಲು ಸಿದ್ಧಮೌಲ್ಯಗಳನ್ನು ಮೀರಿ ತಮ್ಮದೇ ಆದ ಅಸ್ಮಿತೆಯನ್ನು ಪ್ರವಾಸ ಸಾಹಿತ್ಯದಲ್ಲಿ ರೂಪಿಸಬೇಕಾದ ಅನಿವಾರ್ಯತೆ ಇಂದು ಎದುರಾಗಿದೆ.

- ಪ್ರವಾಸ ಕೃತಿಗಳು ಮುಂಬರುವ ಯುವಜನಾಂಗಕ್ಕೆ ಸಾಹಿತ್ಯಕ ಹಾಗೂ ಪ್ರವಾಸದ ಪರಿಕಲ್ಪನೆಯನ್ನು ಮುದ್ರಿಸುವಲ್ಲಿ ತಮ್ಮದೇ ಆದ ಪ್ರಮುಖ ಪಾತ್ರವನ್ನು ವಹಿಸಬೇಕಾಗಿದೆ.

- ಪ್ರವಾಸ ಕೃತಿಗಳು ಏಕಮುಖಿ ದೃಷ್ಟಿಕೋನವನ್ನು ವ್ಯಕ್ತಪಡಿಸದೇ ಹಾಗೂ ಆ ಮನೋಭಾವದಿಂದ ಕೇವಲ ಸ್ಥಳಗಳನ್ನು ದರ್ಶಿಸುವ ಸಾಧನಗಳಾಗದೇ ಬಹುಮುಖಿ ದೃಷ್ಟಿಕೋನಗಳನ್ನು, ಚಿಂತನೆಗಳನ್ನು ಸೃಜಿಸುವ ಅಧ್ಯಯನದ ಚಿಂತನೆಗಳಾಗಬೇಕು ಎಂಬುದು ಈ ಲೇಖನದ ಪ್ರಮುಖ ಆಶಯವಾಗಿದೆ.

- ಪ್ರವಾಸ ಕೃತಿಗಳು ವರದಿಗಳಾಗುವಂತಹ ಅಪಾಯಗಳನ್ನು ಮೀರಿ ಸಾಹಿತ್ಯ ಕೃತಿಯು ಹೇಗೆ ಓದುಗರಲ್ಲಿ ರಸಾನುಭಾವವನ್ನು ಉಂಟುಮಾಡಬಲ್ಲದೋ ಅದೇ ರೀತಿಯಲ್ಲಿ ಪ್ರವಾಸ ಕೃತಿಗಳು ಕೂಡ ಮುಂದೆ ತಮ್ಮ ಕಾರ್ಯವನ್ನು ನಿರ್ವಹಿಸಬೇಕಾಗಿರುವುದು ಇಲ್ಲಿ ನಾವು ಗಮನಿಸಬೇಕಾದ ಮುಖ್ಯಾಂಶವಾಗಿ ಕಂಡು ಬರುತ್ತಿವೆ.

ಕನ್ನಡದಲ್ಲಿ ಈವರೆಗೆ ಬಂದಿರುವ ಪ್ರವಾಸ ಕಥನಗಳಲ್ಲಿ **ಬಿ.ಜಿ.ಎಲ್. ಸ್ವಾಮಿಯವರ 'ಹಸಿರುಹೊನ್ನು'** ಶೈಕ್ಷಣಿಕ ಪ್ರವಾಸ ಕೃತಿಯನ್ನು ಅವಲೋಕಿಸಿದಾಗ ಉತ್ಸಾಹಿತ ಮನೋಭಾವದ ವಿದ್ಯಾರ್ಥಿಗಳ ಅಧ್ಯಯನದ ಮನಃಸ್ಥಿತಿಯನ್ನು ಹಾಗೂ ಪ್ರಸ್ತುತ ಕೃತಿಯಾದ 'ಸ್ವರ್ಗ ದ್ವೀಪದ ಕನಸಿನ ಜೆನ್ನೇರಿ' ಎಂಬ ಶೈಕ್ಷಣಿಕ ಪ್ರವಾಸ ಕೃತಿಯಲ್ಲಿಯೂ ಸಹ ಈ ಬಗೆಯ ಮನೋಭಾವದ ಓಟ ಮುಂದುವರೆದಿರುವುದನ್ನು ಗಮನಿಸಬಹುದಾಗಿದೆ. **'ಹಸಿರುಹೊನ್ನು ಮತ್ತು ಸ್ವರ್ಗ ದ್ವೀಪದ ಕನಸಿನ ಜೆನ್ನೇರಿ'** ಎಂಬ ಕೃತಿಗಳನ್ನು ತೌಲನಿಕವಾಗಿ ನೋಡುವ ಸಂದರ್ಭದಲ್ಲಿ ಈ ಕೃತಿಯು ವಿವರಗಳಲ್ಲಿಯೇ ಕೃತಿಯನ್ನು ಕಟ್ಟಿಕೊಡುವಂತಹ ಪ್ರಯತ್ನವನ್ನು ಕೃತಿಕಾರರು ಇದರ ಹಿಂದೆ ನಿರ್ವಹಿಸಿರುವುದನ್ನು ಕಾಣಬಹುದಾಗಿದೆ. ಪ್ರಾಣಿಶಾಸ್ತ್ರದ ಅಧ್ಯಯನದ ಬರವಣಿಗೆಗಳು ಇಲ್ಲಿ ಅಷ್ಟೊಂದು ವ್ಯಾಪಕವಾಗಿ ಮೂಡಿಬಂದಿಲ್ಲ. ಹಸಿರುಹೊನ್ನು ಕೃತಿಯನ್ನು ಇಲ್ಲಿ ಗಮನಿಸಿದಾಗ ಅಧ್ಯಯನದ ವಿಚಾರಗಳು ಅಗಾಧವಾಗಿ ತಿಳಿದುಬರುತ್ತವೆ. ಅಂಡಮಾನಿನ ಪ್ರಕೃತಿ ಸೌಂದರ್ಯವೇ ಇಲ್ಲಿ ವೈಭವೀಕರಣದ ನೆಲೆಯಲ್ಲಿ ಕೃತಿಯ ಹೂರಣವನ್ನು ಆವರಿಸಿಕೊಂಡಿದ್ದು ಹೆಜ್ಜೆ ಹೆಜ್ಜೆಗೂ ಅದು ತನ್ನ ಪ್ರಭಾವವನ್ನು ಬೀರುತ್ತಿರುವುದನ್ನು ಕಾಣಬಹುದಾಗಿದೆ.

ರಹಮತ್ ತರೀಕೆರೆರವರ **'ಅಂಡಮಾನ್ ಕನಸು'** ಈ ಕೃತಿಯು ಪ್ರವಾಸದ ಸ್ಥಾಪಿತ ಮೌಲ್ಯವನ್ನು ಅನುಸರಿಸಿ ರೂಪಿತವಾದುದ್ದಲ್ಲ. ಅವರೇ ಹೇಳುವಂತೆ **'ಸಂತೆ ಮೈದಾನದಲ್ಲಿ ದನಗಳು ತಿರುಗುವಂತೆ ಅಂಡಮಾನನ್ನು ತಿರುಗಿ ಬಂದಿದ್ದೇನೆ'**. ಈ ದೃಷ್ಟಿಕೋನವು ಯಾವುದೇ ಒಂದು ಪ್ರದೇಶವನ್ನು ಪೂರ್ವ ನಿರ್ಧಾರಿತವಾದ ಮನೋಭಾವದಿಂದ ಗಮನಿಸದೆ ಬಾಯಿಗೆ

ಸಿಕ್ಕಿದ್ದನೆಲ್ಲಾ ಮೇಯುವ ತುಂಡು ದನಗಳ ರೀತಿ ಅಂಡಮಾನನ್ನು ರಹಮತ್‌ರವರು ದರ್ಶಿಸಿ ಬಂದಿದ್ದಾರೆ. ಪೂರ್ವ ನಿರ್ಧಾರಿತವಾದ ಪ್ರವಾಸವು ಯಾವುದೇ ವ್ಯಕ್ತಿಗೆ ಹೆಚ್ಚಿನ ಅನುಭವವನ್ನು, ಹೊಸಹೊಸ ದೃಷ್ಟಿಕೋನಗಳನ್ನು ಕಟ್ಟಿಕೊಡಲು ಅಸಾಧ್ಯವಾಗಬಹುದು. ಮತ್ತು ಸಾಹಿತ್ಯದ ವಿಭಾಗ ಕ್ರಮಗಳಲ್ಲಿ 'ಶಾಸ್ತ್ರ ಸಾಹಿತ್ಯ' ಮತ್ತು 'ಸೃಜನಶೀಲ ಸಾಹಿತ್ಯ'ವೆಂಬ ಎರಡು ಕವಲುಗಳಲ್ಲಿ ಶಾಸ್ತ್ರ ಸಾಹಿತ್ಯವು ಸಾಹಿತ್ಯದ ಮೂಲಾಂಶಗಳಿಗೆ ಅನುಗುಣವಾಗಿ ರಚಿತವಾಗಿರುತ್ತದೆ.

ಕುವೆಂಪುರವರ **'ಶ್ರೀರಾಮಾಯಣದರ್ಶನಂ'** ಮಹಾಕಾವ್ಯವನ್ನು ಅಧ್ಯಯನ ಮಾಡತೊಡಗಿದಾಗ ಅದಕ್ಕಿಂತ ಮುಂಚಿತವಾಗಿ ರಚನೆಯಾಗಿದ್ದ ಕೃತಿಗಳನ್ನು ಅಧ್ಯಯನಕ್ಕೆ ತೊಡಗಿಸುವುದು ಶಾಸ್ತ್ರ ಸಾಹಿತ್ಯದ ಆರೋಪಿತ ಕ್ರಮವಾಗಿದೆ. ವಾಲ್ಮೀಕಿ ರಾಮಾಯಣದಿಂದ ಹಿಡಿದು **'ಭುವನೈಕ ರಾಮಾಭ್ಯುದಯ'** (ರಾಮಾಯಣದ ಕಥಾವಸ್ತುವನ್ನು ಒಳಗೊಂಡಂತಹ ಕೃತಿ ಆದರೆ ಉಪಲಬ್ದವಿಲ್ಲದ್ದು), **'ರಾಮಚಂದ್ರಚರಿತ ಪುರಾಣ'**, ತೊರವೆ ನರಹರಿಯ **'ತೊರವೆ ರಾಮಾಯಣ'**, ಮುದ್ದಣ್ಣದ **'ರಾಮಾಶ್ವಮೇಧ'** ಮತ್ತು **'ಶ್ರೀರಾಮ ಪಟ್ಟಾಭಿಷೇಕ'** ಕೃತಿಗಳು ಇಲ್ಲಿ ಅಧ್ಯಯನದ ಮುಖ್ಯ ಆಕರ ವಸ್ತುಗಳಾಗುತ್ತವೆ.

ಸೃಜನಶೀಲ ಸಾಹಿತ್ಯದ ಅಧ್ಯಯನವು ಪೂರ್ಣಗೊಳ್ಳಬೇಕಾದರೆ ಅವುಗಳಿಗೆ ಆಕರವಾಗಿರುವಂತಹ ಕೃತಿಗಳನ್ನು ಗಮನಿಸಬೇಕಾದದ್ದು ಅವಶ್ಯಕವಾದ ಕ್ರಮವಾಗಿದೆ. ಆದರೆ ಪ್ರವಾಸ ಸಾಹಿತ್ಯವನ್ನು ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಅದಕ್ಕೆ ಪೂರಕವಾದಂತಹ ಅಂಶಗಳು ಯಾವುದು? ಅವುಗಳು ಕೃತಿಯ ಮೇಲೆ ಬೀರಿರುವಂತಹ ಪ್ರಭಾವವು ಯಾವ ಬಗೆಯದು ಎಂಬ ಅಂಶವು ಕೂಡ ಇಲ್ಲಿ ಗಣನೀಯವಾಗಿ ಕಂಡು ಬರುತ್ತದೆ.

'ಯಾವುದೇ ವ್ಯಕ್ತಿಯು ಪ್ರವಾಸವನ್ನು ಕೈಗೊಂಡಾಗ ಆ ಸ್ಥಳವನ್ನು ಸಂದರ್ಶಿಸುವ ಸಂದರ್ಭದಲ್ಲಿ ಪೂರ್ವನಿರ್ಧಾರಿತ ದೃಷ್ಟಿಕೋನವಿಲ್ಲದೆ ಕಂಡದ್ದನ್ನು ಮೇಯುವ ತೊಂಡುದನಗಳಂತೆ ಇದ್ದಾಗ ಪ್ರವಾಸವು ಯಶಸ್ವಿಯಾಗುತ್ತದೆ ಮತ್ತು ಪ್ರವಾಸಿ ಆ ಸ್ಥಳದಲ್ಲಿ ಕಂಡಂತಹ ಎಲ್ಲಾ ಸೃಜನಶೀಲ ಅಂಶಗಳನ್ನು ತನ್ನ ಅನುಭವದ ಮೂಸೆಯಲ್ಲಿ ಸಂರಕ್ಷಿಸಿಕೊಳ್ಳಲು ಸಹಾಯಕವಾಗಬಹುದು'.

ಯಾವುದೇ ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಿದಂತಹ ಸಂದರ್ಭದಲ್ಲಿ ಆ ಕೃತಿ ಒಳಗೊಂಡಿರುವ ಅನ್ಯ ಜ್ಞಾನ ಶಿಸ್ತುಗಳು ಎಷ್ಟರ ಮಟ್ಟಿಗೆ ಆ ಕೃತಿಯ ಮೌಲ್ಯವನ್ನು ಹೆಚ್ಚಿಸುತ್ತವೆ ಎಂಬುದು ಕೂಡ ಮುಖ್ಯವಾದ ಸಂಗತಿಯಾಗಿದೆ. ಈ ಶಿಸ್ತಿನ ಮುಖಾಂತರ ಕೃತಿಯೊಂದರ ಒಳಹೊರಹುಗಳನ್ನು ಆಳವಾಗಿ ಅಧ್ಯಯನ ಮಾಡಬಹುದಾಗಿದೆ. ಈ ಮುಖಾಂತರವಾಗಿ ನಾನು ದೃಢೀಕರಿಸಲು ಹೊರಟಿರುವ ಸಂಗತಿಯೆಂದರೆ ಸಾಹಿತ್ಯಕ್ಕೆ ನೇರವಾಗಿ ಸಂಬಂಧಪಡುವ ಹಲವು ಜ್ಞಾನ ಶಾಖೆಗಳಿದ್ದು ಅವುಗಳಲ್ಲಿ ಇತಿಹಾಸ, ತತ್ವಶಾಸ್ತ್ರ, ತರ್ಕಶಾಸ್ತ್ರ, ಅರ್ಥಶಾಸ್ತ್ರ, ಮನಃಶಾಸ್ತ್ರ,

ಮನೋವಿಜ್ಞಾನ - ಹೀಗೆ ಹಲವಾರು ಅನ್ಯಜ್ಞಾನ ಶಿಸ್ತುಗಳು ಸಾಹಿತ್ಯದಲ್ಲಿ ತಮ್ಮ ಇರವನ್ನು ಆಗಾಗ ಭಿನ್ನಭಿನ್ನ ನೆಲೆಗಳಲ್ಲಿ ಸ್ಪಷ್ಟಪಡಿಸುತ್ತವೆ.

ಓದುಗನು ಈ ಮೇಲ್ಕಂಡ ಕೆಲವಾದರೂ ಅನ್ಯಜ್ಞಾನ ಶಿಸ್ತುಗಳ ಬಗ್ಗೆ ಪ್ರಾಥಮಿಕವಾದ ಮಾಹಿತಿಯನ್ನು ಹೊಂದಿದ್ದರೆ ಸಾಹಿತ್ಯಕ ಕೃತಿಯೊಂದಿಗೆ ಅಂತಃಸತ್ವವನ್ನು ತಿಳಿದುಕೊಳ್ಳುವಲ್ಲಿ ಸಫಲನಾಗಬಹುದು. ಇಲ್ಲದಿದ್ದರೇ ಏಕೀಕೃತ ನೆಲೆಯಲ್ಲಿ ಒಂದು ಕೃತಿಯನ್ನು ಗ್ರಹಿಸಿ ಆ ಕೃತಿಯ ಮೂಲಧಾತುವಿಗೆ ಧಕ್ಕೆಯನ್ನುಂಟು ಮಾಡಬಹುದು. ಇಂತಹ ಅಧ್ಯಯನದ ಕ್ರಮವು ನಮಗೆ ಹೆಚ್ಚಿನದ್ದೇನನ್ನೂ ಕೊಡಲಾರವು. ಬೇಂದ್ರೆಯವರ ಸಾಹಿತ್ಯವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಸಂಖ್ಯಾಶಾಸ್ತ್ರವು ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಅದೇ ರೀತಿ ನವ್ಯ ಸಾಹಿತ್ಯದ ಆದ್ಯಪ್ರವರ್ತಕರಾದ **ಗೋಪಾಲಕೃಷ್ಣ ಅಡಿಗ**ರ ಸಾಹಿತ್ಯವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ **ಗರುಡ ಪುರಾಣವು** ಮಹತ್ವದ ಸ್ಥಾನವನ್ನು ವಹಿಸುತ್ತವೆ. ಅದೇ ರೀತಿ ಒಂದು ಪ್ರವಾಸದ ಕೃತಿಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಆ ಸ್ಥಳ ಭೌಗೋಳಿಕ ಪರಿಸರ, ಪ್ರಾಕೃತಿಕ ಸ್ಥಿತಿ-ಗತಿ, ಪ್ರಾಗೈತಿಹಾಸಿಕ ಕಾಲಘಟ್ಟದ ವಿವರಗಳು ಕೂಡ ನನಗಿಲ್ಲಿ ಮುಖ್ಯವೆನಿಸುತ್ತವೆ. ಇಂತಹ ವಿವರಗಳ ಹಿನ್ನೆಲೆಯಲ್ಲಿ ಯಾವುದೇ ಕೃತಿಯನ್ನು (ಅಧ್ಯಯನ ವಸ್ತು ಮತ್ತು ಸ್ಥಳಗಳ ಮೇಲೆ ರಚನೆಯಾಗಿರುವಂತದ್ದು) ಅಧ್ಯಯನ ಮಾಡಿದರೆ ಅಂತಹ ಅಧ್ಯಯನವು ಹೆಚ್ಚಿನ ಹರಹನ್ನು ಹೊಂದಿರುತ್ತದೆ. ಇದಕ್ಕೆ ಉದಾಹರಣೆಯಾಗಿ ಗಮನಿಸುವುದಾದರೆ ತೇಜಸ್ವಿಯವರು ತಮ್ಮ ತಂದೆಯ ಬಗ್ಗೆ ಬರೆದ **'ಅಣ್ಣನ ನೆನಪು'** ಕೃತಿಯ ಭಾಗವಾದ 'ಯಾದೇವಿ ಸರ್ವ ಭೂತೇಷು'ವಿನಲ್ಲಿ ಕುವೆಂಪುರವರ ಭೋದನಾ ತರಗತಿಯ ವಿವರಗಳು ವಿಧಾನಗಳು ತಮ್ಮ ಬೋಧನೆಯಲ್ಲಿ ಅವರು ಬಳಸುತ್ತಿದ್ದ ಅನ್ಯಜ್ಞಾನ ಶಿಸ್ತುಗಳು, ವೈಜ್ಞಾನಿಕ ವಿಚಾರಗಳು, ಕ್ವಾಂಟಮ್ ಮೆಕ್ಯಾನಿಕ್ಸ್, ಪರಮಾಣು ಭೌತಶಾಸ್ತ್ರ, ತತ್ವಶಾಸ್ತ್ರ, ಮನಃಶಾಸ್ತ್ರ ಈ ವಿಷಯಗಳನ್ನು ಸಾಹಿತ್ಯದ ತರಗತಿಗಳ ಪಠ್ಯದ ಜೊತೆಯಲ್ಲಿಯೇ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರೂ ಇದನ್ನು ಹಿನ್ನೆಲೆಯಾಗಿಸಿಕೊಂಡು ತೇಜಸ್ವಿಯವರು ಹೇಳುವುದೆಂದರೆ "ಕುವೆಂಪುರವರ ತರಗತಿಗಳಲ್ಲಿ ಪಾಠ ಕೇಳುತ್ತಿದ್ದ ವಿದ್ಯಾರ್ಥಿಗಳಿಗೆ ಸಾಹಿತ್ಯದ ಜೊತೆಗೆ ಅನ್ಯಜ್ಞಾನ ಶಿಸ್ತುಗಳ ಕೊರತೆ ಇತ್ತು. ಹಾಗಾಗಿ ಕುವೆಂಪುರವರು ಚರ್ಚಿಸುತ್ತಿದ್ದ ವಿಷಯಗಳನ್ನು ಗಂಭೀರವಾಗಿ ಪರಿಗಣಿಸದೆ ತರಗತಿಗಳಲ್ಲಿ ಶುಷ್ಕವಾದ ಸಾಹಿತ್ಯದ ವಿದ್ಯಾರ್ಥಿಗಳೇ ಇರುತ್ತಿದ್ದರು". ಅಂದರೆ ಈ ಮೇಲಿನ ಖಂಡಿಕೆಯ ಮೂಲಕ ನಾನು ವ್ಯಕ್ತಪಡಿಸುತ್ತಿರುವ ಸಂಗತಿಯೇನೆಂದರೆ ಅಧ್ಯಯನಶೀಲ ವ್ಯಕ್ತಿಗೆ ಸಾಹಿತ್ಯದ ಜೊತೆಗೆ ಅನ್ಯಜ್ಞಾನ ಶಿಸ್ತುಗಳ ವ್ಯಾಪಕವಾದ ಅರಿವು ಸಹೃದಯನಿಗೆ ಇರಬೇಕಾದದ್ದು ಉಚಿತ. ಇಷ್ಟೆಲ್ಲಾ ವಿಚಾರಗಳ ಚರ್ಚೆಯ ಅಗತ್ಯತೆ ಕುರಿತಂತೆ ವಿವರಿಸುವುದಾದರೆ ಸಾಹಿತ್ಯ ಮತ್ತು ಅನ್ಯಜ್ಞಾನ ಶಿಸ್ತುಗಳ ಪೂರಕ ಸಂಬಂಧ ಸಂಶೋಧನೆಯಲ್ಲಿಯೂ ಕೂಡ ಪ್ರಮುಖವಾದ

ಪಾತ್ರವಹಿಸುತ್ತದೆ. ಸಾಹಿತ್ಯಕ್ಕೆ ಮೇಲೆ ತಿಳಿಸಿದ ಅನ್ಯಜ್ಞಾನ ಶಿಸ್ತುಗಳಲ್ಲಿ ನಿಕಟವಾದ ಸಂಬಂಧ ಮತ್ತು ಸಂಪರ್ಕವನ್ನು ಹೊಂದಿರುವುದು ಕೇವಲ ಇತಿಹಾಸದ ಕ್ಷೇತ್ರ ಮಾತ್ರ.

ಪ್ರವಾಸ ಸಾಹಿತ್ಯ ಓದಿನ ಮೂಲಕ ಈ ವರೆಗೆ ಜಗತ್ತಿನ ಅನೇಕ ದೇಶಗಳನ್ನು ಸುತ್ತಾಡಿ ಬಂದಂತಾಯ್ತು. ಪ್ರತಿಯೊಬ್ಬ ಲೇಖಕರದ್ದು ವಿಭಿನ್ನ ದೃಷ್ಟಿಕೋನಗಳು. ಈ ಹಿನ್ನೆಲೆಯಲ್ಲಿ ಆಯಾ ದೇಶಗಳ ರಾಜಕೀಯ, ಸಾಮಾಜಿಕ, ಐತಿಹಾಸಿಕ, ಕಲೆ ಸಾಂಸ್ಕೃತಿಕ ಪರಿಚಯ ಮಾಡಿಕೊಂಡಂತಾಯ್ತು. ಭಾರತ ದೇಶದ ಉದ್ದಗಲ ಪ್ರವಾಸಿದ ಪ್ರವಾಸಿಗರ ಕಥನಗಳಲ್ಲಿ ನಮ್ಮ ಸಂಸ್ಕೃತಿಯ ಬಗೆಗಿನ ಹೆಚ್ಚಿನ ಪರಿಚಯ, ವಿವರಣೆಗಳಿದ್ದು ಅವುಗಳೆಲ್ಲದರ ಒಟ್ಟಾರೆಯಾದ ಚಿತ್ರಣ ನಮ್ಮ ಕಣ್ಣುದುರಿಗೆ ಕಟ್ಟುವಂತಿವೆ. ಹಾಗೆಯೇ ವಿದೇಶ ಪ್ರವಾಸ ರಚಿಸಿದ ಹೆಚ್ಚಿನ ಲೇಖಕರು ಅಲ್ಲಿಯ ಸಮೃದ್ಧತೆಯ ಬಗೆಗೆ ಹೊಗಳಿದ್ದಾರೆ. ಸ್ವರ್ಗದ ಅನುಭವ ಪಡೆದವು ಎಂದೂ ಹೇಳಿಕೊಂಡಿದ್ದಾರೆ. ಆ ಸ್ವರ್ಗ ಅಲ್ಲಿಯ ವಿಜ್ಞಾನ ತಂತ್ರಜ್ಞಾನದ ಪ್ರಗತಿಯಿಂದ ಪ್ರತಿಯೋರ್ವರನ್ನೂ ಮೂಕವಿಸ್ಮಿತರನ್ನಾಗಿ ಮಾಡಿದೆ. ಅಷ್ಟೇ ಅಲ್ಲದೆ ಆ ಜನರು ಶಿಸ್ತು, ಸಮಯ ಬದ್ಧತೆ, ವೃತ್ತಿಪರತೆ, ವಾರಾಂತ್ಯ ರಜಾದಿನಗಳನ್ನು ಸಂತೋಷವಾಗಿ ಕಳೆಯುವ ಪ್ರವೃತ್ತಿಯ ಬಗೆಗೆ ಮೆಚ್ಚಿಕೊಂಡಿದ್ದಾರೆ. ಕೆಲವರು ನಮ್ಮ ದೇಶದ ರಾಜಕೀಯ, ಸಾಮಾಜಿಕ ಪರಸ್ಥಿತಿಗಳ ಬಗೆಗೆ ಅಲ್ಲಲ್ಲಿ ಚರ್ಚಿಸಿಕೊಳ್ಳುತ್ತ ಬಯ್ದುಕೊಳ್ಳುತ್ತ ಬರೆದುಕೊಂಡು ಹೋದವರೂ ಇದ್ದಾರೆ. ಇರಲಿ, ಪ್ರವಾಸ ಸಾಹಿತ್ಯದ ಓದಿನಿಂದ ಒಟ್ಟಾರೆಯಾಗಿ ವಿಶ್ವದ ಅಧ್ಯಯನ ಮಾಡಲು ಸಹಾಯವಾಗುತ್ತದೆ.

ಇತ್ತೀಚಿಗೆ ಪ್ರವಾಸಕ್ಕೆ ಹೊರಡುವುದು ತೀರಾ ಸಲೀಸಾಗಿಬಿಟ್ಟಿದೆ. ಪ್ರವಾಸೋದ್ಯಮ ಇಲಾಖೆಯವರು ಜಗತ್ತಿನಾದ್ಯಂತ ಶಾಖೆಗಳನ್ನು ತೆಗೆದು ಪ್ರವಾಸಿಗರಿಗೆ ಸಾಕಷ್ಟು ಅನುಕೂಲತೆಗಳನ್ನು ಒದಗಿಸಿಕೊಡುತ್ತಿದ್ದಾರೆ. ಇಂದು ಅಮೆರಿಕೆಗೆ ಹೋಗಬೇಕೆನ್ನುವುದು ಬಹಳ ಸಹಜವಾಗಿಯೇ ನಮ್ಮ ನೆರೆಹೊರೆಯ ಊರಿಗೆ ಹೋದಂತೆಯೇ ಆಗುತ್ತಿದೆ. ಕೈ ತುಂಬಾ ಹಣ ಇರಬೇಕಷ್ಟೇ. ಪ್ರವಾಸಿ ಏಜೆಂಟರು ನಿಮ್ಮ ಮನೆಗೇ ಟಿಕೆಟ್ ತಂದು ಕೊಡುತ್ತಾರೆ.

ಪ್ರವಾಸ ಕೇವಲ ಮೋಜುಮೋಜಾಗಿ ಮಾಡಿಕೊಂಡು ಬರಬಾರದಷ್ಟೆ. ಅವಕಾಶಗಳನ್ನು ಬಳಸಿಕೊಂಡು ಆಯಾ ದೇಶಗಳ ರೀತಿ ನೀತಿಗಳನ್ನು ಪರಿಚಯಿಸಿಕೊಳ್ಳುತ್ತ ಜ್ಞಾನಾಭಿವೃದ್ಧಿ ಮಾಡಿಕೊಂಡು ಬರಬೇಕಾದುದು ಅತೀ ಮಹತ್ವ. ಆದರೆ ಕಂಡದ್ದನ್ನೆಲ್ಲಾ ದಾಖಲಿಸಬೇಕೆನ್ನುವ ಹುಚ್ಚು ಹಿಡಿದು ಬಿಟ್ಟರೆ ಅದು ಆ ಪ್ರದೇಶದ, ದೇಶದ ಕೈಪಿಡಿಯಾಗುತ್ತದೆಯೇ ಹೊರತು ಮೌಲ್ಯಯುತವಾದ ಸಾಹಿತ್ಯವಾಗುವುದಿಲ್ಲ.

# ಪರಾಮರ್ಶನ ಗ್ರಂಥ ಸೂಚಿ:


| | | |
|---|---|---|
| 1. | ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್ (೨೦೦೦) | ಕೆ.ಪಿ.ಪೂರ್ಣಚಂದ್ರ ತೇಜಸ್ವಿ |
| 2. | ಅಂಡಮಾನ್ ಕನಸು (೨೦೧೧) | ಡಾ.ರಹಮತ್ ತರೀಕೆರೆ. |
| 3. | ನಿಸರ್ಗ ಕನ್ಯೆ ಅಂಡಮಾನ್ (೧೯೯೬) | ಕೆ.ಟಿ.ಗಟ್ಟಿ. |
| 4. | ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ (೨೦೦೦) | ಡಾ.ವಿಜಯಾ ಸುಬ್ಬರಾಜ್ |
| 5. | ಕನ್ನಡ ಪ್ರವಾಸ ಸಾಹಿತ್ಯದ ಒಳನೋಟಗಳು (೨೦೦೯) | ಡಾ.ಲತಾ ಗುತ್ತಿ. |
| 6. | ಹವಳ ದ್ವೀಪಗಳಲ್ಲಿ | ತ್ರಿವೇಣಿ ಶಿವಕುಮಾರ್. |
| 7. | ನಿಸರ್ಗ ಸ್ವರ್ಗ ಅಂಡಮಾನ್ | ಹೋ. ನಾಗರತ್ನ. |
| 8. | ನಾ ಕಂಡ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು | ಡಿ.ಕೆ. ನಾಗರಾಜು. |
| 9. | ಕಾಲಾತೀತರ ದ್ವೀಪದಲ್ಲಿ | ದೇ.ನಾ.ಶ್ರೀನಿವಾಸ ಮೂರ್ತಿ. |
| 10. | ಪ್ರವಾಸ ಸಾಹಿತ್ಯ: ಒಂದು ಅಧ್ಯಯನ | ಮಲ್ಲೇಪುರಂ ಜಿ.ವೆಂಕಟೇಶ. |
| 11. | ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ | ಡಾ.ಎಸ್.ವಿದ್ಯಾಶಂಕರ್. |
| 12. | ಹೊಸಗನ್ನಡದ ಅರುಣೋದಯ | ಶ್ರೀನಿವಾಸ ಹಾವನೂರ. |
| 13. | ಪ್ರವಾಸ ಸಾಹಿತ್ಯ (೧೯೮೦) | ಎನ್.ಎಸ್.ತಾರಾನಾಥ್. |
| 14. | ಪ್ರವಾಸ ಸಾಹಿತ್ಯ (೧೯೬೩) | ಸಾ.ಶಿ.ಮರುಳಯ್ಯ. |
| 15. | ಕನ್ನಡದಲ್ಲಿ ಪ್ರವಾಸ ಸಾಹಿತ್ಯ | ಜಿ.ಎಸ್.ವಡಂಗಾವಿ. |
| 16. | ಹೊಸಗನ್ನಡ ಸಾಹಿತ್ಯ ಚರಿತ್ರೆ | ಎಲ್.ಎಸ್.ಶೇಷಗಿರಿ ರಾವ್. |
| 17. | ಕನ್ನಡದಲ್ಲಿ ಪ್ರವಾಸ ಸಾಹಿತ್ಯ (ಪ್ರಬುದ್ಧ ಕರ್ನಾಟಕ) | ಡಾ.ಬಿ.ಎ.ವಿವೇಕ ರೈ. |
| 18. | ಪುಸ್ತಕ ಪ್ರೀತಿ | ಟಿ.ಪಿ.ಅಶೋಕ |
| 19. | ಕನ್ನಡ ಸಾಹಿತ್ಯ ಕೋಶ | ರಾಜಪ್ಪ ದಳವಾಯಿ |
| 20. | ಕನ್ನಡ ವಿಶ್ವಕೋಶ | (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು) |
| 21. | ಭೂಗೋಳ ಸಂಗಾತಿ | ಭಾರತಿ ಪ್ರಕಾಶನ |
| 22. | The Andaman Story | N. Iqbal singh |
| 23. | Andaman And Nicobar Islands | Parinson |
| 24. | C.E. Studies in Island Of India | H.L. Adami |
| 25. | The Great Andamanese; Struggling for survival | G.P. Reddy |
| 26. | Memoirs of the Zoological survey of india for Andaman and nicobar Islands | Fr. Ad. De. Ropslorfe |

